# ಅನುಬಂಧ-02

## (ಚುಕ್ಕೆ ಗುರುತಿಲ್ಲದ ಪ್ರಸಂ. 3021)

2007 ರಿಂದ ಫೆಬ್ರವರಿ-2021 ರವರೆಗೆ ಕಲ್ಯಾಣ ಮತ್ತು ಸಾಮಾಜಿಕ ಭದ್ರತಾ ಸೌಲಭ್ಯಗಳಡಿಯಲ್ಲಿ ವಿತರಿಸಲಾದ ವರ್ಷವಾರು ಸಾಧನೆಯ ವಿವರ

| ಸೌಲಭ್ಯಗಳ ವಿವರ | 2007-08 ರಿಂದ 2012-13 ರವರೆಗೆ | | 2013-14 ರಿಂದ 2017-18 ರವರೆಗೆ | | 2018-19 | | 2019-20 | | 2020-21 | | ಒಟ್ಟು | |
|---|---|---|---|---|---|---|---|---|---|---|---|---|
| | ಸಂಖ್ಯೆ | ಮೊತ್ತ | ಸಂಖ್ಯೆ | ಮೊತ್ತ | ಸಂಖ್ಯೆ | ಮೊತ್ತ | ಸಂಖ್ಯೆ | ಮೊತ್ತ | ಸಂಖ್ಯೆ | ಮೊತ್ತ | ಸಂಖ್ಯೆ | ಮೊತ್ತ |
| ಶೈಕ್ಷಣಿಕ ಧನಸಹಾಯ | 10,896 | 27,679,600 | 227,489 | 1,038,126,292 | 95,637 | 533,279,365 | 125,403 | 724,788,917 | 100,168 | 735,327,640 | 559,593 | 3,059,201,814 |
| ಮದುವೆ ಧನಸಹಾಯ | 2,126 | 15,160,000 | 23,514 | 1,161,415,000 | 11,380 | 475,875,000 | 10,966 | 453,596,000 | 14,784 | 379,665,000 | 62,770 | 2,485,711,000 |
| ಅಂತ್ಯ ಸಂಸ್ಕಾರಕ್ಕೆ ವೆಚ್ಚ | 1,376 | 20,921,000 | 6,368 | 328,454,619 | 2,208 | 117,282,000 | 3,674 | 198,641,000 | 2,788 | 150,790,000 | 16,414 | 816,088,619 |
| ಪ್ರಮುಖ ವೈದ್ಯಕೀಯ | 233 | 8,104,269 | 2,272 | 63,982,540 | 530 | 12,829,473 | 778 | 22,668,307 | 1,125 | 41,473,646 | 4,938 | 149,058,235 |
| ಅಪಘಾತ ಪರಿಹಾರ | 195 | 14,777,740 | 185 | 25,574,260 | 58 | 13,781,000 | 116 | 31,957,000 | 123 | 20,559,000 | 677 | 106,649,000 |
| ಹೆರಿಗೆ ಧನಸಹಾಯ | 365 | 2,192,000 | 1,677 | 24,721,500 | 552 | 9,160,000 | 572 | 11,930,174 | 55 | 1,100,000 | 3,221 | 49,103,674 |
| ವೈದ್ಯಕೀಯ ವೆಚ್ಚ | 779 | 742,750 | 268 | 565,048 | 192 | 5,592,698 | 95 | 2,019,557 | 206 | 2,512,933 | 1,540 | 11,432,986 |
| ಉಪಕರಣ ಖರೀದಿಗೆ ಸಾಲ | 3 | 14,890 | 17 | 85,000 | 0 | 0 | 0 | 0 | 0 | 0 | 20 | 99,890 |
| ಪಿಂಚಣಿ ಸೌಲಭ್ಯ | 0 | 0 | 759 | 9,131,000 | 520 | 12,052,000 | 627 | 23,026,000 | 2,410 | 23,478,000 | 4,316 | 67,687,000 |
| ದುರ್ಬಲತೆ ಪಿಂಚಣಿ | 0 | 0 | 11 | 1,608,000 | 7 | 1,214,000 | 18 | 2,999,000 | 40 | 1,270,000 | 76 | 7,091,000 |
| ಕುಟುಂಬ ಪಿಂಚಣಿ | 0 | 0 | 0 | 0 | 0 | 0 | 0 | 0 | 11 | 17,000 | 11 | 17,000 |
| ಅನಿಲ ಭಾಗ್ಯ | 0 | 0 | 0 | 20,000,000 | 4,055 | 0 | 0 | 0 | 0 | 0 | 4,055 | 20,000,000 |
| ಶ್ರಮ ಸಾಮರ್ಥ್ಯ | 0 | 0 | 1,854 | 83,995,481 | 3,157 | 56,972,953 | 623 | 90,170,239 | 0 | 0 | 5,634 | 231,138,673 |
| ಬಿಎಂಟಿಸಿ ಬಸ್ ಪಾಸ್ | 0 | 0 | 0 | 52,479,000 | 1,602 | 0 | 2,996 | 594,300 | 45,281 | 384,878,550 | 49,879 | 437,951,850 |
| ವಸತಿ ಸೌಲಭ್ಯ | 0 | 0 | 0 | 0 | 0 | 0 | 5,129 | 760,000,000 | 0 | 0 | 5,129 | 760,000,000 |
| ಶಿಶು ಪಾಲನಾ ಕೇಂದ್ರಗಳ ಸ್ಥಾಪನೆ | 0 | 0 | 0 | 0 | 0 | 0 | 501 | 3,000,000 | 218 | 5,763,296 | 719 | 8,763,296 |
| ತಾಯಿ ಮಗು ಸಹಾಯ ಹಸ್ತ | 0 | 0 | 0 | 0 | 0 | 0 | 0 | 0 | 27 | 162,000 | 27 | 162,000 |
| ಒಟ್ಟು | **15,973** | **89,592,249** | **264,414** | **2,810,137,740** | **119,898** | **1,238,038,489** | **151,498** | **2,325,390,494** | **167,236** | **1,746,997,065** | **719,019** | **8,210,156,037** |

# ಕರ್ನಾಟಕ ವಿಧಾನಸಭೆ

| | | |
|---|---|---|
| **ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ** | : | 2584 |
| **ಮಾನ್ಯ ಸದಸ್ಯರ ಹೆಸರು** | : | ಶ್ರೀ ಯಶವಂತರಾಯಗೌಡ ವಿಠ್ಠಲಗೌಡ ಪಾಟೀಲ್ (ಇಂಡಿ) |
| **ಉತ್ತರಿಸುವ ಸಚಿವರು** | : | ಪ್ರವಾಸೋದ್ಯಮ, ಪರಿಸರ ಹಾಗೂ ಜೀವಿಶಾಸ್ತ್ರ, ಸಚಿವರು |
| **ಉತ್ತರಿಸುವ ದಿನಾಂಕ** | : | 18-03-2021 |

*******

| ಕ್ರ. ಸಂ. | ಪ್ರಶ್ನೆ | ಉತ್ತರ |
|---|---|---|
| ಅ) | ವಿಜಯಪುರ ಜಿಲ್ಲೆಯಲ್ಲಿ ಐತಿಹಾಸಿಕ ಹಿನ್ನೆಲೆಯುಳ್ಳ ಹಾಗೂ ವಿಶ್ವಪ್ರಖ್ಯಾತಿ ಪಡೆದಿರುವ ಪ್ರವಾಸಿ ಸ್ಥಳಗಳಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; (ಅವುಗಳ ವಿವರ ನೀಡುವುದು) | ಬಂದಿದೆ.<br>ಕರ್ನಾಟಕ ಪ್ರವಾಸೋದ್ಯಮ ನೀತಿ 2020-25ರಲ್ಲಿ ಅಧಿಸೂಚಿಸಿದಂತೆ ವಿಜಯಪುರ ಜಿಲ್ಲೆಯಲ್ಲಿ ಇಲಾಖೆಯಿಂದ ಗುರುತಿಸಿರುವ ಪ್ರವಾಸಿ ತಾಣಗಳ ವಿವರ ಕೆಳಕಂಡಂತಿದೆ. |

| | |
|---|---|
| ವಿಜಯಪುರ | ಗೋಲಗುಂಬಜ್ ಮತ್ತು ಇಬ್ರಾಹಿಂ ರೋಜಾ, ತೊರವಿ ಕನಮಡಿ, ಜಾಲಗೇರಿ ಮುಮ್ಮಟ್ಟಿ ಗುಡ್ಡ, ದ್ಯಾಬೇರಿ, ಕುಮಟಗಿ, ಉಪ್ಪಲದಿನ್ನಿ, ಹರಳಯ್ಯನ ಗುಂಡ, ಶೇಗುಣಶಿ, ತಿಕೋಟ |
| ಬಸವನ ಬಾಗೇವಾಡಿ | ಬಸವನ ಬಾಗೇವಾಡಿ, ಆಲಮಟ್ಟಿ ಆಣೆಕಟ್ಟು, ಇಂಗಳೇಶ್ವರ |
| ಮುದ್ದೇಬಿಹಾಳ | ಯಲಗೂರು, ತಂಗಡಗಿ, ಕೋಳೂರು |
| ಇಂಡಿ | ಹೊರ್ತಿ, ಹೀರೆರೂಗಿ, ಸಾಲೋಟಗಿ, ಹಲಸಂಗಿ |
| ಸಿಂದಗಿ | ಯಂಕಂಚಿ, ದೇವರಹಪ್ಪರಗಿ, ಚಟ್ಟರಕಿ, ಕಡ್ಲೆವಾಡ |

| ಕ್ರ. ಸಂ. | ಪ್ರಶ್ನೆ | ಉತ್ತರ |
|---|---|---|
| ಆ) | ಬಂದಿದ್ದಲ್ಲಿ, ಸದರಿ ಪ್ರವಾಸಿ ಸ್ಥಳಗಳನ್ನು ಅಂತರ್ ರಾಷ್ಟ್ರೀಯ ಮಟ್ಟದಲ್ಲಿ ಗುರುತಿಸಲು ಸರ್ಕಾರವು ಈವರೆಗೆ ಕೈಗೊಂಡಿರುವ ಕ್ರಮಗಳೇನು; | ಕರ್ನಾಟಕದಲ್ಲಿ ಪ್ರವಾಸೋದ್ಯಮವನ್ನು ರಾಷ್ಟ್ರೀಯ ಹಾಗೂ ಅಂತರರಾಷ್ಟ್ರೀಯ ಮಟ್ಟದಲ್ಲಿ ಪ್ರಚಾರಪಡಿಸುವ ಸಂಬಂಧ ಹಾಗೂ ಕರ್ನಾಟಕದ ಕಲೆ, ಸಾಹಿತ್ಯ ಮತ್ತು ಸಾಂಸ್ಕೃತಿಕ ಪರಂಪರೆಯನ್ನು ಪರಿಚಯಿಸುವ ಅಂಗವಾಗಿ ಅಂತರ್ ರಾಷ್ಟ್ರೀಯ ಮಟ್ಟದಲ್ಲಿ ಪ್ರವಾಸಿ ಮೇಳಗಳು ಹಾಗೂ ಟ್ರಾವೆಲ್ ಮಾರ್ಟ್‌ಗಳಲ್ಲಿ ಸಕ್ರಿಯವಾಗಿ ಭಾಗವಹಿಸಿ, ಪ್ರವಾಸಿ ತಾಣಗಳ ಬಗ್ಗೆ ಪ್ರಚಾರ ನೀಡಲಾಗುತ್ತಿದೆ ಹಾಗೂ ರೋಡ್‌ಶೋಗಳನ್ನು ಸಹ ಆಯೋಜಿಸಲಾಗುತ್ತಿದೆ. ಪ್ರವಾಸಿ ಸಾಹಿತ್ಯಗಳ ಮುದ್ರಣ, ಸಾಮಾಜಿಕ ಜಾಲತಾಣಗಳಲ್ಲಿ ಪ್ರಚಾರ ಕಾರ್ಯಕ್ರಮಗಳನ್ನು ಹಮ್ಮಿಕೊಳ್ಳಲಾಗಿದೆ. |

| | | |
|---|---|---|
| ಇ) | ಸದರಿ ಸ್ಥಳಗಳಿಗೆ ಮೂಲಭೂತ ಸೌಕರ್ಯಗಳನ್ನು ಕಲ್ಪಿಸಿ, ಪ್ರವಾಸಿಗರನ್ನು ಆಕರ್ಷಿಸುವ ಅಥವಾ ಪ್ರವಾಸೋದ್ಯಮ ಸ್ಥಳವನ್ನಾಗಿ ಉತ್ತೇಜಿಸುವುದರ ಮೂಲಕ ಪ್ರವಾಸಿ ತಾಣಗಳ ಸದುಪಯೋಗ ಮಾಡಿಕೊಳ್ಳದಿರಲು ಕಾರಣಗಳೇನು; | ಸದರಿ ಗುರುತಿಸಿರುವ ಪ್ರವಾಸಿ ತಾಣಗಳ ಪೈಕಿ ಗೋಲ್ ಗುಂಬಜ್, ಇಬ್ರಾಹಿಂರೋಜಾ, ತೊರವಿ, ಕನಮಡಿ, ಕುಮಟಗಿ, ಉಪ್ಪಲದಿನ್ನಿ, ತಿಕೋಟ, ಬಸವನಬಾಗೇವಾಡಿ, ಆಲಮಟ್ಟಿ, ಇಂಗಳೇಶ್ವರ, ಯಲಗೂರು, ಕೋಳೂರು, ಹಿರೇರೂಗಿ, ಯಂಕಂಚಿ, ಸಾಲೋಟಗಿ ಸ್ಥಳಗಳಲ್ಲಿ ಪ್ರವಾಸಿಗರನ್ನು ಆಕರ್ಷಿಸಲು ಹಾಗೂ ಪ್ರವಾಸೋದ್ಯಮ ಸ್ಥಳವನ್ನಾಗಿ ಉತ್ತೇಜಿಸಲು ಯಾತ್ರಿನಿವಾಸ, ಡಾರ್ಮಿಟರಿ, ಸಂಪರ್ಕ ರಸ್ತೆ, ಕುಡಿಯುವ ನೀರಿನ ಸೌಲಭ್ಯ, ಶೌಚಾಲಯಗಳು ಹಾಗೂ ಸ್ನಾನಗೃಹಗಳ ನಿರ್ಮಾಣ ಮುಂತಾದ ಮೂಲಭೂತ ಸೌಕರ್ಯ ಕಾಮಗಾರಿಗಳನ್ನು ಕೈಗೊಂಡು ಪ್ರವಾಸಿ ತಾಣಗಳನ್ನು ಸದುಪಯೋಗ ಮಾಡಿಕೊಳ್ಳಲಾಗಿದೆ. |
| ಈ) | ಸದರಿ ಪ್ರವಾಸಿ ಸ್ಥಳಗಳ ಅಭಿವೃದ್ಧಿಗೆ ಹಾಗೂ ಅಂತರ್ ರಾಷ್ಟ್ರೀಯ ಮಟ್ಟದಲ್ಲಿ ಪ್ರವಾಸಿ ಸ್ಥಳಗಳನ್ನಾಗಿ ಪ್ರಖ್ಯಾತಗೊಳಿಸಲು ಸರ್ಕಾರ ಕೈಗೊಂಡಿರುವ ಕ್ರಮಗಳೇನು; (ವಿವರ ನೀಡುವುದು). | ಕರ್ನಾಟಕದಲ್ಲಿ ಪ್ರವಾಸೋದ್ಯಮವನ್ನು ರಾಷ್ಟ್ರೀಯ ಹಾಗೂ ಅಂತರರಾಷ್ಟ್ರೀಯ ಮಟ್ಟದಲ್ಲಿ ಕರ್ನಾಟಕದ ಕಲೆ, ಸಾಹಿತ್ಯ ಮತ್ತು ಸಾಂಸ್ಕೃತಿಕ ಪರಂಪರೆಯನ್ನು ಪರಿಚಯಿಸುವ ಅಂಗವಾಗಿ ಅಂತರರಾಷ್ಟ್ರೀಯ ಮಟ್ಟದಲ್ಲಿ ಪ್ರವಾಸಿಮೇಳಗಳು ಹಾಗೂ ಟ್ರಾವೆಲ್ ಮಾರ್ಟ್‌ಗಳಲ್ಲಿ ಸಕ್ರಿಯವಾಗಿ ಭಾಗವಹಿಸಿ, ಪ್ರವಾಸಿತಾಣಗಳ ಬಗ್ಗೆ ಪ್ರಚಾರ ನೀಡಲಾಗುತ್ತಿದೆ ಹಾಗೂ ರೋಡ್‌ಶೋಗಳನ್ನು ಸಹ ಆಯೋಜಿಸಲಾಗುತ್ತಿದೆ. ಪ್ರವಾಸಿ ಸಾಹಿತ್ಯಗಳ ಮುದ್ರಣ, ಸಾಮಾಜಿಕ ಜಾಲತಾಣಗಳಲ್ಲಿ ಪ್ರಚಾರ ಕಾರ್ಯಕ್ರಮಗಳನ್ನು ಹಮ್ಮಿಕೊಳ್ಳಲಾಗಿದೆ.<br><br>ಇದಲ್ಲದೇ, ಫ್ರೆಂಚ್, ಜರ್ಮನಿ, ಇಟಲಿ, ರಷ್ಯಾ ಮತ್ತು ಸ್ಪ್ಯಾನಿಷ್ ಭಾಷೆಗಳಲ್ಲಿ ಪ್ರವಾಸಿ ಮಡಿಕೆಗಳನ್ನು ತಯಾರಿಸಿ ಪ್ರಚಾರ ಪಡಿಸಲಾಗುತ್ತಿದೆ. |
| ಉ) | ಪ್ರವಾಸಿ ಮಾರ್ಗದರ್ಶಿ ಕೇಂದ್ರ ಹಾಗೂ ಸುಲಭವಾಗಿ ಗುರುತಿಸುವ ಪ್ರವಾಸಿತಾಣಗಳ ನಕ್ಷೆ ಸಿದ್ಧಪಡಿಸಲು ಸರ್ಕಾರ ಕೈಗೊಂಡ ಕ್ರಮಗಳೇನು? (ವಿವರ ನೀಡುವುದು) | ರಾಜ್ಯದಲ್ಲಿ ಪ್ರವಾಸಿಗರ ಅನುಕೂಲಕ್ಕಾಗಿ ಪ್ರಮುಖ ಪ್ರವಾಸಿತಾಣಗಳಲ್ಲಿ ಪ್ರವಾಸಿ ಮಾರ್ಗದರ್ಶಿ ಕೇಂದ್ರಗಳನ್ನು ಸ್ಥಾಪಿಸಿ, ಪ್ರವಾಸಿ ತಾಣಗಳನ್ನು ಸಂಪರ್ಕಿಸಲು ಬರುವ ಪ್ರವಾಸಿಗರಿಗೆ ಇಲಾಖೆಯಿಂದ ಹಾಗೂ ಜಿಲ್ಲಾಡಳಿತದ ಸಹಯೋಗದೊಂದಿಗೆ ಪ್ರವಾಸಿ ನಕ್ಷೆಗಳನ್ನು ಮುದ್ರಿಸಿ ಪ್ರವಾಸಿಗರಿಗೆ ಉಚಿತವಾಗಿ ನೀಡಲು ಕ್ರಮವಹಿಸಲಾಗಿದೆ. |

ಸಂಖ್ಯೆ: ಟಿಒಆರ್ 63 ಟಿಡಿವಿ 2021

( ಸಿ. ಪಿ. ಯೋಗೇಶ್ವರ )
ಪ್ರವಾಸೋದ್ಯಮ, ಪರಿಸರ
ಹಾಗೂ ಜೀವಿಶಾಸ್ತ್ರ, ಸಚಿವರು

# ಕರ್ನಾಟಕ ವಿಧಾನ ಸಭೆ

ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 2957
ಮಾನ್ಯ ಸದಸ್ಯರ ಹೆಸರು : ಶ್ರೀ ಮುನಿಯಪ್ಪ ವಿ. (ಶಿಡ್ಲಘಟ್ಟ)
ಉತ್ತರಿಸುವ ದಿನಾಂಕ : 18.03.2021
ಉತ್ತರಿಸುವ ಸಚಿವರು : ಪ್ರವಾಸೋದ್ಯಮ, ಪರಿಸರ ಮತ್ತು ಜೀವಿಶಾಸ್ತ್ರ ಸಚಿವರು.

| ಕ್ರ. ಸಂ. | ಪ್ರಶ್ನೆ | ಉತ್ತರ |
|---|---|---|
| ಅ) | ಶಿಡ್ಲಘಟ್ಟ ವಿಧಾನಸಭಾ ಕ್ಷೇತ್ರ ವ್ಯಾಪ್ತಿಗೆ ಕಳೆದ ಮೂರು ವರ್ಷಗಳಿಂದ ಪ್ರವಾಸೋದ್ಯಮ ಇಲಾಖೆ ವತಿಯಿಂದ ಬಿಡುಗಡೆಗೊಳಿಸಿರುವ ಅನುದಾನವೆಷ್ಟು; | ಶಿಡ್ಲಘಟ್ಟ ತಾಲ್ಲೂಕಿಗೆ ಸಂಬಂಧಿಸಿದಂತೆ 2017-18ನೇ ಸಾಲಿನಲ್ಲಿ ರೂ.50.00 ಲಕ್ಷಗಳ ಅಂದಾಜು ವೆಚ್ಚದಲ್ಲಿ ಈ ಕೆಳಕಂಡ ಎರಡು ಕಾಮಗಾರಿಗಳನ್ನು ಕೈಗೆತ್ತಿಕೊಳ್ಳಲಾಗಿದೆ.<br>1. ಚಿಲಕಲನೇರ್ಪು ಹೋಬಳಿಯ ಕೋರ್ಲಪರ್ತಿ ಗ್ರಾಮಪಂಚಾಯತ್ ಕೂತಪಲ್ಲಿ ಹಳ್ಳಿಯ ಶ್ರೀ ಆಂಜನೇಯ ದೇವಾಲಯದ ಹತ್ತಿರ ರೂ.25.00 ಲಕ್ಷಗಳ ಅಂದಾಜು ವೆಚ್ಚದಲ್ಲಿ ಪ್ರವಾಸಿ ಮೂಲಭೂತ ಸೌಕರ್ಯ ಅಭಿವೃದ್ಧಿ ಕಾಮಗಾರಿ.<br>2. ಶಿಡ್ಲಘಟ್ಟ ತಾಲ್ಲೂಕಿನ ಬಶೆಟ್ಟಹಳ್ಳಿ ಹೋಬಳಿ ನಲ್ಲರಾಲಹಳ್ಳಿಯ ಶ್ರೀ ರಾಮಲಿಂಗೇಶ್ವರ ಬೆಟ್ಟದ ಶ್ರೀರಾಮಲಿಂಗೇಶ್ವರ ಸ್ವಾಮಿ ದೇವಸ್ಥಾನದ ಹತ್ತಿರ ರೂ.25.00 ಲಕ್ಷಗಳ ಅಂದಾಜು ವೆಚ್ಚದಲ್ಲಿ ಪ್ರವಾಸಿ ಮೂಲಭೂತ ಸೌಕರ್ಯ ಅಭಿವೃದ್ಧಿ ಕಾಮಗಾರಿ.<br>2018-19ನೇ ಸಾಲಿನಲ್ಲಿ ಹಾಗೂ 2019-20ನೇ ಸಾಲಿನಲ್ಲಿ ಶಿಡ್ಲಘಟ್ಟ ತಾಲ್ಲೂಕಿಗೆ ಯಾವುದೇ ಕಾಮಗಾರಿ ಮಂಜೂರಾಗಿರುವುದಿಲ್ಲ. |
| ಆ) | ಬಿಡುಗಡೆಗೊಳಿಸಿರುವ ಅನುದಾನದಲ್ಲಿ ಯಾವ ಯಾವ ಪ್ರವಾಸಿ ತಾಣಗಳನ್ನು ಅಭಿವೃದ್ಧಿಪಡಿಸಲಾಗಿದೆ. (ಸಂಪೂರ್ಣ ಮಾಹಿತಿ ಒದಗಿಸುವುದು) | |
| ಇ) | ಶಿಡ್ಲಘಟ್ಟ ವಿಧಾನಸಭಾ ಕ್ಷೇತ್ರದ ಪ್ರವಾಸಿ ತಾಣಗಳನ್ನು ಅಭಿವೃದ್ಧಿಪಡಿಸುವ ಪ್ರಸ್ತಾವನೆ ಸರ್ಕಾರದ ಮುಂದಿದೆಯೇ; | ಇಲ್ಲ. |
| ಈ) | ಪ್ರವಾಸಿ ತಾಣಗಳನ್ನು ಅಭಿವೃದ್ಧಿಪಡಿಸಲು ಅನುದಾನ ಯಾವಾಗ ಬಿಡುಗಡೆಗೊಳಿಸಲಾಗುತ್ತದೆ? | ಉದ್ಭವಿಸುವುದಿಲ್ಲ. |

ಸಂಖ್ಯೆ: ಟಿಓಆರ್ 52 ಟಿಡಿವಿ 2021.

(signature)

( ಸಿ.ಪಿ. ಯೋಗೇಶ್ವರ )
ಪ್ರವಾಸೋದ್ಯಮ,
ಪರಿಸರ ಮತ್ತು ಜೀವಿಶಾಸ್ತ್ರ ಸಚಿವರು.



**ಕರ್ನಾಟಕ ವಿಧಾನ ಸಭೆ**

| | | |
|---|---|---|
| 1) | ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ: | 3022 |
| 2) | ಮಾನ್ಯ ಸದಸ್ಯರ ಹೆಸರು: | ಶ್ರೀ ಖಾದರ್ ಯು.ಟಿ. (ಮಂಗಳೂರು) |
| 3) | ಉತ್ತರಿಸಬೇಕಾದ ದಿನಾಂಕ: | 18.03.2021 |
| 4) | ಉತ್ತರಿಸುವವರು: | ಮಾನ್ಯ ಉಪ ಮುಖ್ಯಮಂತ್ರಿಗಳು ಮತ್ತು ಉನ್ನತ ಶಿಕ್ಷಣ, ಐಟಿ/ಬಿಟಿ ಹಾಗೂ ಕೌಶಲ್ಯಾಭಿವೃದ್ಧಿ, ಉದ್ಯಮಶೀಲತೆ ಮತ್ತು ಜೀವನೋಪಾಯ ಸಚಿವರು. |

| ಕ್ರ.ಸಂ. | ಪ್ರಶ್ನೆ | ಉತ್ತರ |
|---|---|---|
| (ಅ) | **ವಿದ್ಯಾರ್ಥಿಗಳಲ್ಲಿ ಉದ್ಯಮಶೀಲತೆ, ಕೌಶಾಲ್ಯಾಭಿವೃದ್ಧಿಯ ಕುರಿತು ಹೆಚ್ಚಿನ ಅರಿವು ಮೂಡಿಸಲು ಸರ್ಕಾರವು ಕಾರ್ಯಕ್ರಮಗಳನ್ನು ರೂಪಿಸಿದೆಯೇ;** | "ಹೌದು" |
| (ಆ) | ರೂಪಿಸಿದಲ್ಲಿ ವಿವರ ನೀಡುವುದು? | ಕರ್ನಾಟಕ ಕೌಶಲ್ಯಾಭಿವೃದ್ಧಿ ನಿಗಮದ ವತಿಯಿಂದ ಈಗಾಗಲೇ ಮುಖ್ಯಮಂತ್ರಿಗಳ ಕೌಶಲ್ಯ ಕರ್ನಾಟಕ ಯೋಜನೆ ಹಾಗೂ ಪ್ರದಾನಮಂತ್ರಿಗಳ ಕೌಶಲ್ಯ ವಿಕಾಸ ಯೋಜನೆಗಳನ್ನು ಜಾರಿಗೊಳಿಸಲಾಗಿದ್ದು, ರಾಜ್ಯದ ನಿರುದ್ಯೋಗಿ ಯುವ ಜನತೆಗೆ ಉಚಿತ ಕೌಶಲ್ಯಾಧಾರಿತ ತರಬೇತಿಯನ್ನು ನೀಡಲಾಗುತ್ತಿದೆ. ರಾಜ್ಯದ ನಿರುದ್ಯೋಗಿ ಯುವ ಜನತೆ/ವಿದ್ಯಾರ್ಥಿಗಳಲ್ಲಿ ಉದ್ಯಮಶೀಲತೆ, ಕೌಶಲ್ಯಾಭಿವೃದ್ಧಿಯ ಕುರಿತು ಹೆಚ್ಚಿನ ಅರಿವು ಮೂಡಿಸಲು ಯೋಜನೆ ಉದ್ದೇಶಗಳನ್ನು ಕರ್ನಾಟಕ ರಾಜ್ಯ ರಸ್ತೆ ಸಾರಿಗೆ ಸಂಸ್ಥೆಗಳ ಬಸ್‌ಗಳಲ್ಲಿ ಜಾಹಿರಾತು ಅಳವಡಿಸುವ ಮುಖಾಂತರ ಜಾಹಿರಾತು ನೀಡಲು ಕ್ರಮ ಕೈಗೊಳ್ಳಲಾಗುತ್ತಿದೆ.<br><br>ಮುಂದುವರೆದು, ಕೌಶಲ್ಯಾಭಿವೃದ್ಧಿ, ಉದ್ಯಮಶೀಲತೆ ಮತ್ತು ಜೀವನೋಪಾಯ ಇಲಾಖೆಯು ವಿವಿಧ ಕೌಶಲ್ಯಾಧಾರಿತ ತರಬೇತಿ ಕಾರ್ಯಕ್ರಮಗಳ ಬಗ್ಗೆ ಸಾರ್ವಜನಿಕರಿಗೆ, ವಿಶೇಷವಾಗಿ ನಿರುದ್ಯೋಗಿ ಯುವಕರಿಗೆ ಮಾಹಿತಿ ನೀಡಲು ಕನ್ನಡ ಮತ್ತು ಆಂಗ್ಲ ಭಾಷೆಯಲ್ಲಿ ಮಾಸ ಪತ್ರಿಕೆಯನ್ನು ನವೆಂಬರ್-2020ರ ಮಾಹೆಯಿಂದ ಹೊರತರುತ್ತಿದ್ದು, ಈ ಮಾಸ ಪತ್ರಿಕೆಯನ್ನು ರಾಜ್ಯದ ಗ್ರಾಮ ಪಂಚಾಯಿತಿ ಕಛೇರಿ, ನಗರ ಸ್ಥಳೀಯ ಸಂಸ್ಥೆಗಳು ಜಿಲ್ಲಾ ಮತ್ತು ತಾಲ್ಲೂಕು ಸರ್ಕಾರಿ ಕಛೇರಿಗಳು, ತಾಂತ್ರಿಕ ಕಾಲೇಜುಗಳು, ಪದವಿ/ಪದವಿ ಪೂರ್ವ ಕಾಲೇಜುಗಳು, ಕೈಗಾರಿಕೆಯ ಸಂಘ/ಸಂಸ್ಥೆಗಳಿಗೆ ಉಚಿತವಾಗಿ ಕಳುಹಿಸಿಕೊಡಲಾಗುತ್ತಿದೆ ಹಾಗೂ ಸ್ಕಿಲ್ ಆನ್ ವೀಲ್ಸ್ ಕೌಶಲ್ಯಾಧಾರಿತ ಅಲ್ಪಾವಧಿ ತರಬೇತಿಯನ್ನು ತಾಲ್ಲೂಕು ಹಾಗೂ |

| | | |
|---|---|---|
| | | ಅತಿ ಹಿಂದುಳಿದ ಗ್ರಾಮೀಣ ಪ್ರದೇಶದ ಯುವಕ-ಯುವತಿಯರಿಗೆ ಕೌಶಲ್ಯ ತರಬೇತಿಯನ್ನು ಪಡೆಯಲು ಪೂರಕವಾಗುವ ಹಿನ್ನೆಲೆಯಲ್ಲಿ ಅವರಿರುವ ಸ್ಥಳಕ್ಕೇ ತೆರಳಿ ತರಬೇತಿ ನೀಡುವುದಕ್ಕೆ 'ಸಂಚಾರಿ ತರಬೇತಿ ಕೇಂದ್ರ' (ಸ್ಕಿಲ್ ಆನ್ ವೀಲ್ಸ್) ಒಂದು ವಿನೂತನ ಯೋಜನೆಯನ್ನು ಆರಂಭಿಸಲು ಕ್ರಮವಹಿಸಲಾಗುತ್ತದೆ. ಈ ಯೋಜನೆಯಡಿ ಸಂಚಾರಿ ವಾಹನವನ್ನು ತರಬೇತಿ ಕೇಂದ್ರವನ್ನು ಪರಿಗಣಿಸಿ 15-35ರ ವಯೋಮಾನದ ಯುವ ಜನತೆಗೆ ಕೌಶಲ್ಯ ತರಬೇತಿ ನೀಡುವುದು ಇದರ ಉದ್ದೇಶವಾಗಿದೆ. |

**ಸಂಖ್ಯೆ: ಕೌಉಜೀಇ 17 ಉಜೀಪ್ರ 2021**

(ಡಾ॥ ಸಿ.ಎನ್. ಅಶ್ವಥ್‌ನಾರಾಯಣ)
ಉಪ ಮುಖ್ಯಮಂತ್ರಿಗಳು ಮತ್ತು ಉನ್ನತ ಶಿಕ್ಷಣ,
ಐಟಿ/ಬಿಟಿ ಹಾಗೂ ಕೌಶಲ್ಯಾಭಿವೃದ್ಧಿ, ಉದ್ಯಮಶೀಲತೆ
ಮತ್ತು ಜೀವನೋಪಾಯ ಸಚಿವರು.

## ಕರ್ನಾಟಕ ವಿಧಾನಸಭೆ

| | |
|---|---|
| ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ | 2614 |
| ಮಾನ್ಯ ಸದಸ್ಯರ ಹೆಸರು | ಶ್ರೀ ವೆಂಕಟರೆಡ್ಡಿ ಮುದ್ನಾಳ್ (ಯಾದಗಿರಿ) |
| ಉತ್ತರಿಸಬೇಕಾದ ದಿನಾಂಕ | 18-03-2021 |
| ಉತ್ತರಿಸುವ ಸಚಿವರು | ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಹಾಗೂ ವೈದ್ಯಕೀಯ ಶಿಕ್ಷಣ ಸಚಿವರು |

| ಕ್ರ.ಸಂ. | ಪ್ರಶ್ನೆ | ಉತ್ತರ |
|---|---|---|
| ಅ | ಯಾದಗಿರಿ ವಿಧಾನಸಭಾ ಕ್ಷೇತ್ರದ ವ್ಯಾಪ್ತಿಯಲ್ಲಿರುವ ಸರ್ಕಾರಿ ಸಮುದಾಯ ಆರೋಗ್ಯ ಕೇಂದ್ರಗಳು ಹಾಗೂ ಪ್ರಾಥಮಿಕ ಆರೋಗ್ಯ ಕೇಂದ್ರ ಹಾಗೂ ಜಿಲ್ಲಾ ಆಸ್ಪತ್ರೆ ಯಾದಗಿರಿಯಲ್ಲಿ ವೈದ್ಯರು ಹಾಗೂ ಇತರೆ ಸಿಬ್ಬಂದಿಗಳ ಮತ್ತು ಉಪಕರಣಗಳು ಹಾಗೂ ಔಷಧಿಗಳ ಕೊರತೆ ಇರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; | ಯಾದಗಿರಿ ವಿಧಾನಸಭಾ ಕ್ಷೇತ್ರದ ವ್ಯಾಪ್ತಿಯಲ್ಲಿರುವ ಸರ್ಕಾರಿ ಸಮುದಾಯ ಆರೋಗ್ಯ ಕೇಂದ್ರಗಳು ಹಾಗೂ ಪ್ರಾಥಮಿಕ ಆರೋಗ್ಯ ಕೇಂದ್ರ ಹಾಗೂ ಜಿಲ್ಲಾ ಆಸ್ಪತ್ರೆಯಲ್ಲಿ ವೈದ್ಯರು ಮತ್ತು ಸಿಬ್ಬಂದಿಗಳ ಕೊರತೆ ಇರುತ್ತದೆ.<br><br>ಆದರೆ ಉಪಕರಣಗಳು ಹಾಗೂ ಔಷಧಿಗಳ ಕೊರತೆ ಇರುವುದಿಲ್ಲ ಕಾಲಕಾಲಕ್ಕೆ ಸರಬರಾಜು ಮಾಡಲಾಗುತ್ತಿದೆ |
| ಆ | ಬಂದಿದ್ದಲ್ಲಿ, ಸಾರ್ವಜನಿಕರಿಗೆ ಆರೋಗ್ಯ ಸಮಸ್ಯೆಯಾಗದ ನಿಟ್ಟಿನಲ್ಲಿ ಸರ್ಕಾರ ಕೈಗೊಂಡಿರುವ ಕ್ರಮಗಳೇನು? | ಇಲಾಖೆಯಲ್ಲಿ ವೈದ್ಯಾಧಿಕಾರಿಗಳು ಮತ್ತು ಸಿಬ್ಬಂದಿಗಳ ಕೊರತೆಯನ್ನು ನೀಗಿಸಲು ಕೈಗೊಂಡ ಕ್ರಮದ ವಿವರಗಳನ್ನು ಅನುಬಂಧದಲ್ಲಿರಿಸಿದೆ. |

**ಆಕುಕ 21 ಹೆಚ್ ಎಸ್ ಡಿ 2021.**

(ಡಾ. ಕೆ. ಸುಧಾಕರ್)
ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಹಾಗೂ
ವೈದ್ಯಕೀಯ ಶಿಕ್ಷಣ ಸಚಿವರು

ಅನುಬಂಧ

ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆಯಲ್ಲಿ ಖಾಲಿ ಇರುವ ತಜ್ಞರು/ ಸಾಮಾನ್ಯ ಕರ್ತವ್ಯ ವೈದ್ಯಾಧಿಕಾರಿ/ದಂತ ಆರೋಗ್ಯಾಧಿಕಾರಿ ಹುದ್ದೆಗಳನ್ನು ನೇರ ನೇಮಕಾತಿ ಮೂಲಕ ಭರ್ತಿ ಮಾಡುವ ಪ್ರಕ್ರಿಯೆ ಜಾರಿಯಲ್ಲಿದ್ದು, ವಿಶೇಷ ನೇಮಕಾತಿ ಸಮಿತಿಯಿಂದ ನೇರ ನೇಮಕಾತಿ ಮುಖಾಂತರ 1460 ತಜ್ಞ ವೈದ್ಯರುಗಳ ಹುದ್ದೆಗಳನ್ನು(636 ಬ್ಯಾಕ್‌ಲಾಗ್ ಒಳಗೊಂಡಂತೆ), 1265 ಸಾಮಾನ್ಯ ಕರ್ತವ್ಯ ವೈದ್ಯಾಧಿಕಾರಿಗಳ ಹುದ್ದೆಗಳನ್ನು(19 ಬ್ಯಾಕ್‌ಲಾಗ್ ಹುದ್ದೆಗಳು ಸೇರಿದಂತೆ) ಹಾಗೂ 90 ದಂತ ಆರೋಗ್ಯಾಧಿಕಾರಿಗಳ ಹುದ್ದೆಗಳನ್ನು (02 ಬ್ಯಾಕ್‌ಲಾಗ್ ಹುದ್ದೆಗಳು ಸೇರಿದಂತೆ) ಭರ್ತಿ ಮಾಡಲು ಈಗಾಗಲೇ ಅಧಿಸೂಚನೆ ಸಂಖ್ಯೆ:ಎಸ್‌ಆರ್‌ಸಿ/68/2019-20, ದಿ:10.09.2020 ನ್ನು ಹೊರಡಿಸಿ, ಅರ್ಹ ಅಭ್ಯರ್ಥಿಗಳಿಂದ ಅರ್ಜಿಯನ್ನು ಅಹ್ವಾನಿಸಲಾಗಿದ್ದು, ದಾಖಲೆಗಳ ಪರಿಶೀಲನೆ ಮುಗಿದಿರುತ್ತದೆ. ತಾತ್ಕಾಲಿಕ ಪಟ್ಟಿಯನ್ನು ಪ್ರಚುರಪಡಿಸುವ ಹಂತದಲ್ಲಿದೆ.

ಕಿರಿಯ ಆರೋಗ್ಯ ಸಹಾಯಕರು:

ಆಕುಕ ಇಲಾಖೆಯಲ್ಲಿ ಒಟ್ಟು 9850 ಕಿರಿಯ ಆರೋಗ್ಯ ಸಹಾಯಕ ಹುದ್ದೆಗಳು ಮಂಜೂರಾಗಿದ್ದು, ಖಾಲಿಯಿದ್ದ ಹುದ್ದೆಗಳ ಪೈಕಿ 2124 ಹುದ್ದೆಗಳನ್ನು 2018ನೇ ಸಾಲಿನಲ್ಲಿ ವಿಶೇಷ ನೇಮಕಾತಿ ನಿಯಮಗಳಡಿಯಲ್ಲಿ ಭರ್ತಿ ಮಾಡಲಾಗಿದ್ದು, ಒಟ್ಟಾರೆ 7123 ಹುದ್ದೆಗಳಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದು, ಪ್ರಸ್ತುತ 2727 ಹುದ್ದೆಗಳು ಖಾಲಿಯಿರುತ್ತವೆ.

ಶುಶ್ರೂಷಕರು:

ಆಕುಕ ಇಲಾಖೆಯಲ್ಲಿ ಒಟ್ಟು 8471 ಶುಶ್ರೂಷಕರ ಹುದ್ದೆಗಳು ಮಂಜೂರಾಗಿದ್ದು. ಖಾಲಿಯಿದ್ದ 4551 ಹುದ್ದೆಗಳ ಪೈಕಿ ಮೊದಲನೇ ಹಂತದಲ್ಲಿ 981 ಹುದ್ದೆಗಳನ್ನು ಭರ್ತಿ ಮಾಡಲಾಗಿರುತ್ತದೆ. ಜೊತೆಗೆ ಸರ್ಕಾರದ ಅಧಿಸೂಚನೆ ಸಂಖ್ಯೆ ಹೆಚ್‌ಎಫ್‌ಡಬ್ಲ್ಯೂ 550 ಹೆಚ್‌ಎಸ್‌ಹೆಚ್ 2016 ದಿನಾಂಕ 27.05.2017ರಲ್ಲಿ ಶುಶ್ರೂಷಕರು (ಡಿಪ್ಲಮೋ ನರ್ಸಿಂಗ್)-889 ಹುದ್ದೆಗಳಿಗೆ ರಾಜ್ಯವಲಯದಡಿಯಲ್ಲಿ ಕಾರ್ಯನಿರ್ವಹಿಸುತ್ತಿರುವ ಗುತ್ತಿಗೆ ಶುಶ್ರೂಷಕರುಗಳಿಗೆ ಕೃಪಾಂಕ ಮತ್ತು ವಯೋಮಿತಿ ಸಡಿಲಿಕೆ ಸೌಲಭ್ಯಗಳನ್ನು ನೀಡಿ ಸರ್ಕಾರವು ವಿಶೇಷ ನೇಮಕಾತಿ ನಿಯಮಗಳನ್ನು ರಚಿಸಿ ದಿನಾಂಕ:16.07.2020ರಲ್ಲಿ ಅಂತಿಮ ಆಯ್ಕೆಪಟ್ಟಿಯನ್ನು ಪ್ರಚುರ ಪಡಿಸಲಾಗಿದ್ದು, ಅಂತಿಮ ಆಯ್ಕೆ ಪಟ್ಟಿಯಲ್ಲಿ ಆಯ್ಕೆಯಾದ ಅಭ್ಯರ್ಥಿಗಳ ಪೈಕಿ ನೈಜತೆ ವರದಿಗಳು ಸ್ವೀಕೃತವಾಗಿರುವ ಅಭ್ಯರ್ಥಿಗಳಿಗೆ ನೇಮಕಾತಿ ಆದೇಶವನ್ನು ನೀಡಲಾಗಿರುತ್ತದೆ. ಪ್ರಸ್ತುತ 5790 ಹುದ್ದೆಗಳಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದು, 2681 ಹುದ್ದೆಗಳು ಖಾಲಿಯಿರುತ್ತವೆ. ಇದರ ಜೊತೆಗೆ 5778 ಶುಶ್ರೂಷಕರನ್ನು ಎನ್.ಹೆಚ್.ಎಂ. ಮುಖಾಂತರ ಗುತ್ತಿಗೆ ಆಧಾರದ ಮೇಲೆ ನೇಮಿಸಿಕೊಳ್ಳಲಾಗಿದೆ.

ಫಾರ್ಮಾಸಿಸ್ಟ್, ಕ್ಷ-ಕಿರಣ ತಂತ್ರಜ್ಞರು ಹಾಗೂ ಕಿರಿಯ ಪ್ರಯೋಗ ಶಾಲಾ ತಂತ್ರಜ್ಞರ ಹುದ್ದೆಗಳನ್ನು ಭರ್ತಿ ಮಾಡುವ ಬಗ್ಗೆ:

ಆಕುಕ ಇಲಾಖೆಯಲ್ಲಿ 2932 ಫಾರ್ಮಾಸಿಸ್ಟ್ ಹುದ್ದೆಗಳು ಮಂಜೂರಾಗಿದ್ದು, 1974 ಹುದ್ದೆಗಳಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದಾರೆ. ಹಾಗೂ 2411 ಕಿರಿಯ ಪ್ರಯೋಗ ಶಾಲಾ ತಂತ್ರಜ್ಞರ ಹುದ್ದೆಗಳು ಮಂಜೂರಾಗಿದ್ದು, 1821 ಹುದ್ದೆಗಳಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದಾರೆ. ಸರ್ಕಾರದ ಪತ್ರ ಸಂಖ್ಯೆ: ಆಕುಕ 709 ಹೆಚ್‌ಎಸ್‌ಎಂ 2017, ದಿನಾಂಕ:03.08.2019ರಲ್ಲಿ ಇಲಾಖೆಯಲ್ಲಿ ಪ್ರಸ್ತುತ ಖಾಲಿ ಇರುವ ಫಾರ್ಮಾಸಿಸ್ಟ್, ಕ್ಷ-ಕಿರಣ ತಂತ್ರಜ್ಞರು ಹಾಗೂ ಕಿರಿಯ ಪ್ರಯೋಗ ಶಾಲಾ ತಂತ್ರಜ್ಞರ ಹುದ್ದೆಗಳನ್ನು ಆರ್ಥಿಕ ಇಲಾಖೆ ಟಿಪ್ಪಣಿ ಸಂಖ್ಯೆ: ಆಇ 843 ವೆಚ್ಚ-5/2018, ದಿನಾಂಕ:26.07.2019ರಲ್ಲಿ ನೀಡಿರುವ ಸಹಮತಿ ಪ್ರಕಾರ ಈ ಕೆಳಕಂಡಂತೆ ಭರ್ತಿ ಮಾಡಲು ಅನುಮೋದನೆಯನ್ನು ನೀಡಿರುತ್ತಾರೆ.

--2

| Sl. No. | Designation | No. of Posts | | | | |
|---|---|---|---|---|---|---|
| | | 2019-20 | | 2020-21 | | Total |
| | | Regular | Outsource | Regular | Outsource | |
| 01. | Jr. Lab Technician | 150 | 150 | – | – | 300 |
| 02. | X-Ray Technician | 08 | – | – | – | 08 |
| 03. | Pharmacist | 200 | 200 | 200 | 200 | 800 |

ಸರ್ಕಾರದ ಆದೇಶದ ಪ್ರಕಾರ ಹೊರ ಗುತ್ತಿಗೆ ಆಧಾರದ ಮೇಲೆ 150 ಕಿರಿಯ ವೈದ್ಯಕೀಯ ಪ್ರಯೋಗಶಾಲಾ ತಂತ್ರಜ್ಞರು ಮತ್ತು 400 ಫಾರ್ಮಾಸಿಸ್ಟ್ ಹುದ್ದೆಗಳನ್ನು ಜಿಲ್ಲಾಧಿಕಾರಿಗಳ ಅಧ್ಯಕ್ಷತೆಯಲ್ಲಿ ಸಮಿತಿಯನ್ನು ರಚಿಸಿ ಭರ್ತಿ ಮಾಡಲು ಜಿಲ್ಲಾ ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಅಧಿಕಾರಿಗಳಿಗೆ ಸೂಚಿಸಲಾಗಿರುತ್ತದೆ. ಅಲ್ಲದೇ ಎನ್.ಹೆಚ್.ಎಂ. ಮುಖಾಂತರ 620 ಫಾರ್ಮಾಸಿಸ್ಟ್ ಹುದ್ದೆಗಳನ್ನು ಹಾಗೂ 1621 ಕಿರಿಯ ವೈದ್ಯಕೀಯ ಪ್ರಯೋಗಶಾಲಾ ತಂತ್ರಜ್ಞರನ್ನು ಗುತ್ತಿಗೆ ಆಧಾರದ ಮೇರೆಗೆ ನೇಮಕಾತಿ ಮಾಡಿಕೊಳ್ಳಲಾಗಿದೆ.

ಮುಂದುವರೆದು, ಇಲಾಖೆಯಲ್ಲಿ ಖಾಲಿ ಇರುವ 150 ಕಿರಿಯ ವೈದ್ಯಕೀಯ ಪ್ರಯೋಗ ಶಾಲಾ ತಂತ್ರಜ್ಞರು, 08 ಕ್ಷ-ಕಿರಣ ತಂತ್ರಜ್ಞರು ಹಾಗೂ 400 ಫಾರ್ಮಾಸಿಸ್ಟ್ ಹುದ್ದೆಗಳನ್ನು ನೇರ ನೇಮಕಾತಿ ಮುಖಾಂತರ ಭರ್ತಿ ಮಾಡಿಕೊಳ್ಳಲು ಪರಿಶೀಲಿಸಲಾಗುತ್ತಿದೆ.

ಹೈದ್ರಾಬಾದ್-ಕರ್ನಾಟಕ ಪ್ರದೇಶದಲ್ಲಿ ಖಾಲಿ ಇರುವ ಅರೆ ವೈದ್ಯಕೀಯ ಹುದ್ದೆಗಳನ್ನು ಭರ್ತಿ ಮಾಡುವ ಬಗ್ಗೆ.

ಹೈದ್ರಾಬಾದ್-ಕರ್ನಾಟಕ ಪ್ರದೇಶದಲ್ಲಿ ಖಾಲಿ ಇರುವ 293 ಅರೆ ವೈದ್ಯಕೀಯ ಹುದ್ದೆಗಳನ್ನು (ಗ್ರೂಪ್ 'ಬಿ' ವೃಂದದ 10 ಹುದ್ದೆಗಳು ಮತ್ತು ಗ್ರೂಪ್ 'ಸಿ' ವೃಂದದ 283 ಹುದ್ದೆಗಳು) ನೇರ ನೇಮಕಾತಿ ಮುಖೇನ ಭರ್ತಿ ಮಾಡಿಕೊಳ್ಳಲು ಪರಿಶೀಲಿಸಲಾಗುತ್ತದೆ.

# ಕರ್ನಾಟಕ ವಿಧಾನ ಸಭೆ

| | |
|---|---|
| ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ | 1553 |
| ಸದಸ್ಯರ ಹೆಸರು | ಶ್ರೀ ಕೌಜಲಗಿ ಮಹಾಂತೇಶ್ ಶಿವಾನಂದ್ (ಬೈಲಹೊಂಗಲ) |
| ಉತ್ತರಿಸಬೇಕಾದ ದಿನಾಂಕ | 18.03.2021 |
| ಉತ್ತರಿಸುವ ಸಚಿವರು | ಮಾನ್ಯ ಅರಣ್ಯ, ಕನ್ನಡ ಮತ್ತು ಸಂಸ್ಕೃತಿ ಸಚಿವರು |

| ಕ್ರ.ಸಂ | ಪ್ರಶ್ನೆ | ಉತ್ತರ |
|---|---|---|
| ಅ) | ಬೆಳಗಾವಿ ಜಿಲ್ಲೆ, ಬೈಲಹೊಂಗಲ ತಾಲ್ಲೂಕು, ಸ್ವಾತಂತ್ರ್ಯ ಹೋರಾಟಗಾರರ ಬೀಡಾಗಿದ್ದು "ಬೆಳವಡಿ ಮಲ್ಲಮ್ಮ" ದೇಶದಲ್ಲಿಯೇ ಪ್ರಪ್ರಥಮವಾಗಿ ಮಹಿಳಾ ಸೈನ್ಯವನ್ನು ಕಟ್ಟಿ ನಾಡು-ನುಡಿಗಾಗಿ ಹೋರಾಡಿದ ಸಂಗತಿ ಸರ್ಕಾರದ ಗಮನದಲ್ಲಿದೆಯೇ; | ಹೌದು |
| ಆ) | ಬೆಳವಡಿ ಮಲ್ಲಮ್ಮನ ಸವಿನೆನಪಿಗಾಗಿ ಪ್ರತಿ ವರ್ಷ ಸರ್ಕಾರದಿಂದಲೇ "ಬೆಳವಡಿ ಉತ್ಸವ" ಆಚರಿಸುತ್ತಿರುವುದು ನಿಜವೇ; | ಸರ್ಕಾರದಿಂದ ಬೆಳವಡಿ ಮಲ್ಲಮ್ಮ ಉತ್ಸವವನ್ನು 2014 ರಿಂದ ಆಚರಿಸಲಾಗುತ್ತಿದೆ. ಈ ಕೆಳಕಂಡಂತೆ ಅನುದಾನವನ್ನು ಜಿಲ್ಲಾಧಿಕಾರಿಗಳು, ಬೆಳಗಾವಿ ಇವರಿಗೆ ಬಿಡುಗಡೆ ಮಾಡಲಾಗಿರುತ್ತದೆ. |

| ಕ್ರ.ಸಂ. | ವರ್ಷ | ಬಿಡುಗಡೆಯಾದ ಅನುದಾನ |
|---|---|---|
| 1 | 2013-14 | 30.00 ಲಕ್ಷ |
| 2 | 2014-15 | 30.00 ಲಕ್ಷ |
| 3 | 2015-16 | 30.00 ಲಕ್ಷ |
| 4 | 2016-17 | 30.00 ಲಕ್ಷ |
| 5 | 2017-18 | 30.00 ಲಕ್ಷ |
| 6 | 2018-19 | 30.00 ಲಕ್ಷ |
| 7 | 2019-20 | 20.00 ಲಕ್ಷ |

| ಕ್ರ.ಸಂ | ಪ್ರಶ್ನೆ | ಉತ್ತರ |
|---|---|---|
| ಇ) | ಈ ವೀರ ಮಹಿಳೆಯ ಸವಿನೆನಪಿಗಾಗಿ ಬೆಳವಡಿ ಮಲ್ಲಮ್ಮನ ಹೆಸರಿನಿಂದ ಪ್ರಾಧಿಕಾರವನ್ನು ಸ್ಥಾಪಿಸುವಂತೆ ಈ ಭಾಗದ ಜನಪ್ರತಿನಿಧಿಗಳು ಹಾಗೂ ಸಾರ್ವಜನಿಕರು ಸರ್ಕಾರವನ್ನು ಒತ್ತಾಯಿಸುತ್ತಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; | ಬೆಳವಡಿ ಮಲ್ಲಮ್ಮನ ಹೆಸರಿನಲ್ಲಿ ಪ್ರಾಧಿಕಾರ ಸ್ಥಾಪಿಸುವ ಕುರಿತಂತೆ ಇಲಾಖೆಗೆ ಪ್ರಸ್ತಾವನೆ ಸ್ವೀಕೃತವಾಗಿರುವುದಿಲ್ಲ. |
| ಈ) | ಹಾಗಿದ್ದಲ್ಲಿ, ಕೂಡಲೇ ಬೆಳವಡಿ ಮಲ್ಲಮ್ಮನ ಹೆಸರಿನಿಂದ ಪ್ರಾಧಿಕಾರವನ್ನು ಸ್ಥಾಪಿಸಲು ಸರ್ಕಾರದಿಂದ ಕ್ರಮಕೈಗೊಳ್ಳಲಾಗುವುದೇ? | ಪ್ರಶ್ನೆ ಉದ್ಭವಿಸುವುದಿಲ್ಲ. |

ಸಂಖ್ಯೆ: ಕಸಂವಾ ೩೧ ಕಸನಿ ೨೦೨೧

(ಅರವಿಂದ ಲಿಂಬಾವಳಿ)

ಮಾನ್ಯ ಅರಣ್ಯ, ಹಾಗೂ ಕನ್ನಡ ಮತ್ತು ಸಂಸ್ಕೃತಿ
ಇಲಾಖೆ ಸಚಿವರು
ಕರ್ನಾಟಕ ಸರ್ಕಾರ

ಕರ್ನಾಟಕ ವಿಧಾನಸಭೆ

| | |
|---|---|
| ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ | 2771 |
| ಮಾನ್ಯ ಸದಸ್ಯರ ಹೆಸರು | ಶ್ರೀ ನಾಗನಗೌಡ ಕಂದ್‌ಕೂರ್ (ಗುರ್‌ಮಿಠ್ ಕಲ್) |
| ಉತ್ತರಿಸಬೇಕಾದ ದಿನಾಂಕ | 18-03-2021 |
| ಉತ್ತರಿಸುವ ಸಚಿವರು | ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಮತ್ತು ವೈದ್ಯಕೀಯ ಶಿಕ್ಷಣ ಸಚಿವರು |

| ಕ್ರ.ಸಂ. | ಪ್ರಶ್ನೆ | ಉತ್ತರ |
|---|---|---|
| ಅ | ಕೋವಿಡ್-19 ರ ಸಾಂಕ್ರಾಮಿಕ ರೋಗ ನಿಯಂತ್ರಣಕ್ಕಾಗಿ ಯಾದಗಿರಿ ಜಿಲ್ಲಾ ಆಸ್ಪತ್ರೆಯಲ್ಲಿ ಕರ್ತವ್ಯ ನಿರ್ವಹಿಸುತ್ತಿರುವ ಗುತ್ತಿಗೆ ಮತ್ತು ಹೊರ ಗುತ್ತಿಗೆ ಆಧಾರದಲ್ಲಿ ನೇಮಕವಾಗಿರುವ ಸಿಬ್ಬಂದಿಯವರನ್ನು ಕರ್ತವ್ಯದಿಂದ ಬಿಡುಗಡೆ ಮಾಡಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; | ಬಂದಿದೆ |
| ಆ | ಹಾಗಿದ್ದಲ್ಲಿ, ಗುತ್ತಿಗೆ ಮತ್ತು ಹೊರಗುತ್ತಿಗೆ ಆಧಾರದಲ್ಲಿ ನೇಮಕಗೊಂಡ ಸಿಬ್ಬಂದಿಯವರನ್ನು ಕರ್ತವ್ಯದಿಂದ ಬಿಡುಗಡೆ ಮಾಡಲು ಕಾರಣವೇನು; | 1) ಸರ್ಕಾರದ ಆದೇಶ ಸಂಖ್ಯೆ: ಆಕುಕ 1 ಸಿ&ಆರ್ 2020, ದಿನಾಂಕ: 30-03-2020 ಹಾಗೂ ಸರ್ಕಾರದ ಆದೇಶ ಸಂಖ್ಯೆ: ಆಕುಕ 339 ಹೆಚ್‌ಎಸ್‌ಹೆಚ್ 2020, ದಿನಾಂಕ: 30-06-2020 ರನ್ವಯವಾಗಿ 6 ತಿಂಗಳ ಅವಧಿಗೆ ಮಾತ್ರ ಗುತ್ತಿಗೆ/ಹೊರಗುತ್ತಿಗೆ ಆಧಾರದ ಮೇಲೆ ನೇಮಕಾತಿ ಮಾಡಿಕೊಳ್ಳಲಾಗಿತ್ತು.<br>2) ಸರ್ಕಾರದ ಆದೇಶ ಸಂಖ್ಯೆ: ಆಕುಕ 228 ಹೆಚ್‌ಎಸ್‌ಎಮ್ 2020, ದಿನಾಂಕ: 09-10-2020 ರನ್ವಯವಾಗಿ ಡಿಸೆಂಬರ್-2020 ರವರೆಗೆ ಮುಂದುವರೆಸಿ ಆದೇಶ ನೀಡಲಾಗಿತ್ತು.<br>ಜನವರಿ-2021 ತಿಂಗಳಲ್ಲಿ ಅವಧಿ ಮುಗಿದಿರುವ ಪ್ರಯುಕ್ತ ಗುತ್ತಿಗೆ ಮತ್ತು ಹೊರಗುತ್ತಿಗೆ ಸಿಬ್ಬಂದಿಯನ್ನು ದಿ: 31-01-2021 ರಂದು ಕರ್ತವ್ಯದಿಂದ ಬಿಡುಗಡೆ ಮಾಡಲಾಗಿತ್ತು.<br>3) ಸರ್ಕಾರದ ಆದೇಶ ಸಂಖ್ಯೆ: ಆಕುಕ 349 ಹೆಚ್‌ಎಸ್‌ಎಂ 2020, ದಿನಾಂಕ: 02-02-2021 ರನ್ವಯವಾಗಿ ಬಿಡುಗಡೆ ಮಾಡಲಾಗಿದ್ದ ಗುತ್ತಿಗೆ/ಹೊರಗುತ್ತಿಗೆ ನೌಕರರನ್ನು ಪುನ: ದಿನಾಂಕ: 05-02-2021 ರಿಂದ ಮುಂದುವರೆಸಲಾಗಿದೆ. |
| ಇ | ಈ ನೌಕರರು ಕೋವಿಡ್- 19 ರ ಸಂದಿಗ್ಧ ಪರಿಸ್ಥಿತಿಯಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದು, ಕೋವಿಡ್-19 ಸಾಂಕ್ರಾಮಿಕ ರೋಗವು ಕಡಿಮೆಯಾದ ನಂತರ ಅಂತಹ ನೌಕರರನ್ನು ಬಿಡುಗಡೆ ಮಾಡಿರುವುದು ಸರಿಯೇ; | |

| | | |
|---|---|---|
| ಈ | ಹಾಗಿದ್ದಲ್ಲಿ, ಕೋವಿಡ್ –19 ರ ಸಮಯದಲ್ಲಿ ಕರ್ತವ್ಯ ನಿರ್ವಹಿಸುತ್ತಿರುವ ಸಿಬ್ಬಂದಿಗಳಿಗೆ ಆರು ತಿಂಗಳ ವೇತನ ಹಾಗೂ ಇತರೆ ಭತ್ಯೆಗಳನ್ನು ಸಹ ನೀಡದಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; | ಫೆಬ್ರವರಿ–2021 ರವರೆಗೆ ಎಲ್ಲಾ ಸಿಬ್ಬಂದಿಗಳಿಗೆ ವೇತನ ಮತ್ತು ಭತ್ಯೆಗಳನ್ನು ಪಾವತಿಸಲಾಗಿದೆ. |
| ಉ | ಬಂದಿದ್ದಲ್ಲಿ, ಅವರುಗಳಿಗೆ ಸರ್ಕಾರವು ವೇತನ ಮತ್ತು ಭತ್ಯೆಗಳನ್ನು ಕೂಡಲೇ ಪಾವತಿ ಮಾಡಲು ಕ್ರಮವಹಿಸುವುದೆ; | |
| ಊ | ಸದರಿ ಗುತ್ತಿಗೆ ನೌಕರರುಗಳ ಕುಟುಂಬಗಳ ಜವಾಬ್ದಾರಿ ಇವರ ಮೇಲೆ ಇರುವುದರಿಂದ ಮಾನವೀತೆಯ ಹಿತದೃಷ್ಠಿಯಿಂದ ಸದರಿ ನೌಕರರನ್ನು ಮರುನೇಮಕ ಮಾಡಿಕೊಳ್ಳಲು ಸರ್ಕಾರಕ್ಕಿರುವ ತೊಂದರೆಗಳೇನು; | ಮರುನೇಮಕಾತಿ ಮಾಡಿಕೊಳ್ಳಲಾಗಿದೆ. |
| ಋ | ಪ್ರತಿನಿತ್ಯ ಖಾಸಗಿ ವಿದ್ಯನ್ಮಾನಗಳು ಹಾಗೂ ಪತ್ರಿಕೆಗಳಲ್ಲಿ ಕೋವಿಡ್ –19 ಹೆಚ್ಚಾಗುತ್ತಿದೆ ಎಂಬ ವಿಷಯ ಪ್ರಕಟವಾಗುತ್ತಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; | ಬಂದಿದೆ |
| ಎ | ಹಾಗಿದ್ದಲ್ಲಿ, ಸದರಿ ವೈದ್ಯರುಗಳು ಹಾಗೂ ಸಿಬ್ಬಂದಿಗಳನ್ನು ಕೋವಿಡ್–19 ರ ಸಾಂಕ್ರಾಮಿಕ ರೋಗ ನಿಯಂತ್ರಣಗೊಳ್ಳುವವರಿಗೆ ಮರು ನೇಮಕ ಮಾಡಿಕೊಳ್ಳಲು ಸರ್ಕಾರ ಕ್ರಮ ಕೈಗೊಳ್ಳುವುದೇ? | ಮರುನೇಮಕ ಮಾಡಿಕೊಳ್ಳಲಾಗಿದೆ ಹಾಗೂ ಕೋವಿಡ್–19 ರ ಸಾಂಕ್ರಾಮಿಕ ರೋಗ ನಿಯಂತ್ರಣಗೊಳ್ಳುವವರಿಗೆ ಗುತ್ತಿಗೆ/ಹೊರಗುತ್ತಿಗೆ ಆಧಾರದ ಮೇಲೆ ಕರ್ತವ್ಯ ನಿರ್ವಹಿಸುತ್ತಿರುವ ವೈದ್ಯರು/ಸಿಬ್ಬಂದಿಗಳ ಸೇವಾವಧಿಯನ್ನು ನಿಯಾಮಾನುಸಾರ ಅವಶ್ಯಕತೆಗೆ ಅನುಗುಣವಾಗಿ ಮುಂದುವರೆಸಲು ಪರಿಶೀಲಿಸಲಾಗುತ್ತಿದೆ. |

ಸಂಖ್ಯೆ: ಆಕುಕ ಆಕುಕ 106 ಹೆಚ್‌ಎಸ್‌ಎಂ 2021

(ಡಾ: ಕೆ. ಸುಧಾಕರ್)
ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಹಾಗೂ
ವೈದ್ಯಕೀಯ ಶಿಕ್ಷಣ ಸಚಿವರು

**ಕರ್ನಾಟಕ ವಿಧಾನ ಸಭೆ**

| | | | |
|---|---|---|---|
| 1. | ವಿಧಾನ ಸಭೆಯ ಸದಸ್ಯರ ಹೆಸರು | : | ಶ್ರೀಮತಿ ರೂಪಾಲಿ ಸಂತೋಷ್ ನಾಯ್ಕ್ (ಕಾರವಾರ) |
| 2. | ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ | : | 2046 |
| 2. | ಉತ್ತರಿಸಬೇಕಾದ ದಿನಾಂಕ | : | 18.03.2021 |
| 3. | ಉತ್ತರಿಸಬೇಕಾದ ಸಚಿವರು | : | ಮಾನ್ಯ ವೈದ್ಯಕೀಯ ಶಿಕ್ಷಣ ಸಚಿವರು |

| ಕ್ರ. ಸಂ | ಪ್ರಶ್ನೆಗಳು | ಉತ್ತರಗಳು |
|---|---|---|
| ಅ) | ಉತ್ತರ ಕನ್ನಡ ಜಿಲ್ಲೆಯಲ್ಲಿ ಸೂಪರ್ ಸ್ಪೆಷಾಲಿಟಿ ಆಸ್ಪತ್ರೆ ಇಲ್ಲದೇ, ಇರುವುದರಿಂದ ಇತ್ತೀಚಿಗೆ ಕೇಂದ್ರ ಸಚಿವರ ಪತ್ನಿಗೆ ಸೂಕ್ತ ಚಿಕಿತ್ಸೆ ಸಿಗದೇ ಮರಣ ಹೊಂದಿದ್ದು, ಕೇಂದ್ರ ಸಚಿವರಿಗೂ ಚಿಕಿತ್ಸೆ ಸಿಗದೇ ಹೋಗಿದ್ದು ಹಾಗೂ ಈ ಭಾಗದ ನೂರಾರು ಜನರಿಗೆ ತುರ್ತು ಚಿಕಿತ್ಸೆ ಸಿಗದೇ ಮರಣ ಹೊಂದುತ್ತಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ? | ಉತ್ತರ ಕನ್ನಡ ಜಿಲ್ಲೆಯಲ್ಲಿ ಸೂಪರ್ ಸ್ಪೆಷಾಲಿಟಿ ಆಸ್ಪತ್ರೆ ಇರುವುದಿಲ್ಲ. ಆದರೂ ಸಹ ಕಾರವಾರ ವೈದ್ಯಕೀಯ ವಿಜ್ಞಾನಗಳ ಬೋಧಕ ಅಸ್ಪತ್ರೆಯಲ್ಲಿ ಮಾನ್ಯ ಸಚಿವರಿಗೆ ಚಿಕಿತ್ಸೆ ನೀಡಲು ಎಲ್ಲಾ ರೀತಿಯ ವ್ಯವಸ್ಥೆಯನ್ನು ಮಾಡಿಕೊಳ್ಳಲಾಗಿತ್ತು. ಮಾನ್ಯ ಮಂತ್ರಿಗಳ ವಾಹನ ಚಾಲಕರು ಹಾಗೂ ಗನ್ ಮ್ಯಾನ್ ರವರನ್ನು ಕಿಮ್ಸ್, ಕಾರವಾರ ಆಸ್ಪತ್ರೆಗೆ ಚಿಕಿತ್ಸೆ ಸಲುವಾಗಿ ಕರೆ ತಂದಿದ್ದು, ಇವರಿಗೆ ಸಿ.ಟಿ. ಸ್ಕ್ಯಾನ್ ಹಾಗೂ ಇತರೆ ಚಿಕಿತ್ಸೆ ನೀಡಲಾಗಿ. ಯಾವುದೇ ಗಂಭೀರ ಗಾಯಗಳಿಲ್ಲದ ಕಾರಣ ಮತ್ತು ಇವರುಗಳ ಮನವಿಯಂತೆ ಗೋವಾದ ಮೆಡಿಕಲ್ ಕಾಲೇಜ್ ಆಸ್ಪತ್ರೆಗೆ ಕಿಮ್ಸ್, ಕಾರವಾರ ಸಂಸ್ಥೆಯ ಸುಸಜ್ಜಿತ ಆಂಬ್ಯುಲೆನ್ಸ್ ನಲ್ಲಿ ಕಳುಹಿಸಿಕೊಡಲಾಯಿತು. |
| ಆ) | ಬಂದಿದ್ದಲ್ಲಿ ಕಾರವಾರದಲ್ಲಿ ಹೊಸದಾಗಿ ಸೂಪರ್ ಸ್ಪೆಷಾಲಿಟಿ ಆಸ್ಪತ್ರೆಯ ಮಂಜೂರಾತಿಯಲ್ಲಿನ ವಿಳಂಬಕ್ಕೆ ಕಾರಣವೇನು; ಯಾವಾಗ ಆಸ್ಪತ್ರೆ ಮಂಜೂರು ಮಾಡಲಾಗುವುದು? (ಸಂಪೂರ್ಣ ವಿವರ ನೀಡುವುದು) | ಕಾರವಾರ ವೈದ್ಯಕೀಯ ವಿಜ್ಞಾನಗಳ ಸಂಸ್ಥೆಯಲ್ಲಿ ಸೂಪರ್ ಸ್ಪೆಷಾಲಿಟಿ ಆಸ್ಪತ್ರೆಯನ್ನು ಮಂಜೂರು ಮಾಡುವ ಪ್ರಸ್ತಾವನೆಯು ಸರ್ಕಾರದಲ್ಲಿ ಸ್ವೀಕೃತವಾಗಿರುತ್ತದೆ. ಸದರಿ ಪ್ರಸ್ತಾವನೆಯು ಸರ್ಕಾರದ ಪರಿಶೀಲನೆಯಲ್ಲಿದೆ. |

**ಸಂಖ್ಯೆ:** ಎಂಇಡಿ 192 ಎಂಪಿಎಸ್ 2021

(ಡಾ: ಕೆ. ಸುಧಾಕರ್)
ವೈದ್ಯಕೀಯ ಶಿಕ್ಷಣ ಸಚಿವರು.

# ಕರ್ನಾಟಕ ವಿಧಾನ ಸಭೆ

1. ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 3028
2. ಸದಸ್ಯರ ಹೆಸರು : ಶ್ರೀ ಬಂಡೆಪ್ಪ ಖಾಶೆಂಪುರ್ (ಬೀದರ್ ದಕ್ಷಿಣ)
3. ಉತ್ತರಿಸುವ ದಿನಾಂಕ : 18-03-2021
4. ಉತ್ತರಿಸುವ ಸಚಿವರು : ಮಾನ್ಯ ಪ್ರಾಥಮಿಕ ಮತ್ತು ಪ್ರೌಢ ಶಿಕ್ಷಣ ಹಾಗೂ ಸಕಾಲ ಸಚಿವರು

| ಕ್ರ ಸಂ | ಪ್ರಶ್ನೆ | ಉತ್ತರ |
|---|---|---|
| ಅ) | ರಾಜ್ಯದಲ್ಲಿ ಸಕಾಲ ಯೋಜನೆಯಡಿ ಸಾರ್ವಜನಿಕರಿಗೆ ಯಾವ ಯಾವ ಸೇವೆಗಳನ್ನು ಒದಗಿಸಲಾಗುತ್ತಿದೆ. | ಸಕಾಲ ಯೋಜನೆಯಡಿ ಸಾರ್ವಜನಿಕರಿಗೆ ಒದಗಿಸಲಾಗುತ್ತಿರುವ 98 ಇಲಾಖೆ/ಸಂಸ್ಥೆಗಳ 1025 ಸೇವೆಗಳ ಪಟ್ಟಿಯನ್ನು ಅನುಬಂಧದಲ್ಲಿ ಒದಗಿಸಲಾಗಿದೆ. |
| ಆ) | ಸಕಾಲ ಯೋಜನೆಯಡಿ ಎಷ್ಟು ಸರ್ಕಾರಿ ಹಾಗೂ ಗುತ್ತಿಗೆ ನೌಕರರು ಕಾರ್ಯನಿರ್ವಹಿಸುತ್ತಿದ್ದಾರೆ; (ವಿವರವಾದ ಮಾಹಿತಿ ಒದಗಿಸುವುದು) | ಸಕಾಲ ಮಿಷನ್ ನ ಕೇಂದ್ರ ಕಚೇರಿಯಲ್ಲಿ ಒಟ್ಟು 09 ಸರ್ಕಾರಿ ನೌಕರರು ಕಾರ್ಯನಿರ್ವಹಿಸುತ್ತಿದ್ದಾರೆ ಹಾಗೂ ಹೊರಗುತ್ತಿಗೆ ಆಧಾರದ ಮೇಲೆ ಒಟ್ಟು 09 ಸಿಬ್ಬಂದಿ ಕಾರ್ಯನಿರ್ವಹಿಸುತ್ತಿದ್ದಾರೆ.<br><br>ಅಲ್ಲದೆ ಸಕಾಲ ಮಿಷನ್ ವತಿಯಿಂದ ಪ್ರತಿ ಜಿಲ್ಲೆಯ ಜಿಲ್ಲಾಧಿಕಾರಿಗಳ ಕಚೇರಿಯಲ್ಲಿ ಹಾಗೂ ಬೃಹತ್ ಬೆಂಗಳೂರು ಮಹಾನಗರ ಪಾಲಿಕೆಯ ಆಯುಕ್ತರ ಕಚೇರಿಯಲ್ಲಿ ಒಟ್ಟು 31 ಜಿಲ್ಲಾ ಮಾಹಿತಿ ತಂತ್ರಜ್ಞಾನ ಸಮಾಲೋಚಕರು ಹಾಗೂ ಬೆಂಗಳೂರು ನಗರ ಜಿಲ್ಲೆಯ ವ್ಯಾಪ್ತಿಯಲ್ಲಿ 08 ದತ್ತಾಂಶ ನಮೂದಕರು ಕಾರ್ಯನಿರ್ವಹಿಸುತ್ತಿದ್ದಾರೆ.<br><br>ಇದನ್ನು ಹೊರತುಪಡಿಸಿ ಸಕಾಲ ಯೋಜನೆಯ ಅನುಷ್ಠಾನಕ್ಕಾಗಿ ಪ್ರತ್ಯೇಕವಾಗಿ ಸಿಬ್ಬಂದಿಯನ್ನು ನಿಯೋಜಿಸಿರುವುದಿಲ್ಲ. ಪ್ರತಿ ಕಚೇರಿಯಲ್ಲಿ ಈಗಾಗಲೇ ಲಭ್ಯವಿರುವ ಸಿಬ್ಬಂದಿ ಸಕಾಲ ಯೋಜನೆಯ ಅನುಷ್ಠಾನಕ್ಕಾಗಿ ಕಾರ್ಯನಿರ್ವಹಿಸುತ್ತಿರುತ್ತಾರೆ. |
| ಇ) | ಸದರಿ ಯೋಜನೆಗೆ ಪ್ರತಿ ವರ್ಷ ಸರ್ಕಾರ ಒದಗಿಸುತ್ತಿರುವ ಅನುದಾನ ಎಷ್ಟು. | ಸಕಾಲ ಯೋಜನೆಯ ಅನುಷ್ಠಾನಕ್ಕಾಗಿ 05 ವರ್ಷಗಳಲ್ಲಿ ಒದಗಿಸಿರುವ ಅನುದಾನ ಈ ಕೆಳಗಿನಂತಿದೆ. (see table below) |
| ಈ) | ಸಾರ್ವಜನಿಕರಿಗೆ ಸಕಾಲ ಯೋಜನೆಯಡಿ ಸೇವೆಗಳನ್ನು ಪರಿಣಾಮಕಾರಿಯಾಗಿ ನೀಡಲು ಹೆಚ್ಚುವರಿ ನೌಕರರನ್ನು ನಿಯೋಜಿಸಲು ಸರ್ಕಾರವು ಕ್ರಮ ಕೈಗೊಳ್ಳುವುದೇ? | ವಿವಿಧ ಇಲಾಖೆಗಳಲ್ಲಿ ಕಾರ್ಯ ನಿರ್ವಹಿಸುತ್ತಿರುವ ಸಿಬ್ಬಂದಿ ಸಕಾಲ ಯೋಜನೆಯನ್ನು ಅನುಷ್ಠಾನಗೊಳಿಸಲು ಕ್ಷಮತೆಯಿಂದ ಕಾರ್ಯನಿರ್ವಹಿಸುತ್ತಿದ್ದು, ಸಿಬ್ಬಂದಿ ಕೊರತೆಯಿಂದಾಗಿ ಕೆಲಸ ಕುಂಠಿತಗೊಂಡಿರುವ ಬಗ್ಗೆ ಯಾವುದೇ ದೂರುಗಳು ಬಂದಿರುವುದಿಲ್ಲ ಹಾಗೂ ಹೆಚ್ಚುವರಿ ಸಿಬ್ಬಂದಿಯನ್ನು ಒದಗಿಸುವ ಪ್ರಸ್ತಾವನೆ ಸರ್ಕಾರದ ಮುಂದೆ ಇರುವುದಿಲ್ಲ. |

| ವರ್ಷ | ಅನುದಾನದ ಮೊತ್ತ (ರೂ. ಕೋಟಿಗಳಲ್ಲಿ) |
|---|---|
| 2017-2018 | 4.25 |
| 2018-2019 | 4.25 |
| 2019-2020 | 3.54 |
| 2020-2021 | 4.75 |
| 2021-2022 | 3.64 |

ಸಂಖ್ಯೆ: ಸಿಆಸುಇ 24 ಎಸ್ ಎ ಎಂಎಸ್ 2021

(ಎಸ್. ಸುರೇಶ್ ಕುಮಾರ್)
ಪ್ರಾಥಮಿಕ ಮತ್ತು ಪ್ರೌಢಶಿಕ್ಷಣ
ಹಾಗೂ ಸಕಾಲ ಸಚಿವರು

ಕರ್ನಾಟಕ ವಿಧಾನ ಸಭೆ

ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 2964

ಮಾನ್ಯ ಸದಸ್ಯರ ಹೆಸರು : ಶ್ರೀ ಆನಂದ್ ಸಿದ್ದು ನ್ಯಾಮಗೌಡ (ಜಮಖಂಡಿ)

ಉತ್ತರಿಸಬೇಕಾದ ದಿನಾಂಕ : 18.03.2021

ಉತ್ತರಿಸುವ ಸಚಿವರು : ಮಾನ್ಯ ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಹಾಗೂ ವೈದ್ಯಕೀಯ ಶಿಕ್ಷಣ ಸಚಿವರು

| ಕ್ರ.ಸಂ | ಪ್ರಶ್ನೆ | ಉತ್ತರ |
|---|---|---|
| ಅ) | 2021–22ನೇ ವರ್ಷಕ್ಕೆ ಹೊಸದಾಗಿ ಪ್ರಾಥಮಿಕ ಆರೋಗ್ಯ ಕೇಂದ್ರಗಳನ್ನು ಮಂಜೂರು ಮಾಡುವ ಪ್ರಸ್ತಾವನೆ ಸರ್ಕಾರದ ಮುಂದಿದೆಯೇ; | 2021–22ನೇ ವರ್ಷಕ್ಕೆ ಹೊಸದಾಗಿ ಪ್ರಾಥಮಿಕ ಆರೋಗ್ಯ ಕೇಂದ್ರಗಳನ್ನು ಮಂಜೂರು ಮಾಡುವ ಪ್ರಸ್ತಾವನೆ ಸಧ್ಯಕ್ಕೆ ಸರ್ಕಾರದ ಮುಂದೆ ಇರುವುದಿಲ್ಲ. |
| ಆ) | ಜಮಖಂಡಿ ಮತಕ್ಷೇತ್ರದ ಆಲಗೂರ ಹಾಗೂ ಮೈಗೂರ ಗ್ರಾಮಗಳಲ್ಲಿ ಹೊಸದಾಗಿ ಪ್ರಾಥಮಿಕ ಆರೋಗ್ಯ ಕೇಂದ್ರಗಳನ್ನು ಮಂಜೂರು ಮಾಡುವ ಪ್ರಸ್ತಾವನೆ ಇದೆಯೇ; | ಜಮಖಂಡಿ ಮತಕ್ಷೇತ್ರದ ಆಲಗೂರ ಹಾಗೂ ಮೈಗೂರ ಗ್ರಾಮಗಳಲ್ಲಿ ಹೊಸದಾಗಿ ಪ್ರಾಥಮಿಕ ಆರೋಗ್ಯ ಕೇಂದ್ರಗಳನ್ನು ಮಂಜೂರು ಮಾಡುವ ಪ್ರಸ್ತಾವನೆ ಇರುವುದಿಲ್ಲ. |
| ಇ) | ಹಾಗಿದ್ದಲ್ಲಿ, ಯಾವಾಗ ಮಂಜೂರು ಮಾಡಲಾಗುವುದು? | ಉದ್ಭವಿಸುವುದಿಲ್ಲ. |

ಆಕುಕ 46 ಎಸ್‌ಬಿವಿ 2021.

(ಡಾ॥ ಕೆ. ಸುಧಾಕರ್)
ಆರೋಗ್ಯ ಮತ್ತು ಕುಟುಂಬ ಕಲ್ಯಾಣ
ಹಾಗೂ ವೈದ್ಯಕೀಯ ಶಿಕ್ಷಣ ಸಚಿವರು

# ಕರ್ನಾಟಕ ವಿಧಾನಸಭೆ

| | |
|---|---|
| ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ | 2803 |
| ಮಾನ್ಯ ಸದಸ್ಯರ ಹೆಸರು | ಶ್ರೀ ಜ್ಯೋತಿ ಗಣೇಶ್ ಜಿ.ಬಿ. (ತುಮಕೂರು ನಗರ) |
| ಉತ್ತರಿಸುವ ಸಚಿವರು | ಮಾನ್ಯ ಉಪ ಮುಖ್ಯಮಂತ್ರಿಗಳು (ಉನ್ನತ ಶಿಕ್ಷಣ ಇಲಾಖೆ) |
| ಉತ್ತರಿಸಬೇಕಾದ ದಿನಾಂಕ | 18.03.2021 |

| ಕ್ರ. ಸಂ | ಪ್ರಶ್ನೆ | ಉತ್ತರ |
|---|---|---|
| ಅ) | ತುಮಕೂರು ನಗರದ ಸರ್ಕಾರಿ ಪಾಲಿಟೆಕ್ನಿಕ್‌ಕಾಲೇಜುಕಟ್ಟಡವನ್ನು ಪ್ರತಿ ವಿಧಾನಸಭೆ, ಲೋಕಸಭೆ, ಪಂಚಾಯಿತಿ ಚುನಾವಣೆಗಳಲ್ಲಿ ಮಸ್ಟರಿಂಗ್, ಡಿಮಸ್ಟರಿಂಗ್‌ಗಾಗಿ ಬಳಕೆ ಮಾಡಲಾಗುತ್ತಿದ್ದು, ಆ ಸಂದರ್ಭದಲ್ಲಿ ಮತಪೆಟ್ಟಿಗೆಗಳನ್ನು ಭದ್ರಪಡಿಸುವುದಕ್ಕಾಗಿಕಿಟಕಿ, ಬಾಗಿಲುಗಳನ್ನೆಲ್ಲ ಬಂದ್ ಮಾಡಲಾಗುತ್ತಿರುವುದರಿಂದಕಟ್ಟಡದಕಿಟಕಿ, ಬಾಗಿಲು, ಗೋಡೆಗಳು ವಿದ್ಯುತ್ ವೈರಿಂಗ್ ಮತ್ತು 17 ಕಂಪ್ಯೂಟರ್‌ಗಳು ಸಂಪೂರ್ಣವಾಗಿ ಹಾಳಾಗಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ: | ಬಂದಿರುತ್ತದೆ. |
| ಆ) | ಇವುಗಳ ದುರಸ್ತಿ ಹೊಣೆಯಾರದ್ದು: | ಚುನಾವಣಾ ಕಾರ್ಯಕ್ಕೆ ಕಟ್ಟಡವನ್ನು ಉಪಯೋಗಿಸಿದ ಸಂದರ್ಭದಲ್ಲಿ ಆದ ಹಾನಿಯನ್ನು ಜಿಲ್ಲಾಧಿಕಾರಿಗಳು ದುರಸ್ಥಿಗೊಳಿಸಬೇಕಾಗಿರುತ್ತದೆ. |
| ಇ) | ಕಟ್ಟಡದ ಸಮಗ್ರ ದುರಸ್ತಿಗಾಗಿ ಸರ್ಕಾರತೆಗೆದುಕೊಂಡಕ್ರಮವೇನು? | ಸರ್ಕಾರಿ ಪಾಲಿಟೆಕ್ನಿಕ್ ತುಮಕೂರು ಇಲ್ಲಿ ದಿನಾಂಕ:10-03-2021ರಲ್ಲಿ ರೂ.200.00 ಲಕ್ಷಗಳ ಅಂದಾಜು ಮೊತ್ತದಲ್ಲಿ ಲೈಬ್ರರಿ ಕಟ್ಟಡ, ಹೆಚ್ಚುವರಿ ತರಗತಿ ಕೊಠಡಿಗಳು, ಇನ್ನಿತರೆ ಹೊಸ ಕಾಮಗಾರಿಗಳನ್ನು ಕೈಗೊಳ್ಳಲು ಸರ್ಕಾರದ ವತಿಯಿಂದ ಅನುಮತಿಯನ್ನು ನೀಡಲಾಗಿದೆ. |

ಸಂಖ್ಯೆ:ಇಡಿ 33 ವಿವಿಧ 2021

(ಡಾ: ಅಶ್ವಥ್ ನಾರಾಯಣ ಸಿ.ಎನ್.)
ಉಪ ಮುಖ್ಯಮಂತ್ರಿಗಳು
(ಉನ್ನತ ಶಿಕ್ಷಣ, ಐಟಿ & ಬಿಟಿ, ವಿಜ್ಞಾನ ಮತ್ತು ತಂತ್ರಜ್ಞಾನ, ಕೌಶಲ್ಯಾಭಿವೃದ್ಧಿ, ಉದ್ಯಮಶೀಲತೆ ಮತ್ತು ಜೀವನೋಪಾಯ ಇಲಾಖೆ)

# ಕರ್ನಾಟಕ ವಿಧಾನ ಸಭೆ

**ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ** : 2971
**ಸದಸ್ಯರ ಹೆಸರು** : ಶ್ರೀ ತುಕಾರಾಮ್ ಈ. (ಸಂಡೂರ್)
**ಉತ್ತರಿಸಬೇಕಾದ ದಿನಾಂಕ** : 18-03-2021
**ಉತ್ತರಿಸುವ ಸಚಿವರು** : ಪ್ರಾಥಮಿಕ ಮತ್ತು ಪ್ರೌಢಶಿಕ್ಷಣ ಹಾಗೂ ಸಕಾಲ ಸಚಿವರು

| ಕ್ರ.ಸಂ | ಪ್ರಶ್ನೆ | ಉತ್ತರ |
|---|---|---|
| ಅ. | ರಾಜ್ಯದಲ್ಲಿರುವ ಕಿರಿಯ ಮತ್ತು ಹಿರಿಯ ಸರ್ಕಾರಿ ಪ್ರಾಥಮಿಕ ಶಾಲೆಗಳಲ್ಲಿ ಶಿಕ್ಷಕರ ಕೊರತೆ ಇರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; | ಬಂದಿದೆ. |
| ಆ. | ಬಂದಿದ್ದಲ್ಲಿ, ಪ್ರತಿ ಜಿಲ್ಲೆಯಲ್ಲಿ ಎಷ್ಟು ಶಿಕ್ಷಕರ ಕೊರತೆ ಇದೆ. (ಜಿಲ್ಲಾವಾರು ವಿವರ ನೀಡುವುದು); | ಜಿಲ್ಲಾವಾರು ವಿವರ ಅನುಬಂಧದಲ್ಲಿ ಲಗತ್ತಿಸಿದೆ. |
| ಇ. | ಕೊರತೆ ಇರುವ ಶಿಕ್ಷಕರನ್ನು ನೇಮಿಸಲು ಸರ್ಕಾರ ಕೈಗೊಂಡಿರುವ ಕ್ರಮಗಳೇನು; | ಪ್ರಾಥಮಿಕ ಶಾಲೆಗಳಲ್ಲಿ ಖಾಲಿ ಇರುವ ಶಿಕ್ಷಕರ ಹುದ್ದೆಗಳನ್ನು ಪ್ರಸ್ತುತ ವೃಂದ ಮತ್ತು ನೇಮಕಾತಿ ನಿಯಮಗಳಿಗೆ ತಿದ್ದುಪಡಿಮಾಡಿ ಕರಡು ನಿಯಮಗಳನ್ನು ಪ್ರಕಟಿಸಿ, ಆಕ್ಷೇಪಣೆಗಳನ್ನು ಪಡೆಯಲಾಗಿದ್ದು, ಆಕ್ಷೇಪಣೆ ಮತ್ತು ಸಲಹೆಗಳನ್ನು ಪರಿಶೀಲಿಸಿ, ಅಂತಿಮ ಅಧಿಸೂಚನೆಯನ್ನು ಹೊರಡಿಸಿದ ನಂತರ ಖಾಯಂ ಶಿಕ್ಷಕರನ್ನು ನೇಮಕಾತಿ ಮಾಡಿಕೊಳ್ಳುವ ಬಗ್ಗೆ ಕ್ರಮಕೈಗೊಳ್ಳಲಾಗುವುದು.<br><br>ರಾಜ್ಯದಲ್ಲಿ ಕೋವಿಡ್-19 ಹಿನ್ನಲೆಯಲ್ಲಿ ಪ್ರಾಥಮಿಕ ಶಾಲೆಗಳು ಪೂರ್ಣ ಪ್ರಮಾಣದಲ್ಲಿ ಪ್ರಾರಂಭವಾಗಿರುವುದಿಲ್ಲ ಆದ್ದರಿಂದ ಪೂರ್ಣ ಪ್ರಮಾಣದಲ್ಲಿ ಪ್ರಾರಂಭವಾದ ನಂತರ ಅಗತ್ಯಕ್ಕನುಸಾರವಾಗಿ ಅತಿಥಿ ಶಿಕ್ಷಕರನ್ನು ನೇಮಕ ಮಾಡಿಕೊಳ್ಳಲು ಕ್ರಮಕೈಗೊಳ್ಳಲಾಗುವುದು.<br><br>ಸರ್ಕಾರಿ ಪ್ರೌಢಶಾಲೆಗಳಲ್ಲಿ ವಿಶೇಷ ವೃಂದದ 1,111 ಶಿಕ್ಷಕರ ಹುದ್ದೆಗಳನ್ನು (ದೈಹಿಕ ಶಿಕ್ಷಕರು, ಚಿತ್ರಕಲೆ ಮತ್ತು ಸಂಗೀತ) ಖಾಲಿ ಹುದ್ದೆಗಳನ್ನು ಭರ್ತಿ ಮಾಡಲು ಹಾಗೂ 5,500 ವಿವಿಧ ವೃಂದದ ಹುದ್ದೆಗಳನ್ನು ಭರ್ತಿ ಮಾಡಲು ಪರಿಶೀಲಿಸಲಾಗುತ್ತಿದೆ.<br><br>ಸರ್ಕಾರಿ ಪ್ರೌಢಶಾಲೆಗಳಲ್ಲಿ ಖಾಲಿ ಇರುವ ಸಹ ಶಿಕ್ಷಕರ ವೃಂದದ ಖಾಲಿ ಹುದ್ದೆಗಳ ಎದುರಾಗಿ ಪ್ರಸ್ತುತ ಸಾಲಿನ ಶೈಕ್ಷಣಿಕ ಸಾಲಿನ ಅಂತ್ಯದವರೆಗೆ 3473 ಅತಿಥಿ ಶಿಕ್ಷಕರನ್ನು ತಾತ್ಕಾಲಿಕವಾಗಿ ನೇಮಕಾತಿ ಮಾಡಿಕೊಳ್ಳಲು ಎಲ್ಲಾ ಉಪನಿರ್ದೇಶಕರುಗಳಿಗೆ ಸೂಚಿಸಲಾಗಿದೆ. |
| ಈ. | ಶಿಕ್ಷಕರನ್ನು ಯಾವಾಗ ಭರ್ತಿ ಮಾಡಲಾಗುವುದು? | |

**ಸಂಖ್ಯೆ**: ಇಪಿ 11 ಪಿಎಂಎ 2021

**(ಎಸ್. ಸುರೇಶ್‌ಕುಮಾರ್)**
ಪ್ರಾಥಮಿಕ ಮತ್ತು ಪ್ರೌಢಶಿಕ್ಷಣ
ಹಾಗೂ ಸಕಾಲ ಸಚಿವರು

ರಾಜ್ಯದ (ಕಲ್ಯಾಣ ಕರ್ನಾಟಕದ 06 ಜಿಲ್ಲೆಗಳು) ಸೇರಿದಂತೆ ಸರ್ಕಾರಿ ಪ್ರಾಥಮಿಕ ಶಾಲೆಗಳಲ್ಲಿ ಖಾಲಿ ಇರುವ ಪದವೀಧರ ಪ್ರಾಥಮಿಕ ಶಿಕ್ಷಕರ (6-8 ನೇ ತರಗತಿಗಳ) ಹುದ್ದೆಗಳ ಮಾಹಿತಿ ದಿನಾಂಕ 31.01.2021 ರಲ್ಲಿದ್ದಂತೆ

**ಅನುಬಂಧ-1**

| ಕ್ರಮ ಸಂಖ್ಯೆ | | ಖಾಲಿ ಹುದ್ದೆಗಳು | ಸೇವಾ ನಿರತರ ನೇಮಕಾತಿಗಾಗಿ ಶೇ 25 ರಷ್ಟು ಕಾಯ್ದಿರಿಸಬೇಕಾದ ಹುದ್ದೆಗಳು | ನೇರ ನೇಮಕಾತಿ ಹುದ್ದೆಗಳು |
|---|---|---|---|---|
| 1 | ಬೆಳಗಾವಿ | 933 | 233 | 700 |
| 2 | ಬಾಗಲಕೋಟೆ | 1290 | 323 | 967 |
| 3 | ವಿಜಯಪುರ | 1075 | 269 | 806 |
| 4 | ಕಲ್ಬುರ್ಗಿ | 1807 | 452 | 1355 |
| 5 | ಬೀದರ್ | 436 | 109 | 327 |
| 6 | ರಾಯಚೂರು | 1907 | 477 | 1430 |
| 7 | ಕೊಪ್ಪಳ | 1320 | 330 | 990 |
| 8 | ಗದಗ್ | 463 | 116 | 347 |
| 9 | ಧಾರವಾಡ | 508 | 127 | 381 |
| 10 | ಉತ್ತರ ಕನ್ನಡ | 87 | 22 | 65 |
| 11 | ಹಾವೇರಿ | 479 | 120 | 359 |
| 12 | ಬಳ್ಳಾರಿ | 762 | 191 | 571 |
| 13 | ಚಿತ್ರದುರ್ಗ | 470 | 118 | 352 |
| 14 | ದಾವಣಗೆರೆ | 1160 | 290 | 870 |
| 15 | ಶಿವಮೊಗ್ಗ | 712 | 178 | 534 |
| 16 | ಉಡುಪಿ | 356 | 89 | 267 |
| 17 | ಚಿಕ್ಕಮಗಳೂರು | 48 | 12 | 36 |
| 18 | ತುಮಕೂರು | 369 | 92 | 277 |
| 19 | ಕೋಲಾರ | 256 | 64 | 192 |
| 20 | ಬೆಂಗಳೂರು ದಕ್ಷಿಣ | 732 | 183 | 549 |
| 21 | ಬೆಂಗಳೂರು ಗ್ರಾಮಾಂತರ | 250 | 63 | 187 |
| 22 | ಮಂಡ್ಯ | 775 | 194 | 581 |
| 23 | ಹಾಸನ | 545 | 136 | 409 |
| 24 | ದಕ್ಷಿಣ ಕನ್ನಡ | 988 | 247 | 741 |
| 25 | ಕೊಡಗು | 238 | 60 | 178 |
| 26 | ಮೈಸೂರು | 942 | 236 | 706 |
| 27 | ಚಾಮರಾಜನಗರ | 521 | 130 | 391 |
| 28 | ಬೆಂಗಳೂರು ಉತ್ತರ | 317 | 79 | 238 |
| 29 | ಚಿಕ್ಕಬಳ್ಳಾಪುರ | 500 | 125 | 375 |
| 30 | ಚಿಕ್ಕೋಡಿ | 2119 | 530 | 1589 |
| 31 | ಮಧುಗಿರಿ | 416 | 104 | 312 |
| 32 | ರಾಮನಗರ | 452 | 113 | 339 |
| 33 | ಯಾದಗಿರಿ | 1942 | 486 | 1456 |
| 34 | ಸಿರ್ಸಿ | 641 | 160 | 481 |
| | ಒಟ್ಟು : | **25813** | **6458** | **19355** |

ನಿರ್ದೇಶಕರು (ಪ್ರಾಥಮಿಕ ಶಿಕ್ಷಣ)

ಸರ್ಕಾರಿ ಪ್ರೌಢ ಶಾಲೆಗಳಲ್ಲಿ ಜಿಲ್ಲಾವಾರು ಹುದ್ದೆಗಳ ಮಂಜೂರಾದ/ಕರ್ತವ್ಯ ನಿರ್ವಹಿಸುತ್ತಿರುವ/ಖಾಲಿ ಹುದ್ದೆಗಳ ವಿವರ

| 2202-00-102-0-62 HS | | | | 11.08.2020 |
|---|---|---|---|---|
| SL NO | DISTRICT | SANCTIONED | WORKING | VACANT |
| 1 | Belagavi | 1349 | 1184 | 165 |
| 2 | Bagalkote | 1670 | 1422 | 248 |
| 3 | vijayapura | 1370 | 1237 | 133 |
| 4 | Kalburgi | 2938 | 2620 | 318 |
| 5 | Bidar | 1852 | 1666 | 186 |
| 6 | Raichur | 1952 | 1541 | 411 |
| 7 | koppale | 1496 | 1177 | 319 |
| 8 | Gadag | 939 | 831 | 108 |
| 9 | Dharwad | 989 | 909 | 80 |
| 10 | Uttarkannada | 509 | 489 | 20 |
| 11 | Heveri | 1417 | 1326 | 91 |
| 12 | Bellary | 1994 | 1517 | 477 |
| 13 | Chitradurga | 1402 | 1348 | 54 |
| 14 | Dhavanageri | 2008 | 1959 | 49 |
| 15 | Shivamogga | 2124 | 2025 | 99 |
| 16 | Udupi | 1376 | 1305 | 71 |
| 17 | Chikkamagalur | 1491 | 1394 | 97 |
| 18 | Tumkur | 1702 | 1621 | 81 |
| 19 | Kolar | 1624 | 1513 | 111 |
| 20 | Bangalore South | 1105 | 1054 | 51 |
| 21 | Bangalore Rural | 901 | 884 | 17 |
| 22 | Mandya | 2607 | 2434 | 173 |
| 23 | Hasana | 2921 | 2713 | 208 |
| 24 | Dhakshina kannada | 1906 | 1732 | 174 |
| 25 | Kodagu | 601 | 563 | 38 |
| 26 | Mysore | 2766 | 2620 | 146 |
| 27 | Chamarajanagara | 1061 | 966 | 95 |
| 28 | Bangalore North | 806 | 789 | 17 |
| 29 | Chikkaballapura | 1356 | 1251 | 105 |
| 30 | Chikkodi | 1619 | 1203 | 416 |
| 31 | Madhugiri | 1169 | 1068 | 101 |
| 32 | Ramanagara | 1289 | 1221 | 68 |
| 33 | Yadagiri | 1256 | 1004 | 252 |
| 34 | Shirisi | 810 | 724 | 86 |
| | Grand Total | 52375 | 47310 | 5065 |

## ಕರ್ನಾಟಕ ವಿಧಾನ ಸಭೆ

**ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ** : 2971
**ಸದಸ್ಯರ ಹೆಸರು** : ಶ್ರೀ ತುಕಾರಾಮ್ ಈ. (ಸಂಡೂರ್)
**ಉತ್ತರಿಸಬೇಕಾದ ದಿನಾಂಕ** : 18-03-2021
**ಉತ್ತರಿಸುವ ಸಚಿವರು** : ಪ್ರಾಥಮಿಕ ಮತ್ತು ಪ್ರೌಢಶಿಕ್ಷಣ ಹಾಗೂ ಸಕಾಲ ಸಚಿವರು

| ಕ್ರ.ಸಂ | ಪ್ರಶ್ನೆ | ಉತ್ತರ |
|---|---|---|
| ಅ. | ರಾಜ್ಯದಲ್ಲಿರುವ ಕಿರಿಯ ಮತ್ತು ಹಿರಿಯ ಸರ್ಕಾರಿ ಪ್ರಾಥಮಿಕ ಶಾಲೆಗಳಲ್ಲಿ ಶಿಕ್ಷಕರ ಕೊರತೆ ಇರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; | ಬಂದಿದೆ. |
| ಆ. | ಬಂದಿದ್ದಲ್ಲಿ, ಪ್ರತಿ ಜಿಲ್ಲೆಯಲ್ಲಿ ಎಷ್ಟು ಶಿಕ್ಷಕರ ಕೊರತೆ ಇದೆ. (ಜಿಲ್ಲಾವಾರು ವಿವರ ನೀಡುವುದು); | ಜಿಲ್ಲಾವಾರು ವಿವರ ಅನುಬಂಧದಲ್ಲಿ ಲಗತ್ತಿಸಿದೆ. |
| ಇ. | ಕೊರತೆ ಇರುವ ಶಿಕ್ಷಕರನ್ನು ನೇಮಿಸಲು ಸರ್ಕಾರ ಕೈಗೊಂಡಿರುವ ಕ್ರಮಗಳೇನು; | ಪ್ರಾಥಮಿಕ ಶಾಲೆಗಳಲ್ಲಿ ಖಾಲಿ ಇರುವ ಶಿಕ್ಷಕರ ಹುದ್ದೆಗಳನ್ನು ಪ್ರಸ್ತುತ ವೃಂದ ಮತ್ತು ನೇಮಕಾತಿ ನಿಯಮಗಳಿಗೆ ತಿದ್ದುಪಡಿಮಾಡಿ ಕರಡು ನಿಯಮಗಳನ್ನು ಪ್ರಕಟಿಸಿ, ಆಕ್ಷೇಪಣೆಗಳನ್ನು ಪಡೆಯಲಾಗಿದ್ದು, ಆಕ್ಷೇಪಣೆ ಮತ್ತು ಸಲಹೆಗಳನ್ನು ಪರಿಶೀಲಿಸಿ, ಅಂತಿಮ ಅಧಿಸೂಚನೆಯನ್ನು ಹೊರಡಿಸಿದ ನಂತರ ಖಾಯಂ ಶಿಕ್ಷಕರನ್ನು ನೇಮಕಾತಿ ಮಾಡಿಕೊಳ್ಳುವ ಬಗ್ಗೆ ಕ್ರಮಕೈಗೊಳ್ಳಲಾಗುವುದು.<br><br>ರಾಜ್ಯದಲ್ಲಿ ಕೋವಿಡ್-19 ಹಿನ್ನಲೆಯಲ್ಲಿ ಪ್ರಾಥಮಿಕ ಶಾಲೆಗಳು ಪೂರ್ಣ ಪ್ರಮಾಣದಲ್ಲಿ ಪ್ರಾರಂಭವಾಗಿರುವುದಿಲ್ಲ ಆದ್ದರಿಂದ ಪೂರ್ಣ ಪ್ರಮಾಣದಲ್ಲಿ ಪ್ರಾರಂಭವಾದ ನಂತರ ಅಗತ್ಯಕ್ಕನುಸಾರವಾಗಿ ಅತಿಥಿ ಶಿಕ್ಷಕರನ್ನು ನೇಮಕ ಮಾಡಿಕೊಳ್ಳಲು ಕ್ರಮಕೈಗೊಳ್ಳಲಾಗುವುದು.<br><br>ಸರ್ಕಾರಿ ಪ್ರೌಢಶಾಲೆಗಳಲ್ಲಿ ವಿಶೇಷ ವೃಂದದ 1,111 ಶಿಕ್ಷಕರ ಹುದ್ದೆಗಳನ್ನು (ದೈಹಿಕ ಶಿಕ್ಷಕರು, ಚಿತ್ರಕಲೆ ಮತ್ತು ಸಂಗೀತ) ಖಾಲಿ ಹುದ್ದೆಗಳನ್ನು ಭರ್ತಿ ಮಾಡಲು ಹಾಗೂ 5,500 ವಿವಿಧ ವೃಂದದ ಹುದ್ದೆಗಳನ್ನು ಭರ್ತಿ ಮಾಡಲು ಪರಿಶೀಲಿಸಲಾಗುತ್ತಿದೆ.<br><br>ಸರ್ಕಾರಿ ಪ್ರೌಢಶಾಲೆಗಳಲ್ಲಿ ಖಾಲಿ ಇರುವ ಸಹ ಶಿಕ್ಷಕರ ವೃಂದದ ಖಾಲಿ ಹುದ್ದೆಗಳ ಎದುರಾಗಿ ಪ್ರಸ್ತುತ ಸಾಲಿನ ಶೈಕ್ಷಣಿಕ ಸಾಲಿನ ಅಂತ್ಯದವರೆಗೆ 3473 ಅತಿಥಿ ಶಿಕ್ಷಕರನ್ನು ತಾತ್ಕಾಲಿಕವಾಗಿ ನೇಮಕಾತಿ ಮಾಡಿಕೊಳ್ಳಲು ಎಲ್ಲಾ ಉಪನಿರ್ದೇಶಕರುಗಳಿಗೆ ಸೂಚಿಸಲಾಗಿದೆ. |
| ಈ. | ಶಿಕ್ಷಕರನ್ನು ಯಾವಾಗ ಭರ್ತಿ ಮಾಡಲಾಗುವುದು? | |

**ಸಂಖ್ಯೆ**: ಇಪಿ 11 ಪಿಎಂಎ 2021

S. Su

**(ಎಸ್. ಸುರೇಶ್‌ಕುಮಾರ್)**
ಪ್ರಾಥಮಿಕ ಮತ್ತು ಪ್ರೌಢಶಿಕ್ಷಣ
ಹಾಗೂ ಸಕಾಲ ಸಚಿವರು

**ರಾಜ್ಯದ (ಕಲ್ಯಾಣ ಕರ್ನಾಟಕದ 06 ಜಿಲ್ಲೆಗಳು) ಸೇರಿದಂತೆ ಸರ್ಕಾರಿ ಪ್ರಾಥಮಿಕ ಶಾಲೆಗಳಲ್ಲಿ ಖಾಲಿ ಇರುವ ಪದವೀಧರ ಪ್ರಾಥಮಿಕ ಶಿಕ್ಷಕರ (6–8 ನೇ ತರಗತಿಗಳ) ಹುದ್ದೆಗಳ ಮಾಹಿತಿ ದಿನಾಂಕ 31.01.2021 ರಲ್ಲಿದ್ದಂತೆ**

## ಅನುಬಂಧ–1

| ಕ್ರಮ ಸಂಖ್ಯೆ | | ಖಾಲಿ ಹುದ್ದೆಗಳು | ಸೇವಾ ನಿರತರ ನೇಮಕಾತಿಗಾಗಿ ಶೇ 25 ರಷ್ಟು ಕಾಯ್ದಿರಿಸಬೇಕಾದ ಹುದ್ದೆಗಳು | ನೇರ ನೇಮಕಾತಿ ಹುದ್ದೆಗಳು |
|---|---|---|---|---|
| 1 | ಬೆಳಗಾವಿ | 933 | 233 | 700 |
| 2 | ಬಾಗಲಕೋಟೆ | 1290 | 323 | 967 |
| 3 | ವಿಜಯಪುರ | 1075 | 269 | 806 |
| 4 | ಕಲ್ಬುರ್ಗಿ | 1807 | 452 | 1355 |
| 5 | ಬೀದರ್ | 436 | 109 | 327 |
| 6 | ರಾಯಚೂರು | 1907 | 477 | 1430 |
| 7 | ಕೊಪ್ಪಳ | 1320 | 330 | 990 |
| 8 | ಗದಗ್ | 463 | 116 | 347 |
| 9 | ಧಾರವಾಢ | 508 | 127 | 381 |
| 10 | ಉತ್ತರ ಕನ್ನಡ | 87 | 22 | 65 |
| 11 | ಹಾವೇರಿ | 479 | 120 | 359 |
| 12 | ಬಳ್ಳಾರಿ | 762 | 191 | 571 |
| 13 | ಚಿತ್ರದುರ್ಗ | 470 | 118 | 352 |
| 14 | ದಾವಣಗೆರೆ | 1160 | 290 | 870 |
| 15 | ಶಿವಮೊಗ್ಗ | 712 | 178 | 534 |
| 16 | ಉಡುಪಿ | 356 | 89 | 267 |
| 17 | ಚಿಕ್ಕಮಗಳೂರು | 48 | 12 | 36 |
| 18 | ತುಮಕೂರು | 369 | 92 | 277 |
| 19 | ಕೋಲಾರ | 256 | 64 | 192 |
| 20 | ಬೆಂಗಳೂರು ದಕ್ಷಿಣ | 732 | 183 | 549 |
| 21 | ಬೆಂಗಳೂರು ಗ್ರಾಮಾಂತರ | 250 | 63 | 187 |
| 22 | ಮಂಡ್ಯ | 775 | 194 | 581 |
| 23 | ಹಾಸನ | 545 | 136 | 409 |
| 24 | ದಕ್ಷಿಣ ಕನ್ನಡ | 988 | 247 | 741 |
| 25 | ಕೊಡಗು | 238 | 60 | 178 |
| 26 | ಮೈಸೂರು | 942 | 236 | 706 |
| 27 | ಚಾಮರಾಜನಗರ | 521 | 130 | 391 |
| 28 | ಬೆಂಗಳೂರು ಉತ್ತರ | 317 | 79 | 238 |
| 29 | ಚಿಕ್ಕಬಳ್ಳಾಪುರ | 500 | 125 | 375 |
| 30 | ಚಿಕ್ಕೋಡಿ | 2119 | 530 | 1589 |
| 31 | ಮಧುಗಿರಿ | 416 | 104 | 312 |
| 32 | ರಾಮನಗರ | 452 | 113 | 339 |
| 33 | ಯಾದಗಿರಿ | 1942 | 486 | 1456 |
| 34 | ಸಿರ್ಸಿ | 641 | 160 | 481 |
| | ಒಟ್ಟು : | 25813 | 6458 | 19355 |

ನಿರ್ದೇಶಕರು (ಪ್ರಾಥಮಿಕ ಶಿಕ್ಷಣ)

| ಸರ್ಕಾರಿ ಪ್ರೌಢ ಶಾಲೆಗಳಲ್ಲಿ ಜಿಲ್ಲಾವಾರು ಹುದ್ದೆಗಳ ಮಂಜೂರಾದ/ಕರ್ತವ್ಯ ನಿರ್ವಹಿಸುತ್ತಿರುವ/ಖಾಲಿ ಹುದ್ದೆಗಳ ವಿವರ | | | | |
|---|---|---|---|---|
| 2202-00-102-0-62 HS | | | | 11.08.2020 |
| SL NO | DISTRICT | SANCTIONED | WORKING | VACANT |
| 1 | Belagavi | 1349 | 1184 | 165 |
| 2 | Bagalkote | 1670 | 1422 | 248 |
| 3 | vijayapura | 1370 | 1237 | 133 |
| 4 | Kalburgi | 2938 | 2620 | 318 |
| 5 | Bidar | 1852 | 1666 | 186 |
| 6 | Raichur | 1952 | 1541 | 411 |
| 7 | koppala | 1496 | 1177 | 319 |
| 8 | Gadag | 939 | 831 | 108 |
| 9 | Dharwad | 989 | 909 | 80 |
| 10 | Uttarkannada | 509 | 489 | 20 |
| 11 | Heveri | 1417 | 1326 | 91 |
| 12 | Bellary | 1994 | 1517 | 477 |
| 13 | Chitradurga | 1402 | 1348 | 54 |
| 14 | Dhavanageri | 2008 | 1959 | 49 |
| 15 | Shivamogga | 2124 | 2025 | 99 |
| 16 | Udupi | 1376 | 1305 | 71 |
| 17 | Chikkamagalur | 1491 | 1394 | 97 |
| 18 | Tumkur | 1702 | 1621 | 81 |
| 19 | Kolar | 1624 | 1513 | 111 |
| 20 | Bangalore South | 1105 | 1054 | 51 |
| 21 | Bangalore Rural | 901 | 884 | 17 |
| 22 | Mandya | 2607 | 2434 | 173 |
| 23 | Hasana | 2921 | 2713 | 208 |
| 24 | Dhakshina kannada | 1906 | 1732 | 174 |
| 25 | Kodagu | 601 | 563 | 38 |
| 26 | Mysore | 2766 | 2620 | 146 |
| 27 | Chamarajanagara | 1061 | 966 | 95 |
| 28 | Bangalore North | 806 | 789 | 17 |
| 29 | Chikkaballapura | 1356 | 1251 | 105 |
| 30 | Chikkodi | 1619 | 1203 | 416 |
| 31 | Madhugiri | 1169 | 1068 | 101 |
| 32 | Ramanagara | 1289 | 1221 | 68 |
| 33 | Yadagiri | 1256 | 1004 | 252 |
| 34 | Shirisi | 810 | 724 | 86 |
| | Grand Total | 52375 | 47310 | 5065 |

# ಕರ್ನಾಟಕ ವಿಧಾನ ಸಭೆ

ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 2968
ಮಾನ್ಯ ಸದಸ್ಯರ ಹೆಸರು : ಶ್ರೀ ಹೂಲಗೇರಿ ಡಿ.ಎಸ್. (ಲಿಂಗಸುಗೂರು)
ಉತ್ತರಿಸಬೇಕಾದ ದಿನಾಂಕ : 18-3-2021
ಉತ್ತರಿಸುವ ಸಚಿವರು : ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಹಾಗೂ ವೈದ್ಯಕೀಯ ಶಿಕ್ಷಣ ಸಚಿವರು

| ಕ್ರ. ಸಂ. | ಪ್ರಶ್ನೆ | ಉತ್ತರ |
|---|---|---|
| 1 | ರಾಯಚೂರು ಜಿಲ್ಲೆಯ ಲಿಂಗಸುಗೂರು ಪಟ್ಟಣದಲ್ಲಿ 60 ಹಾಸಿಗೆವುಳ್ಳ ತಾಯಿ ಮತ್ತು ಮಕ್ಕಳ (ಎಂ.ಸಿ.ಹೆಚ್) ಆಸ್ಪತ್ರೆಯನ್ನು ಪ್ರಾರಂಭಿಸಲು ಸರ್ಕಾರ ತೆಗೆದುಕೊಂಡ ಕ್ರಮಗಳೇನು; | ರಾಯಚೂರು ಜಿಲ್ಲೆಯ ಲಿಂಗಸುಗೂರು ಪಟ್ಟಣದಲ್ಲಿ ತಾಯಿ ಮತ್ತು ಮಕ್ಕಳ ಆಸ್ಪತ್ರೆ ಕಟ್ಟಡ ನಿರ್ಮಾಣ ಕಾಮಗಾರಿಯನ್ನು ಅವಶ್ಯಕತೆ ಹಾಗೂ ಅನುದಾನದ ಲಭ್ಯತೆಗೆ ಅನುಗುಣವಾಗಿ ಆದ್ಯತೆ ಮೇಲೆ ಮುಂಬರುವ ವರ್ಷಗಳಲ್ಲಿ ಪ್ರಾರಂಭಿಸಲು ಕ್ರಮವಹಿಸಲಾಗುವುದು. |
| 2 | ಲಿಂಗಸುಗೂರು ತಾಲ್ಲೂಕಿನ ಆಂಕಲಿಮಠದ ಹತ್ತಿರ ಆಯುಷ್ ಆಸ್ಪತ್ರೆ ಪ್ರಾರಂಭಿಸಲು ಸರ್ಕಾರ ತೆಗೆದುಕೊಂಡ ಕ್ರಮಗಳೇನು; | ಲಿಂಗಸುಗೂರು ತಾಲ್ಲೂಕಿನ ಆಂಕಲಿಮಠದ ಹತ್ತಿರ ಅಗತ್ಯ ಹುದ್ದೆಗಳ ಸೃಜನೆಯೊಂದಿಗೆ 10 ಹಾಸಿಗೆಗಳ ಸರ್ಕಾರಿ ಆಯುಷ್ ಆಸ್ಪತ್ರೆಯನ್ನು ಪ್ರಾರಂಭಿಸುವ ಬಗ್ಗೆ ಪರಿಶೀಲನೆಯಲ್ಲಿರುತ್ತದೆ. |
| 3 | ಈ ತಾಲ್ಲೂಕಿನ ಹಟ್ಟಿ ಪಟ್ಟಣದಲ್ಲಿರುವ ಸರ್ಕಾರಿ ಪ್ರಾಥಮಿಕ ಆರೋಗ್ಯ ಕೇಂದ್ರುವನ್ನು ಸಮುದಾಯ ಆರೋಗ್ಯ ಕೇಂದ್ರುವನ್ನಾಗಿ ಉನ್ನತೀಕರಿಸಲು ಸರ್ಕಾರ ತೆಗೆದುಕೊಂಡ ಕ್ರಮಗಳೇನು; | ಲಿಂಗಸೂಗೂರು ತಾಲ್ಲೂಕಿನ ಹಟ್ಟಿ ಪಟ್ಟಣದಲ್ಲಿರುವ ಸರ್ಕಾರಿ ಪ್ರಾಥಮಿಕ ಆರೋಗ್ಯ ಕೇಂದ್ರುವನ್ನು ಸಮುದಾಯ ಆರೋಗ್ಯ ಕೇಂದ್ರುವನ್ನಾಗಿ ಉನ್ನತೀಕರಿಸಲು ಯಾವುದೇ ಪ್ರಸ್ತಾವನೆ ಸ್ವೀಕೃತವಾಗಿರುವುದಿಲ್ಲ. |
| 4 | ಲಿಂಗಸುಗೂರು ಪಟ್ಟಣದಲ್ಲಿ ನೂತನ ತಾಲ್ಲೂಕು ವೈದ್ಯಾಧಿಕಾರಿಗಳ ಕಟ್ಟಡ ನಿರ್ಮಾಣ ಮಾಡಲು ಸರ್ಕಾರ ತೆಗದುಕೊಂಡ ಕ್ರಮಗಳೇನು? | ಲಿಂಗಸೂರು ಪಟ್ಟಣದಲ್ಲಿ ನೂತನ ತಾಲ್ಲೂಕು ವೈದ್ಯಾಧಿಕಾರಿಗಳ ಕಟ್ಟಡ ನಿರ್ಮಾಣ ಮಾಡುವ ಪ್ರಸ್ತಾವನೆ ಸರ್ಕಾರದ ಮುಂದಿರುವುದಿಲ್ಲ. |

ಆಕುಕ 45 ಎಸ್.ಎಂ.ಎಂ. 2021

(ಡಾ: ಕೆ. ಸುಧಾಕರ್)
ಆರೋಗ್ಯ ಮತ್ತು ಕುಟುಂಬ ಕಲ್ಯಾಣ
ಹಾಗೂ ವೈದ್ಯಕೀಯ ಶಿಕ್ಷಣ ಸಚಿವರು

# ಕರ್ನಾಟಕ ವಿಧಾನಸಭೆ

(15ನೇ ವಿಧಾನಸಭೆ, 9ನೇ ಅಧಿವೇಶನ)

1) ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 1578

2) ಸದಸ್ಯರ ಹೆಸರು : ಶ್ರೀ ವೀರಭದ್ರಯ್ಯ ಎಂ.ವಿ (ಮಧುಗಿರಿ)

3) ಉತ್ತರಿಸುವ ದಿನಾಂಕ : 18.03.2021

4) ಉತ್ತರಿಸುವವರು : ಅರಣ್ಯ, ಕನ್ನಡ ಮತ್ತು ಸಂಸ್ಕೃತಿ ಸಚಿವರು

| ಕ್ರ.ಸಂ | ಪ್ರಶ್ನೆ | ಉತ್ತರ |
|---|---|---|
| ಅ) | ಮಧುಗಿರಿ ತಾಲ್ಲೂಕಿನ ಜಯಮಂಗಲಿ ಅರಣ್ಯ ಪ್ರದೇಶದ ವ್ಯಾಪ್ತಿಯಲ್ಲಿ ಬರುವ ಸುತ್ತಮುತ್ತಲಿನ ಗ್ರಾಮೀಣ ಭಾಗದ ಜಮೀನುಗಳಲ್ಲಿ ಕೃಷ್ಣ ಮೃಗಗಳು ದಾಳಿ ಮಾಡಿ ಬೆಳೆಗಳನ್ನು ಹಾಳು ಮಾಡುತ್ತಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; | ಬಂದಿದೆ. |
| (ಆ) | ಬಂದಿದ್ದಲ್ಲಿ, ಇದನ್ನು ತಡೆಗಟ್ಟಲು ಅರಣ್ಯ ಪ್ರದೇಶದ ಸುತ್ತಲು ತಡೆಬೇಲಿ ಅಳವಡಿಸಲು ಸರ್ಕಾರದಿಂದ ಯಾವ ಕ್ರಮ ಕೈಗೊಳ್ಳಲಾಗಿದೆ (ವಿವರ ನೀಡುವುದು) | ಕೃಷ್ಣಮೃಗಗಳು ಪ್ರಾಕೃತಿಕವಾಗಿ ತುಂಬಾ ಎತ್ತರಕ್ಕೆ ನೆಗೆಯುವ ಪ್ರಾಣಿಗಳಾಗಿದ್ದು, ತಡೆಗೋಡೆ ತಂತಿಬೇಲಿ ಒಂದು ಸಮರ್ಪಕ ತಡೆಯಾಗಿ ಬಳಸುವುದು ಕಷ್ಟಕರವಾಗಿರುತ್ತದೆ. ಕೃಷ್ಣಮೃಗಗಳು ಅವುಗಳ ಪ್ರದೇಶ ವ್ಯಾಪ್ತಿಯಲ್ಲಿಯೇ ಇರಲು ನೀರಿನ ಹೊಂಡಗಳನ್ನು ನಿರ್ಮಿಸಲಾಗಿದೆ. ಆದಾಗ್ಯೂ, ಕೃಷ್ಣಮೃಗಗಳ ಸಂಖ್ಯೆ ಹೆಚ್ಚಾಗಿರುವ ರಾಜ್ಯಗಳಲ್ಲಿ ಈ ಬಗ್ಗೆ ತೆಗೆದುಕೊಂಡಿರುವ ಕ್ರಮದ ಮಾಹಿತಿಯನ್ನು ಪಡೆದು ಮುಂದಿನ ಕ್ರಮದ ಬಗ್ಗೆ ಪರಿಶೀಲಿಸಲಾಗುವುದು. |

ಸಂಖ್ಯೆ: ಅಪಜೀ 54 ಎಫ್‌ಡಬ್ಲ್ಯೂಎಲ್ 2021

(ಅರವಿಂದ ಲಿಂಬಾವಳಿ)
ಅರಣ್ಯ, ಕನ್ನಡ ಮತ್ತು ಸಂಸ್ಕೃತಿ ಸಚಿವರು

ಕರ್ನಾಟಕ ವಿಧಾನ ಸಭೆ

| | |
|---|---|
| ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ | 3014 |
| ಮಾನ್ಯ ಸದಸ್ಯರ ಹೆಸರು | ಶ್ರೀ ಹ್ಯಾರಿಸ್ ಎನ್.ಎ (ಶಾಂತಿನಗರ) |
| ಉತ್ತರಿಸಬೇಕಾದ ದಿನಾಂಕ | 18.03.2021 |
| ಉತ್ತರಿಸುವ ಸಚಿವರು | ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಹಾಗೂ ವೈದ್ಯಕೀಯ ಶಿಕ್ಷಣ ಇಲಾಖೆ ಸಚಿವರು |

| ಕ್ರ.ಸಂ | ಪ್ರಶ್ನೆ | ಉತ್ತರ |
|---|---|---|
| ಅ) | ರಾಜ್ಯದಲ್ಲಿ ಮತ್ತು ಜಗತ್ತಿನಾದ್ಯಂತ ಗಣನೀಯ ಪ್ರಮಾಣದಲ್ಲಿ ಕ್ಯಾನ್ಸರ್ ರೋಗಪೀಡಿತರು ಸಂಕಷ್ಟದಲ್ಲಿರುವುದನ್ನು ಗಮನಿಸಿ ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆಯು ಜನರಲ್ಲಿ ಮುಂಜಾಗರೂಕತಾ ಕ್ರಮಗಳ ಕುರಿತು ಅರಿವು ಮೂಡಿಸಲು ಕೈಗೊಂಡ ಕ್ರಮಗಳೇನು; | • ರಾಷ್ಟ್ರೀಯ ಕ್ಯಾನ್ಸರ್, ಮಧುಮೇಹ, ಹೃದಯರೋಗ ಕ್ಯಾನ್ಸರ್ ನಿಯಂತ್ರಣ ಕಾರ್ಯಕ್ರಮ (National Programme For Prevention & Control of Cancer, Diabetes, Cardiovascular disease & Stroke) ಅಡಿಯಲ್ಲಿ 2010 ಮತ್ತು 2012 ನೇ ಸಾಲಿನಿಂದ ಪರಿಗಣಿಸಲಾಗಿದೆ.<br>• ಕಾರ್ಯಕ್ರಮದ ಭಾಗವಾಗಿ ಸಮುದಾಯದ ಮಟ್ಟದಲ್ಲಿ ಕ್ಯಾನ್ಸರ್ ತಡೆ ಮತ್ತು ನಿಯಂತ್ರಣಕ್ಕೆ ಸಂಬಂಧಪಟ್ಟಂತೆ ಜಾಗೃತಿ ಕಾರ್ಯಕ್ರಮಗಳನ್ನು ಹಮ್ಮಿಕೊಳ್ಳಲಾಗುತ್ತಿದೆ.<br>• ಕ್ಯಾನ್ಸರ್ ಕಾರಕವಾದ ತಂಬಾಕು ಸೇವನೆಯ ದುಷ್ಪರಿಣಾಮಗಳ ಬಗ್ಗೆ ಅರಿವು ಮೂಡಿಸಲಾಗುತ್ತಿದೆ.<br>• ದೇಹ ತೂಕ ಹೆಚ್ಚಾಗದಂತೆ ಕ್ರಮವಹಿಸುವುದು ಮತ್ತು ಜೀವನ ಶೈಲಿಯಲ್ಲಿ ಮತ್ತು ಆಹಾರ ಪದ್ಧತಿಯಲ್ಲಿ ಬದಲಾವಣೆಗಳನ್ನು ಅಳವಡಿಸಿಕೊಳ್ಳುವ ಬಗ್ಗೆ ಆರೋಗ್ಯ ಕಾರ್ಯಕರ್ತೆಯರು ಮತ್ತು ಆಶಾ ಕಾರ್ಯಕರ್ತೆಯರು ತಳಮಟ್ಟದಲ್ಲಿ ಮನೆ ಮನೆಗೆ ಭೇಟಿ ನೀಡಿ ಪರಸ್ಪರ ಜಾಗೃತಿ ಮತ್ತು ಗುಂಪು ಸಭೆಗಳ ಮೂಲಕ ಅರಿವು ಮೂಡಿಸುತ್ತಿದ್ದಾರೆ.<br>• ಅಲ್ಲದೇ ಸಾಂಸ್ಥಿಕ ಮಟ್ಟದಲ್ಲಿ ಮತ್ತು ಕ್ಯಾನ್ಸರ್ ಜಾಗೃತಿ ದಿನಗಳಂದು ವಿಶೇಷ ಜಾಗೃತಿ ಕಾರ್ಯಕ್ರಮಗಳನ್ನು ಸಮೂಹ ಮಾಧ್ಯಮಗಳ ಮೂಲಕ ಹಮ್ಮಿಕೊಳ್ಳಲಾಗುತ್ತಿದೆ. |
| ಆ) | ಕ್ಯಾನ್ಸರ್ ರೋಗವನ್ನು ಪ್ರಥಮ ಹಂತದಲ್ಲಿಯೇ ಪತ್ತೆ ಹಚ್ಚುವ ಹಾಗೂ ಸುಲಭ ರೀತಿಯಲ್ಲಿ ಗುಣಪಡಿಸುವ ಕುರಿತು ಜನರಲ್ಲಿ ಅರಿವು ಮೂಡಿಸುವ ಮತ್ತು ನಿರ್ಭಂದನಾ ಕ್ರಮಗಳನ್ನು ಅನುಸರಿಸುವ ಕುರಿತು ಕೈಗೊಂಡ ಕ್ರಮಗಳೇನು; | ಕ್ಯಾನ್ಸರ್ ರೋಗ ಪತ್ತೆ ಮಾಡುವುದು ಹಾಗೂ ಗುಣಪಡಿಸುವ ಸಲುವಾಗಿ ಈ ಕೆಳಕಂಡ ಕ್ರಮಗಳನ್ನು ಕೈಗೊಳ್ಳಲಾಗಿದೆ.<br>• NPCDCS ಕಾರ್ಯಕ್ರಮದಲ್ಲಿ 30 ವರ್ಷ ಮೇಲ್ಪಟ್ಟ ಎಲ್ಲರಲ್ಲೂ ಮೂರು ಮುಖ್ಯ ಕ್ಯಾನ್ಸರ್‌ಗಳಾದ ಬಾಯಿ ಕ್ಯಾನ್ಸರ್, ಗರ್ಭಕಂಠದ ಕ್ಯಾನ್ಸರ್, ಮತ್ತು ಸ್ತನ ಕ್ಯಾನ್ಸರ್‌ಗಳನ್ನು ಪ್ರಾರಂಭದಲ್ಲೇ ಪತ್ತೆಹಚ್ಚುವ ಬಗ್ಗೆ |

| ಇ) | ರಾಜ್ಯದಲ್ಲಿ ಹೆಚ್‌ಪಿವಿ ಲಸಿಕೆ ಮತ್ತು ವಾರ್ಷಿಕವಾಗಿ ಕ್ಯಾನ್ಸರ್ ರೋಗ ಪತ್ತೆ ಮಾಡುವ ಕ್ರಮವನ್ನು ಉಚಿತವಾಗಿ ಹಾಗೂ ಸುಲಭ ಸಾಧ್ಯವಾಗಿ ಪಡೆದುಕೊಳ್ಳಲು ಸರ್ಕಾರದವರು ವ್ಯವಸ್ಥೆಗೊಳಿಸಿರುವ ಅಥವಾ ಗೊಳಿಸಬಹುದಾದ ಕ್ರಮಗಳೇನು? | ಆರೋಗ್ಯ ಕಾರ್ಯಕರ್ತರಿಗೆ ಈಗಾಗಲೇ ತರಬೇತಿಯನ್ನು ನೀಡಲಾಗಿದೆ.<br><br>• 30 ವರ್ಷ ಮೇಲ್ಪಟ್ಟವರಲ್ಲಿ ಹೆಚ್ಚಿನ ಪ್ರಸರಣದಲ್ಲಿರುವ ಈ ಮೂರು (ಶೇ.34%) ಕ್ಯಾನ್ಸರ್ ರೋಗಗಳನ್ನು ಪತ್ತೆ ಹಚ್ಚಲು ಪ್ರತಿ 5 ವರ್ಷಗಳಿಗೊಮ್ಮೆ ಪೂರ್ವಭಾವಿ ಪರೀಕ್ಷೆಯನ್ನು ಸಮುದಾಯ ಮಟ್ಟದಲ್ಲಿ **(PBS- Population Based Screening)** ಕೈಗೊಳ್ಳಲಾಗುವುದು.<br>• ಕಾರ್ಯಕ್ರಮವನ್ನು ಸಮುದಾಯ ಮಟ್ಟಕ್ಕೆ ಕೊಂಡೊಯ್ಯುವ ಸಲುವಾಗಿ ಸಂಚಾರಿ ಕ್ಯಾನ್ಸರ್ ಪರೀಕ್ಷಾ ಘಟಕಗಳನ್ನು ಯೋಜನೆಯ ಭಾಗವಾಗಿ ಪರಿಗಣಿಸುವ ಬಗ್ಗೆ ಕ್ರಮಗಳನ್ನು ಕೈಗೊಳ್ಳಲಾಗುತ್ತಿದೆ.<br>• ಆರೋಗ್ಯ ಅಭಿಯಾನದ ಅಡಿಯಲ್ಲಿ ಜಿಲ್ಲಾ ಆಸ್ಪತ್ರೆ ಮಟ್ಟದಲ್ಲಿ ಪ್ರತಿ ಜಿಲ್ಲೆಗೆ ಒಂದರಂತೆ ಒಟ್ಟು 30 ಜಿಲ್ಲಾ ಎನ್.ಸಿ.ಡಿ ಕ್ಲಿನಿಕ್‌ಗಳು ಮತ್ತು ತಾಲ್ಲೂಕು ಆಸ್ಪತ್ರೆ ಮತ್ತು ಸಮುದಾಯ ಆರೋಗ್ಯ ಕೇಂದ್ರಗಳ ಮಟ್ಟದಲ್ಲಿ 347.ಈ ರೀತಿ ಒಟ್ಟಾರೆ 377 ಎನ್.ಸಿ.ಡಿ ಕ್ಲಿನಿಕ್‌ಗಳು ಕಾರ್ಯನಿರ್ವಹಿಸುತ್ತಿವೆ.<br>• ಕಾರ್ಯಕ್ರಮದ ಭಾಗವಾಗಿ ರಕ್ತದೊತ್ತಡ ಮತ್ತು ಮಧುಮೇಹ ರೋಗಗಳನ್ನು ಶೀಘ್ರ ಪತ್ತೆ ಹಚ್ಚುವುದರೊಂದಿಗೆ ಮೇಲೆ ಉಲ್ಲೇಖಿಸಲಾದ ಮೂರು ಕ್ಯಾನ್ಸರ್ ಗಳನ್ನು ಪ್ರಥಮ ಹಂತದಲ್ಲಿಯೇ ಪತ್ತೆಹಚ್ಚುವ ಬಗ್ಗೆ ಕ್ರಮವಹಿಸಲಾಗುತ್ತಿದೆ.<br>ಮೇಲ್ಕಂಡ ಎಲ್ಲಾ ಕಾರ್ಯಕ್ರಮಗಳನ್ನು ಉಚಿತವಾಗಿ ನಡೆಸಲಾಗುತ್ತಿದೆ.<br>ರಾಷ್ಟ್ರೀಯ ಲಸಿಕಾ ಕ್ರಮದಲ್ಲಿ ಹೆಚ್.ಪಿ.ವಿ ಲಸಿಕೆಯನ್ನು ಇನ್ನೂ ಪರಿಗಣಿಸಿರುವುದಿಲ್ಲ ಹಾಗೂ ಈ ಬಗ್ಗೆ ಲಸಿಕಾ ಉಪಯುಕ್ತತೆ ಬಗ್ಗೆ ಚರ್ಚಿಸಿ ರಾಜ್ಯ ಮಟ್ಟದಲ್ಲಿ ಕ್ರಮವಹಿಸಲಾಗುವುದು. |
|---|---|---|

ಸಂಖ್ಯೆ:ಆಕುಕ 44 ಎಸ್‌ಎಂಎಂ 2021

(ಡಾ||ಕೆ.ಸುಧಾಕರ್)
ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಹಾಗೂ
ವೈದ್ಯಕೀಯ ಶಿಕ್ಷಣ ಸಚಿವರು

## ಕರ್ನಾಟಕ ವಿಧಾನಸಭೆ

| | |
|---|---|
| ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ | 2619 |
| ಮಾನ್ಯ ಸದಸ್ಯರ ಹೆಸರು | ಶ್ರೀ ಅರಗ ಜ್ಞಾನೇಂದ್ರ (ತೀರ್ಥಹಳ್ಳಿ) |
| ಉತ್ತರಿಸಬೇಕಾದ ದಿನಾಂಕ | 18-03-2021 |
| ಉತ್ತರಿಸುವ ಸಚಿವರು | ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಹಾಗೂ ವೈದ್ಯಕೀಯ ಶಿಕ್ಷಣ ಸಚಿವರು |

| ಕ್ರ.ಸಂ. | ಪ್ರಶ್ನೆ | ಉತ್ತರ |
|---|---|---|
| ಅ | ಶಿವಮೊಗ್ಗ ಜಿಲ್ಲೆ ತೀರ್ಥಹಳ್ಳಿ ವಿಧನಸಭಾ ಕ್ಷೇತ್ರ ವ್ಯಾಪ್ತಿಯಲ್ಲಿ ಬರುವ ಪ್ರಾಥಮಿಕ ಆರೋಗ್ಯ ಕೇಂದ್ರಗಳನ್ನು ಮೇಲ್ದರ್ಜೆಗೇರಿಸುವ ಪ್ರಸ್ತಾವನೆ ಸರ್ಕಾರದ ಮುಂದಿದೆಯೇ; | ಹೌದು |
| ಆ | ಇದ್ದಲ್ಲಿ, ಯಾವ ಕಾಲಮಿತಿಯೊಳಗೆ ಮೇಲ್ದರ್ಜೆಗೇರಿಸಲಾಗುವುದು; ಈ ಯೋಜನೆಗೆ ಸರ್ಕಾರ ನಿಗದಿಪಡಿಸಿದ ಅನುದಾನವೆಷ್ಟು; | ಆರ್ಥಿಕ ವಿಸ್ತರತೆ ಇಲ್ಲದಿರುವುದರಿಂದ ಪ್ರಾಥಮಿಕ ಆರೋಗ್ಯ ಕೇಂದ್ರಗಳನ್ನು ಸಮುದಾಯ ಆರೋಗ್ಯ ಕೇಂದ್ರಗಳನ್ನಾಗಿ ಮೇಲ್ದರ್ಜೆಗೇರಿಸುವ ಪ್ರಸ್ತಾವನೆಗಳನ್ನು ಸದ್ಯಕ್ಕೆ ತಡೆಹಿಡಿಯಲಾಗಿದೆ.<br><br>ಆದಾಗ್ಯೂ, 2020-21 ನೇ ಸಾಲಿನ ಆಯವ್ಯಯ ಭಾಷಣದಲ್ಲಿ ಘೋಷಿಸಿರುವಂತೆ **"ಹೆಚ್ಚು** ಕಾರ್ಯ ಒತ್ತಡವಿರುವ ಪ್ರಾಥಮಿಕ ಆರೋಗ್ಯ ಕೇಂದ್ರಗಳಲ್ಲಿ ಹೆಚ್ಚುವರಿ ಸೇವೆಗಳನ್ನು ಹಾಗೂ ಅತ್ಯಾಧುನಿಕ ಸೌಲಭ್ಯಗಳನ್ನು ನೀಡುವ ಉದ್ದೇಶದಿಂದ ಅವುಗಳನ್ನು ಹಂತ ಹಂತವಾಗಿ ಮಾದರಿ ಪ್ರಾಥಮಿಕ ಆರೋಗ್ಯ ಕೇಂದ್ರಗಳಾಗಿ ಮೇಲ್ದರ್ಜೆಗೇರಿಸಲಾಗುವುದು. 2021-22 ನೇ ವರ್ಷದಲ್ಲಿ ಅಗತ್ಯ ಸಲಕರಣೆಗಳನ್ನು ಒದಗಿಸಿ ಮತ್ತು ಮಾನವ ಸಂಪನ್ಮೂಲಗಳನ್ನು ಮರುಹೊಂದಿಸಿ 250 ಮಾದರಿ ಕೇಂದ್ರಗಳನ್ನಾಗಿ ಮೇಲ್ದರ್ಜೆಗೇರಿಸಲಾಗುವುದು" |
| ಇ | ತಾಲ್ಲೂಕು ಆಸ್ಪತ್ರೆ ಮತ್ತು ಕ್ಷೇತ್ರದ ಪಿ.ಹೆಚ್.ಸಿ ಗಳಲ್ಲಿ ವೈದ್ಯಾಧಿಕಾರಿಗಳು, ನರ್ಸ್‌ಗಳ, ಶುಶ್ರೂಷಕರು, ಡಿ-ಗ್ರೂಪ್ ನೌಕರರುಗಳ ಕೊರತೆಯಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; | ಬಂದಿದೆ |
| ಈ | ಬಂದಿದ್ದಲ್ಲಿ, ಖಾಲಿ ಹುದ್ದೆಗಳನ್ನು ಯಾವಾಗ ಭರ್ತಿ ಮಾಡಲಾಗುವುದು? (ವಿವರ ನೀಡುವುದು) | ಖಾಲಿ ಇರುವ ಹುದ್ದೆಗಳನ್ನು ಭರ್ತಿ ಮಾಡಲು ತೆಗೆದುಕೊಂಡ ಕ್ರಮಗಳ ವಿವರಗಳನ್ನು **ಅನುಬಂಧದಲ್ಲಿ** ನೀಡಲಾಗಿದೆ. |

**ಸಂಖ್ಯೆ:ಆಕುಕ 42 ಎಸ್ಎಂಎಂ 2021**

(ಡಾ॥ಕೆ.ಸುಧಾಕರ್)
ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಹಾಗೂ
ವೈದ್ಯಕೀಯ ಶಿಕ್ಷಣ ಸಚಿವರು

## ಪ್ರಶ್ನೆ ಸಂಖ್ಯೆ ೨೬೧೯ ಕ್ಕೆ ಅನುಬಂಧ

ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆಯಲ್ಲಿ ಖಾಲಿ ಇರುವ ತಜ್ಞರು/ ಸಾಮಾನ್ಯ ಕರ್ತವ್ಯ ವೈದ್ಯಾಧಿಕಾರಿ/ದಂತ ಆರೋಗ್ಯಾಧಿಕಾರಿ ಹುದ್ದೆಗಳನ್ನು ನೇರ ನೇಮಕಾತಿ ಮೂಲಕ ಭರ್ತಿ ಮಾಡುವ ಪ್ರಕ್ರಿಯೆ ಜಾರಿಯಲ್ಲಿದ್ದು, ವಿಶೇಷ ನೇಮಕಾತಿ ಸಮಿತಿಯಿಂದ ನೇರ ನೇಮಕಾತಿ ಮುಖಾಂತರ 1460 ತಜ್ಞ ವೈದ್ಯರುಗಳ ಹುದ್ದೆಗಳನ್ನು(636 ಬ್ಯಾಕ್‌ಲಾಗ್ ಒಳಗೊಂಡಂತೆ), 1265 ಸಾಮಾನ್ಯ ಕರ್ತವ್ಯ ವೈದ್ಯಾಧಿಕಾರಿಗಳ ಹುದ್ದೆಗಳನ್ನು(19 ಬ್ಯಾಕ್‌ಲಾಗ್ ಹುದ್ದೆಗಳು ಸೇರಿದಂತೆ) ಹಾಗೂ 90 ದಂತ ಆರೋಗ್ಯಾಧಿಕಾರಿಗಳ ಹುದ್ದೆಗಳನ್ನು (02 ಬ್ಯಾಕ್‌ಲಾಗ್ ಹುದ್ದೆಗಳು ಸೇರಿದಂತೆ) ಭರ್ತಿ ಮಾಡಲು ಈಗಾಗಲೇ ಅಧಿಸೂಚನೆ ಸಂಖ್ಯೆ:ಎಸ್‌ಆರ್‌ಸಿ/68/2019–20, ದಿ:10.09.20 ನ್ನು ಹೊರಡಿಸಿ, ಅರ್ಹ ಅಭ್ಯರ್ಥಿಗಳಿಂದ ಅರ್ಜಿಯನ್ನು ಅಹ್ವಾನಿಸಲಾಗಿದ್ದು, ದಾಖಲೆಗಳ ಪರಿಶೀಲನೆ ಮುಗಿದಿರುತ್ತದೆ. ತಾತ್ಕಾಲಿಕ ಪಟ್ಟಿಯನ್ನು ಪ್ರಚುರಪಡಿಸುವ ಹಂತದಲ್ಲಿದೆ.

**ಕಿರಿಯ ಆರೋಗ್ಯ ಸಹಾಯಕರು:**

ಆಕುಕ ಇಲಾಖೆಯಲ್ಲಿ ಒಟ್ಟು 9850 ಕಿರಿಯ ಆರೋಗ್ಯ ಸಹಾಯಕ ಹುದ್ದೆಗಳು ಮಂಜೂರಾಗಿದ್ದು, ಖಾಲಿಯಿದ್ದ ಹುದ್ದೆಗಳ ಪೈಕಿ 2124 ಹುದ್ದೆಗಳನ್ನು 2018ನೇ ಸಾಲಿನಲ್ಲಿ ವಿಶೇಷ ನೇಮಕಾತಿ ನಿಯಮಗಳಡಿಯಲ್ಲಿ ಭರ್ತಿ ಮಾಡಲಾಗಿದ್ದು, ಒಟ್ಟಾರೆ 7123 ಹುದ್ದೆಗಳಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದು, ಪ್ರಸ್ತುತ 2727 ಹುದ್ದೆಗಳು ಖಾಲಿಯಿರುತ್ತವೆ.

**ಶುಶ್ರೂಷಕರು:**

ಆಕುಕ ಇಲಾಖೆಯಲ್ಲಿ ಒಟ್ಟು 8471 ಶುಶ್ರೂಷಕರ ಹುದ್ದೆಗಳು ಮಂಜೂರಾಗಿದ್ದು, ಖಾಲಿಯಿದ್ದ 4551 ಹುದ್ದೆಗಳ ಪೈಕಿ ಮೊದಲನೇ ಹಂತದಲ್ಲಿ 981 ಹುದ್ದೆಗಳನ್ನು ಭರ್ತಿ ಮಾಡಲಾಗಿರುತ್ತದೆ. ಜೊತೆಗೆ ಸರ್ಕಾರದ ಅಧಿಸೂಚನೆ ಸಂಖ್ಯೆ ಹೆಚ್‌ಎಫ್‌ಡಬ್ಲ್ಯೂ 550 ಹೆಚ್‌ಎಸ್‌ಹೆಚ್ 2016 ದಿನಾಂಕ 27.05.2017ರಲ್ಲಿ ಶುಶ್ರೂಷಕರು (ಡಿಪ್ಲಮೋ ನರ್ಸಿಂಗ್)– 889 ಹುದ್ದೆಗಳಿಗೆ ರಾಜ್ಯವಲಯದಡಿಯಲ್ಲಿ ಕಾರ್ಯನಿರ್ವಹಿಸುತ್ತಿರುವ ಗುತ್ತಿಗೆ ಶುಶ್ರೂಷಕರುಗಳಿಗೆ ಕೃಪಾಂಕ ಮತ್ತು ವಯೋಮಿತಿ ಸಡಿಲಿಕೆ ಸೌಲಭ್ಯಗಳನ್ನು ನೀಡಿ ಸರ್ಕಾರವು ವಿಶೇಷ ನೇಮಕಾತಿ ನಿಯಮಗಳನ್ನು ರಚಿಸಿ ದಿನಾಂಕ:16.07.2020ರಲ್ಲಿ ಅಂತಿಮ ಆಯ್ಕೆಪಟ್ಟಿಯನ್ನು ಪ್ರಚುರ ಪಡಿಸಲಾಗಿದ್ದು, ಅಂತಿಮ ಆಯ್ಕೆ ಪಟ್ಟಿಯಲ್ಲಿ ಆಯ್ಕೆಯಾದ ಅಭ್ಯರ್ಥಿಗಳ ಪೈಕಿ ನೈಜತೆ ವರದಿಗಳು ಸ್ವೀಕೃತವಾಗಿರುವ ಅಭ್ಯರ್ಥಿಗಳಿಗೆ ನೇಮಕಾತಿ ಆದೇಶವನ್ನು ನೀಡಲಾಗಿರುತ್ತದೆ. ಪ್ರಸ್ತುತ 5790 ಹುದ್ದೆಗಳಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದು, 2681 ಹುದ್ದೆಗಳು ಖಾಲಿಯಿರುತ್ತವೆ. ಇದರ ಜೊತೆಗೆ 5778 ಶುಶ್ರೂಷಕರನ್ನು ಎನ್.ಹೆಚ್.ಎಂ. ಮುಖಾಂತರ ಗುತ್ತಿಗೆ ಆಧಾರದ ಮೇಲೆ ನೇಮಿಸಿಕೊಳ್ಳಲಾಗಿದೆ.

**ಫಾರ್ಮಾಸಿಸ್ಟ್, ಕ್ಷ–ಕಿರಣ ತಂತ್ರಜ್ಞರು ಹಾಗೂ ಕಿರಿಯ ಪ್ರಯೋಗ ಶಾಲಾ ತಂತ್ರಜ್ಞರ ಹುದ್ದೆಗಳನ್ನು ಭರ್ತಿ ಮಾಡುವ ಬಗ್ಗೆ:**

ಆಕುಕ ಇಲಾಖೆಯಲ್ಲಿ 2932 ಫಾರ್ಮಾಸಿಸ್ಟ್ ಹುದ್ದೆಗಳು ಮಂಜೂರಾಗಿದ್ದು, 1974 ಹುದ್ದೆಗಳಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದಾರೆ. ಹಾಗೂ 2411 ಕಿರಿಯ ಪ್ರಯೋಗ ಶಾಲಾ ತಂತ್ರಜ್ಞರ ಹುದ್ದೆಗಳು ಮಂಜೂರಾಗಿದ್ದು, 1821 ಹುದ್ದೆಗಳಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದಾರೆ. ಸರ್ಕಾರದ ಪತ್ರ ಸಂಖ್ಯೆ: ಆಕುಕ 709 ಹೆಚ್‌ಎಸ್‌ಎಂ 2017, ದಿನಾಂಕ:03.08.2019ರಲ್ಲಿ ಇಲಾಖೆಯಲ್ಲಿ ಪ್ರಸ್ತುತ ಖಾಲಿ ಇರುವ ಫಾರ್ಮಾಸಿಸ್ಟ್, ಕ್ಷ–ಕಿರಣ ತಂತ್ರಜ್ಞರು ಹಾಗೂ ಕಿರಿಯ ಪ್ರಯೋಗ ಶಾಲಾ ತಂತ್ರಜ್ಞರ ಹುದ್ದೆಗಳನ್ನು ಆರ್ಥಿಕ ಇಲಾಖೆ ಟಿಪ್ಪಣಿ ಸಂಖ್ಯೆ: ಆಇ 843 ವೆಚ್ಚ–5/2018, ದಿನಾಂಕ:26.07.2019ರಲ್ಲಿ ನೀಡಿರುವ ಸಹಮತಿ ಪ್ರಕಾರ ಈ ಕೆಳಕಂಡಂತೆ ಭರ್ತಿ ಮಾಡಲು ಅನುಮೋದನೆಯನ್ನು ನೀಡಿರುತ್ತಾರೆ.

| Sl. No | Designation | No. of Posts | | | | Total |
|---|---|---|---|---|---|---|
| | | 2019–20 | | 2020–21 | | |
| | | Regular | Outsource | Regular | Outsource | |
| 1. | Jr. Lab Technician | 150 | 150 | – | – | 300 |
| 2. | X-Ray Technician | 08 | – | – | – | 08 |
| 3. | Pharmacist | 200 | 200 | 200 | 200 | 800 |

ಸರ್ಕಾರದ ಆದೇಶದ ಪ್ರಕಾರ ಹೊರ ಗುತ್ತಿಗೆ ಆಧಾರದ ಮೇಲೆ 150 ಕಿರಿಯ ವೈದ್ಯಕೀಯ ಪ್ರಯೋಗಶಾಲಾ ತಂತ್ರಜ್ಞರು ಮತ್ತು 400 ಫಾರ್ಮಾಸಿಸ್ಟ್ ಹುದ್ದೆಗಳನ್ನು ಜಿಲ್ಲಾಧಿಕಾರಿಗಳ ಅಧ್ಯಕ್ಷತೆಯಲ್ಲಿ ಸಮಿತಿಯನ್ನು ರಚಿಸಿ ಭರ್ತಿ ಮಾಡಲು ಜಿಲ್ಲಾ ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಅಧಿಕಾರಿಗಳಿಗೆ ಸೂಚಿಸಲಾಗಿರುತ್ತದೆ. ಅಲ್ಲದೇ ಎನ್.ಹೆಚ್.ಎಂ. ಮುಖಾಂತರ 620 ಫಾರ್ಮಾಸಿಸ್ಟ್ ಹುದ್ದೆಗಳನ್ನು ಹಾಗೂ 1621 ಕಿರಿಯ ವೈದ್ಯಕೀಯ ಪ್ರಯೋಗಶಾಲಾ ತಂತ್ರಜ್ಞರನ್ನು ಗುತ್ತಿಗೆ ಆಧಾರದ ಮೇರೆಗೆ ನೇಮಕಾತಿ ಮಾಡಿಕೊಳ್ಳಲಾಗಿದೆ.

ಮುಂದುವರೆದು, ಇಲಾಖೆಯಲ್ಲಿ ಖಾಲಿ ಇರುವ 150 ಕಿರಿಯ ವೈದ್ಯಕೀಯ ಪ್ರಯೋಗ ಶಾಲಾ ತಂತ್ರಜ್ಞರು, 08 ಕ್ಷ–ಕಿರಣ ತಂತ್ರಜ್ಞರು ಹಾಗೂ 400 ಫಾರ್ಮಾಸಿಸ್ಟ್ ಹುದ್ದೆಗಳನ್ನು ಭರ್ತಿ ಮಾಡುವ ಸಂಬಂಧ ಕರ್ನಾಟಕ ಸಿವಿಲ್ ಸೇವೆಗಳ (ಸ್ಪರ್ಧಾತ್ಮಕ ಪರೀಕ್ಷೆಗಳು ಹಾಗೂ ಆಯ್ಕೆ ಮೂಲಕ ನೇಮಕಾತಿ (ಸಾಮಾನ್ಯ) ನಿಯಮಗಳು 2020ನ್ನು ರಚಿಸಲು ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆಯಿಂದ ಕ್ರಮ ಕೈಗೊಳ್ಳಲಾಗುತ್ತಿದ್ದು, ಸದರಿ ನಿಯಮಗಳು ಜಾರಿಗೆ ಬಂದ ನಂತರ ಆ ನಿಯಮಗಳನ್ವಯ ತುಂಬಲು ಪರಿಶೀಲಿಸಲಾಗುತ್ತಿದೆ.

<u>ಹೈದ್ರಾಬಾದ್–ಕರ್ನಾಟಕ ಪ್ರದೇಶದಲ್ಲಿ ಖಾಲಿ ಇರುವ ಅರೆ ವೈದ್ಯಕೀಯ ಹುದ್ದೆಗಳನ್ನು ಭರ್ತಿ ಮಾಡುವ ಬಗ್ಗೆ.</u>

ಹೈದ್ರಾಬಾದ್–ಕರ್ನಾಟಕ ಪ್ರದೇಶದಲ್ಲಿ ಖಾಲಿ ಇರುವ 293 ಅರೆ ವೈದ್ಯಕೀಯ ಹುದ್ದೆಗಳನ್ನು (ಗ್ರೂಪ್ 'ಬಿ' ವೃಂದದ 10 ಹುದ್ದೆಗಳು ಮತ್ತು ಗ್ರೂಪ್ 'ಸಿ' ವೃಂದದ 283 ಹುದ್ದೆಗಳು) ಭರ್ತಿ ಮಾಡುವ ಸಂಬಂಧ ಕರ್ನಾಟಕ ಸಿವಿಲ್ ಸೇವೆಗಳ (ಸ್ಪರ್ಧಾತ್ಮಕ ಪರೀಕ್ಷೆಗಳು ಹಾಗೂ ಆಯ್ಕೆ ಮೂಲಕ ನೇಮಕಾತಿ (ಸಾಮಾನ್ಯ) ನಿಯಮಗಳು 2020ನ್ನು ರಚಿಸಲು ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆಯಿಂದ ಕ್ರಮ ಕೈಗೊಳ್ಳಲಾಗುತ್ತಿದ್ದು, ಸದರಿ ನಿಯಮಗಳು ಜಾರಿಗೆ ಬಂದ ನಂತರ ಆ ನಿಯಮಗಳನ್ವಯ ತುಂಬಲು ಪರಿಶೀಲಿಸಲಾಗುತ್ತದೆ.

## ಕರ್ನಾಟಕ ವಿಧಾನಸಭೆ

| | |
|---|---|
| ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ | 2619 |
| ಮಾನ್ಯ ಸದಸ್ಯರ ಹೆಸರು | ಶ್ರೀ ಅರಗ ಜ್ಞಾನೇಂದ್ರ (ತೀರ್ಥಹಳ್ಳಿ) |
| ಉತ್ತರಿಸಬೇಕಾದ ದಿನಾಂಕ | 18-03-2021 |
| ಉತ್ತರಿಸುವ ಸಚಿವರು | ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಹಾಗೂ ವೈದ್ಯಕೀಯ ಶಿಕ್ಷಣ ಸಚಿವರು |

| ಕ್ರ.ಸಂ. | ಪ್ರಶ್ನೆ | ಉತ್ತರ |
|---|---|---|
| ಅ | ಶಿವಮೊಗ್ಗ ಜಿಲ್ಲೆ ತೀರ್ಥಹಳ್ಳಿ ವಿಧನಸಭಾ ಕ್ಷೇತ್ರ ವ್ಯಾಪ್ತಿಯಲ್ಲಿ ಬರುವ ಪ್ರಾಥಮಿಕ ಆರೋಗ್ಯ ಕೇಂದ್ರಗಳನ್ನು ಮೇಲ್ದರ್ಜೆಗೇರಿಸುವ ಪ್ರಸ್ತಾವನೆ ಸರ್ಕಾರದ ಮುಂದಿದೆಯೇ; | ಹೌದು |
| ಆ | ಇದ್ದಲ್ಲಿ, ಯಾವ ಕಾಲಮಿತಿಯೊಳಗೆ ಮೇಲ್ದರ್ಜೆಗೇರಿಸಲಾಗುವುದು; ಈ ಯೋಜನೆಗೆ ಸರ್ಕಾರ ನಿಗದಿಪಡಿಸಿದ ಅನುದಾನವೆಷ್ಟು; | ಆರ್ಥಿಕ ವಿಸ್ತರತೆ ಇಲ್ಲದಿರುವುದರಿಂದ ಪ್ರಾಥಮಿಕ ಆರೋಗ್ಯ ಕೇಂದ್ರಗಳನ್ನು ಸಮುದಾಯ ಆರೋಗ್ಯ ಕೇಂದ್ರಗಳನ್ನಾಗಿ ಮೇಲ್ದರ್ಜೆಗೇರಿಸುವ ಪ್ರಸ್ತಾವನೆಗಳನ್ನು ಸದ್ಯಕ್ಕೆ ತಡೆಹಿಡಿಯಲಾಗಿದೆ.<br><br>ಆದಾಗ್ಯೂ, 2020-21 ನೇ ಸಾಲಿನ ಆಯವ್ಯಯ ಭಾಷಣದಲ್ಲಿ ಘೋಷಿಸಿರುವಂತೆ **"ಹೆಚ್ಚು ಕಾರ್ಯ ಒತ್ತಡವಿರುವ ಪ್ರಾಥಮಿಕ ಆರೋಗ್ಯ ಕೇಂದ್ರಗಳಲ್ಲಿ ಹೆಚ್ಚುವರಿ ಸೇವೆಗಳನ್ನು ಹಾಗೂ ಅತ್ಯಾಧುನಿಕ ಸೌಲಭ್ಯಗಳನ್ನು ನೀಡುವ ಉದ್ದೇಶದಿಂದ ಅವುಗಳನ್ನು ಹಂತ ಹಂತವಾಗಿ ಮಾದರಿ ಪ್ರಾಥಮಿಕ ಆರೋಗ್ಯ ಕೇಂದ್ರಗಳಾಗಿ ಮೇಲ್ದರ್ಜೆಗೇರಿಸಲಾಗುವುದು. 2021-22 ನೇ ವರ್ಷದಲ್ಲಿ ಅಗತ್ಯ ಸಲಕರಣೆಗಳನ್ನು ಒದಗಿಸಿ ಮತ್ತು ಮಾನವ ಸಂಪನ್ಮೂಲಗಳನ್ನು ಮರುಹೊಂದಿಸಿ 250 ಮಾದರಿ ಕೇಂದ್ರಗಳನ್ನಾಗಿ ಮೇಲ್ದರ್ಜೆಗೇರಿಸಲಾಗುವುದು"** |
| ಇ | ತಾಲ್ಲೂಕು ಆಸ್ಪತ್ರೆ ಮತ್ತು ಕ್ಷೇತ್ರದ ಪಿ.ಹೆಚ್.ಸಿ ಗಳಲ್ಲಿ ವೈದ್ಯಾಧಿಕಾರಿಗಳು, ನರ್ಸ್‌ಗಳ, ಶುಶ್ರೂಷಕರು, ಡಿ-ಗ್ರೂಪ್ ನೌಕರರುಗಳ ಕೊರತೆಯಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; | ಬಂದಿದೆ |
| ಈ | ಬಂದಿದ್ದಲ್ಲಿ, ಖಾಲಿ ಹುದ್ದೆಗಳನ್ನು ಯಾವಾಗ ಭರ್ತಿ ಮಾಡಲಾಗುವುದು? (ವಿವರ ನೀಡುವುದು) | ಖಾಲಿ ಇರುವ ಹುದ್ದೆಗಳನ್ನು ಭರ್ತಿ ಮಾಡಲು ತೆಗೆದುಕೊಂಡ ಕ್ರಮಗಳ ವಿವರಗಳನ್ನು **ಅನುಬಂಧದಲ್ಲಿ** ನೀಡಲಾಗಿದೆ. |

**ಸಂಖ್ಯೆ:ಆಕುಕ 42 ಎಸ್‌ಎಂಎಂ 2021**

(ಡಾ||ಕೆ.ಸುಧಾಕರ್)
**ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಹಾಗೂ ವೈದ್ಯಕೀಯ ಶಿಕ್ಷಣ ಸಚಿವರು**

ಪ್ರಶ್ನೆ ಸಂಖ್ಯೆ ೩೬೧೧ ಕ್ಕೆ ಅನುಬಂಧ

ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆಯಲ್ಲಿ ಖಾಲಿ ಇರುವ ತಜ್ಞರು/ ಸಾಮಾನ್ಯ ಕರ್ತವ್ಯ ವೈದ್ಯಾಧಿಕಾರಿ/ದಂತ ಆರೋಗ್ಯಾಧಿಕಾರಿ ಹುದ್ದೆಗಳನ್ನು ನೇರ ನೇಮಕಾತಿ ಮೂಲಕ ಭರ್ತಿ ಮಾಡುವ ಪ್ರಕ್ರಿಯೆ ಜಾರಿಯಲ್ಲಿದ್ದು, ವಿಶೇಷ ನೇಮಕಾತಿ ಸಮಿತಿಯಿಂದ ನೇರ ನೇಮಕಾತಿ ಮುಖಾಂತರ 1460 ತಜ್ಞ ವೈದ್ಯರುಗಳ ಹುದ್ದೆಗಳನ್ನು(636 ಬ್ಯಾಕ್‌ಲಾಗ್ ಒಳಗೊಂಡಂತೆ), 1265 ಸಾಮಾನ್ಯ ಕರ್ತವ್ಯ ವೈದ್ಯಾಧಿಕಾರಿಗಳ ಹುದ್ದೆಗಳನ್ನು(19 ಬ್ಯಾಕ್‌ಲಾಗ್ ಹುದ್ದೆಗಳು ಸೇರಿದಂತೆ) ಹಾಗೂ 90 ದಂತ ಆರೋಗ್ಯಾಧಿಕಾರಿಗಳ ಹುದ್ದೆಗಳನ್ನು (02 ಬ್ಯಾಕ್‌ಲಾಗ್ ಹುದ್ದೆಗಳು ಸೇರಿದಂತೆ) ಭರ್ತಿ ಮಾಡಲು ಈಗಾಗಲೇ ಅಧಿಸೂಚನೆ ಸಂಖ್ಯೆ:ಎಸ್‌ಆರ್‌ಸಿ/68/2019-20, ದಿ:10.09.20 ನ್ನು ಹೊರಡಿಸಿ, ಅರ್ಹ ಅಭ್ಯರ್ಥಿಗಳಿಂದ ಅರ್ಜಿಯನ್ನು ಅಹ್ವಾನಿಸಲಾಗಿದ್ದು, ದಾಖಲೆಗಳ ಪರಿಶೀಲನೆ ಮುಗಿದಿರುತ್ತದೆ. ತಾತ್ಕಾಲಿಕ ಪಟ್ಟಿಯನ್ನು ಪ್ರಚುರಪಡಿಸುವ ಹಂತದಲ್ಲಿದೆ.

<u>ಕಿರಿಯ ಆರೋಗ್ಯ ಸಹಾಯಕರು:</u>

ಆಕುಕ ಇಲಾಖೆಯಲ್ಲಿ ಒಟ್ಟು 9850 ಕಿರಿಯ ಆರೋಗ್ಯ ಸಹಾಯಕ ಹುದ್ದೆಗಳು ಮಂಜೂರಾಗಿದ್ದು, ಖಾಲಿಯಿದ್ದ ಹುದ್ದೆಗಳ ಪೈಕಿ 2124 ಹುದ್ದೆಗಳನ್ನು 2018ನೇ ಸಾಲಿನಲ್ಲಿ ವಿಶೇಷ ನೇಮಕಾತಿ ನಿಯಮಗಳಡಿಯಲ್ಲಿ ಭರ್ತಿ ಮಾಡಲಾಗಿದ್ದು, ಒಟ್ಟಾರೆ 7123 ಹುದ್ದೆಗಳಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದು, ಪ್ರಸ್ತುತ 2727 ಹುದ್ದೆಗಳು ಖಾಲಿಯಿರುತ್ತವೆ.

<u>ಶುಶ್ರೂಷಕರು:</u>

ಆಕುಕ ಇಲಾಖೆಯಲ್ಲಿ ಒಟ್ಟು 8471 ಶುಶ್ರೂಷಕರ ಹುದ್ದೆಗಳು ಮಂಜೂರಾಗಿದ್ದು, ಖಾಲಿಯಿದ್ದ 4551 ಹುದ್ದೆಗಳ ಪೈಕಿ ಮೊದಲನೇ ಹಂತದಲ್ಲಿ 981 ಹುದ್ದೆಗಳನ್ನು ಭರ್ತಿ ಮಾಡಲಾಗಿರುತ್ತದೆ. ಜೊತೆಗೆ ಸರ್ಕಾರದ ಅಧಿಸೂಚನೆ ಸಂಖ್ಯೆ ಹೆಚ್‌ಎಫ್‌ಡಬ್ಲ್ಯೂ 550 ಹೆಚ್‌ಎಸ್‌ಹೆಚ್ 2016 ದಿನಾಂಕ 27.05.2017ರಲ್ಲಿ ಶುಶ್ರೂಷಕರು (ಡಿಪ್ಲಮೋ ನರ್ಸಿಂಗ್)- 889 ಹುದ್ದೆಗಳಿಗೆ ರಾಜ್ಯವಲಯದಡಿಯಲ್ಲಿ ಕಾರ್ಯನಿರ್ವಹಿಸುತ್ತಿರುವ ಗುತ್ತಿಗೆ ಶುಶ್ರೂಷಕರುಗಳಿಗೆ ಕೃಪಾಂಕ ಮತ್ತು ವಯೋಮಿತಿ ಸಡಿಲಿಕೆ ಸೌಲಭ್ಯಗಳನ್ನು ನೀಡಿ ಸರ್ಕಾರವು ವಿಶೇಷ ನೇಮಕಾತಿ ನಿಯಮಗಳನ್ನು ರಚಿಸಿ ದಿನಾಂಕ:16.07.2020ರಲ್ಲಿ ಅಂತಿಮ ಆಯ್ಕೆಪಟ್ಟಿಯನ್ನು ಪ್ರಚುರ ಪಡಿಸಲಾಗಿದ್ದು, ಅಂತಿಮ ಆಯ್ಕೆ ಪಟ್ಟಿಯಲ್ಲಿ ಆಯ್ಕೆಯಾದ ಅಭ್ಯರ್ಥಿಗಳ ಪೈಕಿ ನೈಜತೆ ವರದಿಗಳು ಸ್ವೀಕೃತವಾಗಿರುವ ಅಭ್ಯರ್ಥಿಗಳಿಗೆ ನೇಮಕಾತಿ ಆದೇಶವನ್ನು ನೀಡಲಾಗಿರುತ್ತದೆ. ಪ್ರಸ್ತುತ 5790 ಹುದ್ದೆಗಳಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದು, 2681 ಹುದ್ದೆಗಳು ಖಾಲಿಯಿರುತ್ತವೆ. ಇದರ ಜೊತೆಗೆ 5778 ಶುಶ್ರೂಷಕರನ್ನು ಎನ್.ಹೆಚ್.ಎಂ. ಮುಖಾಂತರ ಗುತ್ತಿಗೆ ಆಧಾರದ ಮೇಲೆ ನೇಮಿಸಿಕೊಳ್ಳಲಾಗಿದೆ.

<u>ಫಾರ್ಮಾಸಿಸ್ಟ್, ಕ್ಷ-ಕಿರಣ ತಂತ್ರಜ್ಞರು ಹಾಗೂ ಕಿರಿಯ ಪ್ರಯೋಗ ಶಾಲಾ ತಂತ್ರಜ್ಞರ ಹುದ್ದೆಗಳನ್ನು ಭರ್ತಿ ಮಾಡುವ ಬಗ್ಗೆ:</u>

ಆಕುಕ ಇಲಾಖೆಯಲ್ಲಿ 2932 ಫಾರ್ಮಾಸಿಸ್ಟ್ ಹುದ್ದೆಗಳು ಮಂಜೂರಾಗಿದ್ದು, 1974 ಹುದ್ದೆಗಳಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದಾರೆ. ಹಾಗೂ 2411 ಕಿರಿಯ ಪ್ರಯೋಗ ಶಾಲಾ ತಂತ್ರಜ್ಞರ ಹುದ್ದೆಗಳು ಮಂಜೂರಾಗಿದ್ದು, 1821 ಹುದ್ದೆಗಳಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದಾರೆ. ಸರ್ಕಾರದ ಪತ್ರ ಸಂಖ್ಯೆ: ಆಕುಕ 709 ಹೆಚ್‌ಎಸ್‌ಎಂ 2017, ದಿನಾಂಕ:03.08.2019ರಲ್ಲಿ ಇಲಾಖೆಯಲ್ಲಿ ಪ್ರಸ್ತುತ ಖಾಲಿ ಇರುವ ಫಾರ್ಮಾಸಿಸ್ಟ್, ಕ್ಷ-ಕಿರಣ ತಂತ್ರಜ್ಞರು ಹಾಗೂ ಕಿರಿಯ ಪ್ರಯೋಗ ಶಾಲಾ ತಂತ್ರಜ್ಞರ ಹುದ್ದೆಗಳನ್ನು ಆರ್ಥಿಕ ಇಲಾಖೆ ಟಿಪ್ಪಣಿ ಸಂಖ್ಯೆ: ಆಇ 843 ವೆಚ್ಚ-5/2018, ದಿನಾಂಕ:26.07.2019ರಲ್ಲಿ ನೀಡಿರುವ ಸಹಮತಿ ಪ್ರಕಾರ ಈ ಕೆಳಕಂಡಂತೆ ಭರ್ತಿ ಮಾಡಲು ಅನುಮೋದನೆಯನ್ನು ನೀಡಿರುತ್ತಾರೆ.

# ಕರ್ನಾಟಕ ವಿಧಾನ ಸಭೆ

| | |
|---|---|
| ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ | 2596 |
| ಮಾನ್ಯ ಸದಸ್ಯರ ಹೆಸರು | ಶ್ರೀ ಅಪ್ಪಚ್ಚು (ರಂಜನ್) ಎಂ.ಪಿ. (ಮಡಿಕೇರಿ) |
| ಉತ್ತರಿಸಬೇಕಾದ ದಿನಾಂಕ | 18/03/2021. |
| ಉತ್ತರಿಸಬೇಕಾದ ಸಚಿವರು | ಮಾನ್ಯ ಆರೋಗ್ಯ & ಕುಟುಂಬ ಕಲ್ಯಾಣ ಹಾಗೂ ವೈದ್ಯಕೀಯ ಶಿಕ್ಷಣ ಸಚಿವರು |

| ಕ್ರ. ಸಂ | ಪ್ರಶ್ನೆ | ಉತ್ತರ |
|---|---|---|
| (ಅ) | ಕೊಡಗು ಜಿಲ್ಲೆಯಲ್ಲಿರುವ ವೈದ್ಯಕೀಯ ಕಾಲೇಜಿನ ಮೂಲಭೂತ ಸೌಲಭ್ಯಕ್ಕಾಗಿ ಕಳೆದ ಮೂರು ವರ್ಷಗಳಿಂದ ಎಷ್ಟು ಅನುದಾನ ಮಂಜೂರಾಗಿದೆ; (ಪೂರ್ಣ ವಿವರ ನೀಡುವುದು) | ಕೊಡಗು ವೈದ್ಯಕೀಯ ವಿಜ್ಞಾನಗಳ ಸಂಸ್ಥೆ, ಮಡಿಕೇರಿ ಇಲ್ಲಿನ ಕಾಲೇಜಿನ ಮೂಲಭೂತ ಸೌಲಭ್ಯಕ್ಕಾಗಿ ಕಳೆದ ಮೂರು ವರ್ಷಗಳಿಂದ ಈ ಕೆಳಕಂಡಂತೆ ಅನುದಾನವನ್ನು ಬಿಡುಗಡೆ ಮಾಡಲಾಗಿರುತ್ತದೆ. (ಕೆಳಗಿನ ಕೋಷ್ಟಕಗಳು) |

**ಲೆಕ್ಕಶೀರ್ಷಿಕೆ 4210-03-105-1-10-386**

| ವರ್ಷ | ಬಿಡುಗಡೆಯಾದ ಅನುದಾನ ರೂ. ಗಳಲ್ಲಿ |
|---|---|
| 2018-19 | 27,90,38,000/- |
| 2019-20 | 35,25,48,000/- |
| 2020-21 | 12,00,00,000/- |

**ಲೆಕ್ಕಶೀರ್ಷಿಕೆ 2210-05-105-1-55-103**

| ವರ್ಷ | ಬಿಡುಗಡೆಯಾದ ಅನುದಾನ ರೂ. ಗಳಲ್ಲಿ |
|---|---|
| 2018-19 | 14,61,90,000/- |
| 2019-20 | 12,00,00.000/- |
| 2020-21 | 16,94,28,000/- |

| ಕ್ರ. ಸಂ | ಪ್ರಶ್ನೆ | ಉತ್ತರ |
|---|---|---|
| (ಆ) | ಈ ಜಿಲ್ಲೆಯ ವೈದ್ಯಕೀಯ ಕಾಲೇಜಿಗೆ ಮಂಜೂರಾದ ಹುದ್ದೆಗಳೆಷ್ಟು; ಈ ಪೈಕಿ ಕರ್ತವ್ಯ ನಿರ್ವಹಿಸುತ್ತಿರುವ ಸಿಬ್ಬಂದಿಗಳ ಸಂಖ್ಯೆ ಎಷ್ಟು; | ಕೊಡಗು ವೈದ್ಯಕೀಯ ವಿಜ್ಞಾನಗಳ ಸಂಸ್ಥೆ ಮಡಿಕೇರಿಯಲ್ಲಿ ಮಂಜೂರಾದ, ಭರ್ತಿಯಾದ ಮತ್ತು ಖಾಲಿ ಇರುವ ಹುದ್ದೆಗಳ ವಿವರ ಈ ಕೆಳಕಂಡಂತಿರುತ್ತದೆ. (ಕೆಳಗಿನ ಕೋಷ್ಟಕ) |

| ಗ್ರೂಪ್ | ಮಂಜೂರಾದ ಹುದ್ದೆ | ಭರ್ತಿಯಾದ ಹುದ್ದೆ | ಖಾಲಿ ಇರುವ ಹುದ್ದೆ |
|---|---|---|---|
| ಎ | 228 | 127 | 101 |
| ಬಿ | 0 | 0 | 0 |
| ಸಿ | 203 | 183 | 20 |
| ಡಿ | 47 | 47 | 00 |

| ಕ್ರ. ಸಂ | ಪ್ರಶ್ನೆ | ಉತ್ತರ |
|---|---|---|
| (ಇ) | ಖಾಲಿ ಇರುವ ಹುದ್ದೆಗಳನ್ನು ಯಾವಾಗ ಭರ್ತಿ ಮಾಡಲಾಗುವುದು? (ಪೂರ್ಣ ವಿವರ ನೀಡುವುದು) | ಗ್ರೂಪ್-"ಎ" ಖಾಲಿ ಹುದ್ದೆಗಳನ್ನು ಭರ್ತಿ ಮಾಡಲು ಕಾಲಕಾಲಕ್ಕೆ ನಿಯಮಾನುಸಾರ ನೇರ ಸಂದರ್ಶನಗಳನ್ನು ನಡೆಸಿ ಅರ್ಹರನ್ನು ಭರ್ತಿ ಮಾಡಲು ಕ್ರಮ ವಹಿಸಲಾಗಿದೆ. ಹಾಗೂ ಗ್ರೂಪ್-"ಸಿ" ಹುದ್ದೆಗಳನ್ನು ಕರ್ನಾಟಕ ಪರೀಕ್ಷಾ ಪ್ರಾಧಿಕಾರದ ಮೂಲಕ ಭರ್ತಿ ಮಾಡಲು ಕ್ರಮವಹಿಸಲಾಗಿದೆ. |

**ಕಡತ ಸಂ: ಎಂಇಡಿ 160 ಎಂ ಎಸ್ ಎಫ್ 2021**

(ಡಾ: ಕೆ. ಸುಧಾಕರ್)
ಆರೋಗ್ಯ & ಕುಟುಂಬ ಕಲ್ಯಾಣ ಹಾಗೂ
ವೈದ್ಯಕೀಯ ಶಿಕ್ಷಣ ಸಚಿವರು.

# ಕರ್ನಾಟಕ ವಿಧಾನ ಸಭೆ

| | | |
|---|---|---|
| ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ | : | 1565 |
| ಸದಸ್ಯರ ಹೆಸರು | : | ಶ್ರೀ ರಘುಮೂರ್ತಿ ಟಿ. (ಚಳ್ಳಕೆರೆ) |
| ಉತ್ತರಿಸುವ ದಿನಾಂಕ | : | 18-03-2021 |
| ಉತ್ತರಿಸುವ ಸಚಿವರು | : | ಪ್ರಾಥಮಿಕ ಮತ್ತು ಪ್ರೌಢ ಶಿಕ್ಷಣ ಹಾಗೂ ಸಕಾಲ ಸಚಿವರು |

| ಕ್ರ ಸಂ. | ಪ್ರಶ್ನೆ | ಉತ್ತರ |
|---|---|---|
| ಅ) | ಚಿತ್ರದುರ್ಗ ಜಿಲ್ಲೆ ಚಳ್ಳಕೆರೆ ತಾಲ್ಲೂಕಿನ ಬೆಳಗಟ್ಟ ಗ್ರಾಮದಲ್ಲಿ ಸರ್ಕಾರಿ ಪದವಿ ಪೂರ್ವ ಕಾಲೇಜು ಪ್ರಾರಂಭಿಸುವ ಪ್ರಸ್ತಾವನೆಯು ಸರ್ಕಾರದ ಗಮನಕ್ಕೆ ಬಂದಿದೆಯೇ; | ಹೌದು<br><br>ಚಿತ್ರದುರ್ಗ ಜಿಲ್ಲೆ ಚಳ್ಳಕೆರೆ ವಿಧಾನಸಭಾ ಕ್ಷೇತ್ರಕ್ಕೆ ಒಳಪಡುವ ಚಿತ್ರದುರ್ಗ ತಾಲ್ಲೂಕಿನ ಬೆಳಗಟ್ಟ ಗ್ರಾಮದಲ್ಲಿ ಸರ್ಕಾರಿ ಪದವಿ ಪೂರ್ವ ಕಾಲೇಜು ಪ್ರಾರಂಭ ಮಾಡುವ ಬಗ್ಗೆ ಶೂನ್ಯ ದಾಖಲಾತಿ ಹೊಂದಿರುವ ಸರ್ಕಾರಿ ಪದವಿ ಪೂರ್ವ ಕಾಲೇಜುಗಳ ಮಾಹಿತಿಯನ್ನು ಪಡೆಯಲಾಗಿದ್ದು, ಪ್ರಸ್ತಾವನೆಯು ಸರ್ಕಾರದ ಪರಿಶೀಲನೆಯಲ್ಲಿದೆ. |
| ಆ) | ಬಂದಿದ್ದಲ್ಲಿ, ಈವರೆವಿಗೂ ಪ್ರಾರಂಭ ಮಾಡದಿರಲು ಕಾರಣವೇನು; (ವಿವರ ನೀಡುವುದು) | |
| ಇ) | ಪ್ರಸ್ತಾಪಿತ ಕಾಲೇಜಿಗಾಗಿ ಸ್ಥಳೀಯ ದಾನಿಯೊಬ್ಬರು ಉಚಿತವಾಗಿ ಜಮೀನು ದಾನ ನೀಡಿದ್ದು, ಈಗಾಗಲೇ ಇಲಾಖೆಯ ಹೆಸರಿಗೆ ನೋಂದಣಿಯಾಗಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; (ವಿವರ ನೀಡುವುದು) | ಹೌದು<br><br>ಬೆಳಘಟ್ಟ ಗ್ರಾಮದ ಸರ್ವೆ ನಂ: 110/3 ರ ವಿಸ್ತೀರ್ಣ : ಒಂದು ಎಕರೆ ಹದಿನಾರು ಗುಂಟೆ (1–16) ಜಾಗವನ್ನು ಚಿತ್ರದುರ್ಗ ತಾಲ್ಲೂಕು, ತುರುವನೂರು ಹೋಬಳಿ, ಬೆಳಗಟ್ಟ ಗ್ರಾಮದಲ್ಲಿ ವಾಸವಾಗಿರುವ ದಿವಂಗತ ಲಚ್ಚಣ್ಣರೆಡ್ಡಿ ಇವರ ಮಗನಾದ ಶ್ರೀ ಡಿ.ಎಲ್ ಭೀಮಾರೆಡ್ಡಿ ಇವರು ದಾನರೂಪದಲ್ಲಿ ಭೂಮಿಯನ್ನು ನೀಡಿರುತ್ತಾರೆ. ಉಪನೊಂದಣಾಧಿಕಾರಿಗಳ ಕಾರ್ಯಾಲಯ, ಚಿತ್ರದುರ್ಗ ಇಲ್ಲಿ ದಿನಾಂಕ:21.05.2013ರಂದು ನೋಂದಣಿಯಾಗಿರುತ್ತದೆ. |
| ಈ) | ರಾಜ್ಯದಲ್ಲಿ ವಿದ್ಯಾರ್ಥಿಗಳ ಸಂಖ್ಯೆ ಕಡಿಮೆ ಇರುವ ಕಾಲೇಜನ್ನು ಸ್ಥಳಾಂತರಿಸುವ ಬಗ್ಗೆ ಹೊರಡಿಸಲಾದ ಆದೇಶ ರದ್ದುಪಡಿಸಲಾಗಿದ್ದುದರ ಸಂಪೂರ್ಣ ವಿವರ ನೀಡುವುದು; | ಸರ್ಕಾರಿ ಪದವಿ ಪೂರ್ವ ಕಾಲೇಜುಗಳಲ್ಲಿ ವಿದ್ಯಾರ್ಥಿಗಳ ಸಂಖ್ಯೆ ಕಡಿಮೆ ಇರುವ ಕಾಲೇಜನ್ನು ಗುರುತಿಸಿ ಅಂತಹ ಕಾಲೇಜುಗಳನ್ನು ಸ್ಥಳೀಯ ಜನಪ್ರತಿನಿಧಿಗಳು/ಶಾಸಕರು/ ಗಣ್ಯವ್ಯಕ್ತಿಗಳಿಂದ ಹೊಸ ಪದವಿ ಪೂರ್ವಕಾಲೇಜು/ಪ್ರೌಢ ಶಾಲೆಯನ್ನು ಮೇಲ್ದರ್ಜೆಗೇರಿಸಲು ಪ್ರಸ್ತಾವನೆ ಸಲ್ಲಿತವಾದಲ್ಲಿ ಆಧ್ಯತೆ ಮೇರೆಗೆ ಅಂತಹ ಪ್ರಸ್ತಾವನೆಗಳನ್ನು ಸ್ಥಳಾಂತರಗೊಳಿಸುವ ಕುರಿತಂತೆ ಪರಿಶೀಲಿಸಲಾಗುವುದು. |

| | | |
|---|---|---|
| ಉ) | ಯಾವಾಗ ಕಾಲೇಜನ್ನು ಪ್ರಾರಂಭಿಸಲಾಗುವುದು; | ಈ ಬಗ್ಗೆ ಪರಿಶೀಲಿಸಲಾಗುತ್ತಿದೆ. |
| ಊ) | ಕಳೆದ 3 ವರ್ಷಗಲ್ಲಿ ಚಳ್ಳಕೆರೆ ಕ್ಷೇತ್ರದ ಸರ್ಕಾರಿ ಶಾಲೆ/ಕಾಲೇಜುಗಳಿಗೆ ಯಾವ ಯಾವ ಯೋಜನೆಯಡಿ ವಿದ್ಯಾರ್ಥಿಗಳ ಸಂಖ್ಯೆಗೆ ಅನುಗುಣವಾಗಿ ಹೊಸ ಕೊಠಡಿಗಳನ್ನು ಮಂಜೂರು ಮಾಡಲಾಗಿದೆ? (ಸಂಪೂರ್ಣ ವಿವರ ನೀಡುವುದು) | ಕಳೆದ 3 ವರ್ಷಗಳಲ್ಲಿ ಚಳ್ಳಕೆರೆ ಕ್ಷೇತ್ರದ ಸರ್ಕಾರಿ ಶಾಲೆಗಳಿಗೆ ವಿದ್ಯಾರ್ಥಿಗಳ ಸಂಖ್ಯೆಗೆ ಅನುಗುಣವಾಗಿ ಹೊಸ ಕೊಠಡಿಗಳನ್ನು ಮಂಜೂರು ಮಾಡಲಾಗಿದ್ದು, ಪಟ್ಟಿಯನ್ನು ಅನುಬಂಧ–01ರಲ್ಲಿ ಲಗತ್ತಿಸಿದೆ.<br><br>ಕಳೆದ 3 ವರ್ಷಗಳಲ್ಲಿ ಚಳ್ಳಕೆರೆ ಮತ ಕ್ಷೇತ್ರದ ವ್ಯಾಪ್ತಿಯಲ್ಲಿ ಬರುವ ಸರ್ಕಾರಿ ಪದವಿ ಪೂರ್ವ ಕಾಲೇಜುಗಳಿಗೆ ಮಂಜೂರಾಗಿರುವ ಕಾಮಗಾರಿಗಳ ವಿವರವನ್ನು ಅನುಬಂಧ–02ರಲ್ಲಿ ಲಗತ್ತಿಸಿದೆ. |

**ಸಂಖ್ಯೆ: ಇಪಿ 58 ಡಿಜಿಡಬ್ಲ್ಯೂ 2021**

(ಎಸ್.ಸುರೇಶ್ ಕುಮಾರ್)
ಪ್ರಾಥಮಿಕ ಮತ್ತು ಪ್ರೌಢ ಶಿಕ್ಷಣ ಹಾಗೂ ಸಕಾಲ ಸಚಿವರು.

# ಕರ್ನಾಟಕ ವಿಧಾನ ಸಭೆ

| ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ | 1574 |
|---|---|
| ಸದಸ್ಯರ ಹೆಸರು | ಶ್ರೀ ವೇದವ್ಯಾಸ ಕಾಮತ್ ಡಿ.(ಮಂಗಳೂರು ನಗರ ದಕ್ಷಿಣ) |
| ಉತ್ತರಿಸಬೇಕಾದ ದಿನಾಂಕ | 18–03–2021 |
| ಉತ್ತರಿಸಬೇಕಾದ ಸಚಿವರು | ಪ್ರಾಥಮಿಕ ಮತ್ತು ಪ್ರೌಢ ಶಿಕ್ಷಣ ಹಾಗೂ ಸಕಾಲ ಸಚಿವರ |

| ಪ್ರಶ್ನೆ | ಉತ್ತರ |
|---|---|
| **ಅ)** ರಾಜ್ಯದ ಸರ್ಕಾರಿ ಶಾಲೆಗಳಲ್ಲಿ 2020–21ನೇ ಸಾಲಿನಿಂದ ಪೂರ್ವ ಪ್ರಾಥಮಿಕ ಹಾಗೂ ಪ್ರಾಥಮಿಕ ಶಾಲೆಗಳಲ್ಲಿ ಆಂಗ್ಲ ಮಾಧ್ಯಮವನ್ನು ಪ್ರಾರಂಭಿಸಲು ಪ್ರಸ್ತಾವನೆ ಸಲ್ಲಿಸಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; | ಸರ್ಕಾರಿ ಪ್ರಾಥಮಿಕ ಶಾಲೆಗಳಲ್ಲಿ 2020–21ನೇ ಸಾಲಿನಲ್ಲಿ 1ನೇ ತರಗತಿಯ ಆಂಗ್ಲ ಮಾಧ್ಯಮ ವಿಭಾಗವನ್ನು ಪ್ರಾರಂಭಿಸಲು ಪ್ರಸ್ತಾವನೆ ಸಲ್ಲಿಸಿರುವುದು ಗಮನಕ್ಕೆ ಬಂದಿರುತ್ತದೆ. |
| ಆ) ಬಂದಿದ್ದಲ್ಲಿ, ಅಂಗ್ಲ ಮಾಧ್ಯಮವನ್ನು ಪ್ರಾರಂಭಿಸುವಲ್ಲಿ ಸರ್ಕಾರವು ಕೈಗೊಂಡಿರುವ ಕ್ರಮಗಳೇನು; | ಸರ್ಕಾರಿ ಪ್ರಾಥಮಿಕ ಶಾಲೆಗಳಲ್ಲಿ ಕನ್ನಡ ಮಾಧ್ಯಮದ ಜೊತೆಗೆ 1ನೇ ತರಗತಿಯ ಒಂದು ಉಭಯ ಭಾಷಾ ವಿಭಾಗವನ್ನು ಪ್ರಾರಂಭಿಸಲು ಜಿಲ್ಲಾ ಉಪ ನಿರ್ದೇಶಕರ ಪ್ರಸ್ತಾವನೆಗಳನ್ನು ಆಧರಿಸಿ 939 ಶಾಲೆಗಳು ಹಾಗೂ ಸರ್ಕಾರಿ ಉರ್ದು ಶಾಲೆಗಳಲ್ಲಿ ಉರ್ದು ಮಾಧ್ಯಮದ ಜೊತೆಗೆ 1ನೇ ತರಗತಿಯ ಒಂದು ಉಭಯ ಭಾಷಾ ತರಗತಿಯನ್ನು ಪ್ರಾರಂಭಿಸಲು 400 ಶಾಲೆಗಳ ಪಟ್ಟಿಯೊಂದಿಗೆ 2020–21ನೇ ಸಾಲಿನಲ್ಲಿ ಪ್ರಾರಂಭಿಸಲು ಸರ್ಕಾರದ ಆದೇಶ ಹೊರಡಿಸಲಾಗಿದೆ. |
| ಇ) ಎಷ್ಟು ಸರ್ಕಾರಿ ಪೂರ್ವ ಪ್ರಾಥಮಿಕ ಹಾಗೂ ಪ್ರಾಥಮಿಕ ಶಾಲೆಗಳಿಗೆ ಆಂಗ್ಲ ಮಾಧ್ಯಮ ಪ್ರಾರಂಭಿಸಲು ಸರ್ಕಾರ ಅನುಮತಿ ನೀಡಿದೆ? (ದಕ್ಷಿಣ ಕನ್ನಡ ಜಿಲ್ಲೆಯಲ್ಲಿ ಒಟ್ಟು ಅನುಮತಿ ಪಡೆದ ಶಾಲೆಗಳ ವಿವರ ನೀಡುವುದು) | (see table below) |

| ವಿವರ | ರಾಜ್ಯದಲ್ಲಿ 1ನೇ ತರಗತಿಯ ಉಭಯ ಭಾಷಾ ವಿಭಾಗಗಳಲ್ಲಿ ಪ್ರಾರಂಭಿಸಿರುವ ಶಾಲೆಗಳ ಸಂಖ್ಯೆ | ದಕ್ಷಿಣ ಕನ್ನಡ ಜಿಲ್ಲೆಯಲ್ಲಿ 1ನೇ ತರಗತಿಯ ಉಭಯ ಭಾಷಾ ವಿಭಾಗಗಳಲ್ಲಿ ಪ್ರಾರಂಭಿಸಿರುವ ಶಾಲೆಗಳ ಸಂಖ್ಯೆ |
|---|---|---|
| 2019–20ಕ್ಕೆ ಘೋಷಿತವಾದ ಶಾಲೆಗಳು | 1001 | 48 |
| 2020–21ಕ್ಕೆ ಘೋಷಿತವಾದ ಶಾಲೆಗಳು | 939 | 32 |
| 2020–21ಕ್ಕೆ ಘೋಷಿತವಾದ ಉರ್ದು ಶಾಲೆಗಳು | 400 | --- |

ಇಪಿ 102 ಪಿಜಿಸಿ 2021

[ ಎಸ್.ಸುರೇಶ್ ಕುಮಾರ್]
ಪ್ರಾಥಮಿಕ ಮತ್ತು ಪ್ರೌಢ ಶಿಕ್ಷಣ ಹಾಗೂ
ಸಕಾಲ ಸಚಿವರು.

# ಕರ್ನಾಟಕ ವಿಧಾನಸಭೆ

1) ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 2061

2) ಸದಸ್ಯರ ಹೆಸರು : ಶ್ರೀ ಹಾಲಾಡಿ ಶ್ರೀನಿವಾಸ ಶೆಟ್ಟಿ (ಕುಂದಾಪುರ)

3) ಉತ್ತರಿಸುವ ದಿನಾಂಕ : 18.03.2021

4) ಉತ್ತರಿಸುವವರು : ಅರಣ್ಯ, ಕನ್ನಡ ಮತ್ತು ಸಂಸ್ಕೃತಿ ಸಚಿವರು

| ಕ್ರ ಸಂ | ಪ್ರಶ್ನೆ | ಉತ್ತರ |
|---|---|---|
| ಅ) | ದಿನಾಂಕ:19.09.2016ರ ಸರ್ಕಾರಿ ಆದೇಶದಲ್ಲಿ ಕಾಡುಪ್ರಾಣಿಗಳಿಂದ ಬೆಳೆ ನಾಶವಾದಲ್ಲಿ ಪರಿಹಾರ ನೀಡುವ ಮಾನದಂಡದಲ್ಲಿ ತೆಂಗಿನಮರ ನಾಶವಾದಲ್ಲಿ ಮರವೊಂದಕ್ಕೆ ಅದರ ವಯಸ್ಸಿನ ಆಧಾರದ ಮೇಲೆ ಪರಿಹಾರ ನೀಡಲಾಗಿರುತ್ತದೆ. ಆದರೆ ಕಾಡುಪ್ರಾಣಿಗಳು (ಮಂಗಗಳು) ತೆಂಗಿನ ಮರವನ್ನು ಹಾನಿ ಮಾಡುವ ಬದಲಾಗಿ ತೆಂಗಿನ ಎಳನೀರು ಅಥವಾ ತೆಂಗಿನಕಾಯಿ ನಾಶ ಮಾಡುವುದರಿಂದ ರೈತರಿಗೆ ನಷ್ಟವಾಗುತ್ತಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; | ಬಂದಿದೆ. |
| ಆ) | ಬಂದಿದ್ದಲ್ಲಿ, ಆ ಆದೇಶವನ್ನು ಮರುಪರಿಶೀಲಿಸಿ ರೈತರಿಗೆ ಅನುಕೂಲ ಮಾಡಿಕೊಡಲಾಗುವುದೇ; | ಈ ಬಗ್ಗೆ ಪ್ರಸ್ತಾವನೆಯು ಪರಿಶೀಲನೆಯಲ್ಲಿದೆ. |

ಸಂಖ್ಯೆ: ಅಪಜೀ 57 ಎಫ್‌ಡಬ್ಲ್ಯೂಎಲ್ 2021

(ಅರವಿಂದ ಲಿಂಬಾವಳಿ)
ಅರಣ್ಯ, ಕನ್ನಡ ಮತ್ತು ಸಂಸ್ಕೃತಿ ಸಚಿವರು

# ಕರ್ನಾಟಕ ವಿಧಾನ ಸಭೆ

ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 2955

ಸದಸ್ಯರ ಹೆಸರು : ಶ್ರೀ ವೆಂಕಟರಮಣಯ್ಯ ಟಿ (ದೊಡ್ಡಬಳ್ಳಾಪುರ)

ಉತ್ತರಿಸುವ ದಿನಾಂಕ : 18.03.2021

ಉತ್ತರಿಸುವ ಸಚಿವರು : ಪ್ರಾಥಮಿಕ ಮತ್ತು ಪ್ರೌಢ ಶಿಕ್ಷಣ ಹಾಗೂ ಸಕಾಲ ಸಚಿವರು.

| ಕ್ರ ಸಂ. | ಪ್ರಶ್ನೆ | ಉತ್ತರ |
|---|---|---|
| ಅ) | ದೊಡ್ಡಬಳ್ಳಾಪುರ ವಿಧಾನ ಸಭಾ ಕ್ಷೇತ್ರದ ಪ್ರಾಥಮಿಕ ಮತ್ತು ಪ್ರೌಢ ಶಿಕ್ಷಣ ಶಾಲೆಗಳ ಅಭಿವೃದ್ಧಿ ಹಾಗೂ ಮೂಲಭೂತ ಸೌಕರ್ಯಗಳಿಗೆ 2018 ರಿಂದ 2020ನೇ ಸಾಲಿನವರೆಗೆ ವಿವಿಧ ಲೆಕ್ಕ ಶೀರ್ಷಿಕೆಯಡಿಯಲ್ಲಿ ಮಂಜೂರು ಮಾಡಲಾದ ಅನುದಾನ ಹಾಗೂ ಕಾಮಗಾರಿಗಳ ವಿವರ ನೀಡುವುದು. | 2018 ರಿಂದ 2020ನೇ ಸಾಲಿನವರೆಗೆ ವಿವಿಧ ಲೆಕ್ಕ ಶೀರ್ಷಿಕೆಯಡಿಯಲ್ಲಿ ರಾಜ್ಯ ವಲಯ ಹಾಗೂ ಎಸ್.ಎಸ್.ಕೆ ವತಿಯಿಂದ ಸರ್ಕಾರಿ ಶಾಲೆ ದುರಸ್ಥಿ ಹಾಗೂ ಮರು ನಿರ್ಮಾಣ ಕಾಮಗಾರಿಗಾಗಿ ಮಂಜೂರು ಮಾಡಲಾದ ಅನುದಾನ ರೂ.392.98 ಲಕ್ಷಗಳು (ವಿವರ ಲಗತ್ತಿಸಿದೆ). |
| ಆ) | ದೊಡ್ಡಬಳ್ಳಾಪುರ ವಿಧಾನ ಸಭಾ ಕ್ಷೇತ್ರದಲ್ಲಿನ ಎಲ್ಲಾ ಗ್ರಾಮ ಪಂಚಾಯಿತಿಗಳಲ್ಲಿ ಗ್ರಂಥಾಲಯಗಳನ್ನು ಸ್ಥಾಪಿಸಲಾಗಿದೆಯೆ; | ದೊಡ್ಡಬಳ್ಳಾಪುರ ವಿಧಾನ ಸಭಾ ಕ್ಷೇತ್ರದಲ್ಲಿ 29 ಗ್ರಾಮ ಪಂಚಾಯಿತಿಗಳಿದ್ದು, ಎಲ್ಲಾ ಗ್ರಾಮ ಪಂಚಾಯಿತಿಗಳಲ್ಲಿ ಗ್ರಂಥಾಲಯಗಳನ್ನು ಸ್ಥಾಪಿಸಲಾಗಿದೆ. |
| ಇ) | ಅಲ್ಲಿ ಗ್ರಂಥಪಾಲಕರನ್ನು ನೇಮಕ ಮಾಡಲಾಗಿದೆಯೇ; (ವಿವರ ನೀಡುವುದು) | ದೊಡ್ಡಬಳ್ಳಾಪುರ ವಿಧಾನ ಸಭಾ ಕ್ಷೇತ್ರದ 29 ಗ್ರಾಮ ಪಂಚಾಯಿತಿ ಗ್ರಂಥಾಲಯಗಳಲ್ಲಿ ಮೇಲ್ವಿಚಾರಕರನ್ನು ನೇಮಕ ಮಾಡಲಾಗಿದೆ. ಅವುಗಳಲ್ಲಿ ಹೆಗ್ಗಡಿಹಳ್ಳಿ ಗ್ರಾಮ ಪಂಚಾಯತಿ ಗ್ರಂಥಾಲಯದ ಮೇಲ್ವಿಚಾರಕರು ದಿನಾಂಕ: 27.04.2019ರಂದು ನಿಧನ ಹೊಂದಿರುತ್ತಾರೆ. ಸದರಿ ಗ್ರಂಥಾಲಯಕ್ಕೆ ಮೇಲ್ವಿಚಾರಕರನ್ನು ನೇಮಕಾತಿ ಮಾಡಲು ಕ್ರಮವಹಿಸಲಾಗುತ್ತಿದೆ.<br><br>29 ಗ್ರಾಮ ಪಂಚಾಯಿತಿ ಗ್ರಂಥಾಲಯಗಳ ಮೇಲ್ವಿಚಾರಕರುಗಳ ವಿವರವನ್ನು ಅನುಬಂಧ–01ರಂತೆ ಲಗತ್ತಿಸಿದೆ. |
| ಈ) | ಸದರಿ ಗ್ರಂಥಾಲಯಗಳಲ್ಲಿ ಯಾವ ಯಾವ ಸೌಲಭ್ಯಗಳನ್ನು ಒದಗಿಸಲಾಗಿದೆ? (ವಿವರ ನೀಡುವುದು) | ಗ್ರಾಮ ಪಂಚಾಯಿತಿ ವತಿಯಿಂದ ನೀಡಲಾದ ಉಚಿತ ಕಟ್ಟಡಗಳಲ್ಲಿ ಗ್ರಂಥಾಲಯಗಳನ್ನು ತೆರೆಯಲಾಗಿದೆ. ಗ್ರಂಥಾಲಯ ಸೌಲಭ್ಯಗಳಾದ ಪುಸ್ತಕಗಳು, ನಿಯತಕಾಲಿಕೆಗಳು ಮತ್ತು ದಿನಪತ್ರಿಕೆಗಳು ಹಾಗೂ ಪೀಠೋಪಕರಣಗಳನ್ನು ಒದಗಿಸಲಾಗಿದೆ.<br><br>ಮುಂದುವರೆದು, ಸರ್ಕಾರದ ಆದೇಶ ಸಂಖ್ಯೆ:ಇಡಿ 64 ಎಲ್‌ಐಬಿ 2015, ದಿನಾಂಕ:26.02.2019 ಮತ್ತು 24.07.2019ಗಳನ್ವಯ ದಿನಾಂಕ:01.03.2019ರಿಂದ |

|  |  | ಜಾರಿಗೆ ಬರುವಂತೆ ಗ್ರಾಮ ಪಂಚಾಯಿತಿ ಗ್ರಂಥಾಲಯಗಳನ್ನು ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆಯ ಮೂಲಕ ಗ್ರಾಮ ಪಂಚಾಯಿತಿಗಳಿಗೆ ವರ್ಗಾಯಿಸಲಾಗಿದೆ. |
|---|---|---|

**ಸಂಖ್ಯೆ: ಇಡಿ 29 ಎಸ್‌ಟಿಬಿ 2021**

(ಎಸ್.ಸುರೇಶ್‌ಕುಮಾರ್)
ಪ್ರಾಥಮಿಕ ಮತ್ತು ಪ್ರೌಢ ಶಿಕ್ಷಣ ಹಾಗೂ
ಸಕಾಲ ಸಚಿವರು

ಉಪನಿರ್ದೇಶಕರ ಕಛೇರಿ ಸಾರ್ವಜನಿಕ ಶಿಕ್ಷಣ ಇಲಾಖೆ ಬೆಂಗಳೂರು ಗ್ರಾಮಾಂತರ ಜಿಲ್ಲೆ

## ದೊಡ್ಡಬಳ್ಳಾಪುರ ತಾಲ್ಲೂಕಿನ ಮೂಲಭೂತ ಸೌಕರ್ಯಗಳಿಗೆ 2018-ರಿಂದ 2020ನೇ ಸಾಲಿನವರೆಗೆ ವಿವಿಧ ಲೆಕ್ಕಶೀರ್ಷಿಕೆಯಡಿ ಬಿಡುಗಡೆಯಾದ ಅನುದಾನ ವಿವರ

| ಕ್ರ.ಸಂ | ಲೆಕ್ಕ ಶೀರ್ಷಿಕೆ | ವಿವರ | ಶಾಲೆಗಳ ಹೆಸರು | ಕೊಠಡಿಗಳ ಸಂಖ್ಯೆ | ಬಿಡುಗಡೆಯಾದ ಅನುದಾನ |
|---|---|---|---|---|---|
| 1 | 4202-01-201-1-04-059 | 2018-19 ನೇ ಸಾಲಿನಲ್ಲಿ ಸರ್ಕಾರಿ ಪ್ರಾಥಮಿಕ ಶಾಲೆಗಳಿಗೆ ನೆಲಸಮಗೊಳಿಸಿ ಮರು ನಿರ್ಮಾಣದ ಕಾಮಗಾರಿಗಳಿಗೆ ಬಿಡುಗಡೆಯಾದ ಅನುದಾನ(3 ವರ್ಷದ ವಿಶೇಷ ಪ್ಯಾಕೇಜ್ ಯೋಜನೆ) | ಸ.ಹಿ.ಪ್ರಾ.ಶಾಲೆ,ಗುಂಡಪ್ಪನಾಯಕನಹಳ್ಳಿ | 1 | 10.60 |
| 2 | | | ಸ.ಹಿ.ಪ್ರಾ.ಶಾಲೆ, ಕಲ್ಲಕುಂಟೆ | 1 | 10.60 |
| 3 | | | ಸ.ಹಿ.ಪ್ರಾ.ಶಾಲೆ, ಗುಂಡಂಗೆರೆ | 1 | 10.60 |
| 4 | | | ಸ.ಹಿ.ಪ್ರಾ.ಶಾಲೆ, ಜಾಲಿಗೆರೆ | 1 | 10.60 |
| 5 | | | ಸ.ಹಿ.ಪ್ರಾ.ಶಾಲೆ, ತಪಸಿಹಳ್ಳಿ | 1 | 10.60 |
| 6 | | | ಸ.ಹಿ.ಪ್ರಾ.ಶಾಲೆ, ವರದನಹಳ್ಳಿ | 1 | 10.60 |
| 7 | | | ಸ.ಹಿ.ಪ್ರಾ.ಶಾಲೆ, ಸಕ್ಕರೆಗೊಲ್ಲಹಳ್ಳಿ | 1 | 10.60 |
| 8 | | | ಸ.ಹಿ.ಪ್ರಾ.ಶಾಲೆ, ದೊಡ್ಡಬೆಳವಂಗಲ | 1 | 10.60 |
| 9 | | | ಸ.ಹಿ.ಪ್ರಾ.ಶಾಲೆ, ಹುಲಿಕುಂಟೆ | 2 | 21.20 |
| 10 | | | ಸ.ಪ್ರೌ.ಶಾಲೆ, ಹೊಸಹಳ್ಳಿ | 5 | 78.75 |
| 11 | 4202-01-201-1-04-386 | 2018-19 ನೇ ಸಾಲಿನಲ್ಲಿ ಸರ್ಕಾರಿ ಪ್ರೌಢ ಶಾಲೆಗಳಿಗೆ ನೆಲಸಮಗೊಳಿಸಿ ಮರು ನಿರ್ಮಾಣದ ಕೊಠಡಿಗಳ ಬಿಡುಗಡೆಯಾದ ಅನುದಾನ(3 ವರ್ಷದ ವಿಶೇಷ ಪ್ಯಾಕೇಜ್ ಯೋಜನೆ) | ಸ.ಪ್ರೌ.ಶಾಲೆ, ತೂಬಗೆರೆ | 1 | 15.75 |

(7)

| | | | | | |
|---|---|---|---|---|---|
| 12 | 2202-01-053-0-01-200 | 2018-19 ನೇ ಸಾಲಿನಲ್ಲಿ ಸರ್ಕಾರಿ ಪ್ರಾಥಮಿಕ ಶಾಲೆಗಳಿಗೆ ದುರಸ್ಥಿ ಅನುದಾನ | ಸ.ಹಿ.ಪ್ರಾ.ಶಾಲೆ. ಹೊಸಹಳ್ಳಿ ಪಾಂಡ | 3 | |
| 13 | | | ಸ.ಹಿ.ಪ್ರಾ.ಶಾಲೆ, ಮುಪ್ಪಡಿಘಟ್ಟ | 1 | 2 |
| 14 | | | ಸ.ಹಿ.ಪ್ರಾ.ಶಾಲೆ, ಕತ್ತಿಹೊಸಹಳ್ಳಿ | 1 | 1.75 |
| 15 | 2202-02-053-0-01-059/422/423 | 2018-19 ನೇ ಸಾಲಿನಲ್ಲಿ ಸರ್ಕಾರಿ ಪ್ರೌಢ ಶಾಲೆಗಳಿಗೆ ದುರಸ್ಥಿ ಅನುದಾನ | ಸ.ಪ್ರೌ.ಶಾಲೆ, ಸಕ್ಕರೆಗೊಲ್ಲಹಳ್ಳಿ | 3 | 5.8 |
| 16 | | | ಸ.ಪ್ರೌ.ಶಾಲೆ, ಅರಳುಮಲ್ಲಿಗೆ ಬಾಗಿಲು | 3 | 4 |
| 17 | ಲೆಕ್ಕ ಶೀರ್ಷಿಕೆ: 4202-01-202-1-05-386 | ರಾಜ್ಯ ವಲಯದ 2018-19ನೇ ಸಾಲಿನ ಸರ್ಕಾರಿ ಪ್ರೌಢ ಶಾಲೆಗಳ ಕೊಠಡಿ ಮರುನಿರ್ಮಾಣದ ವಿವರ | ಸ.ಪ.ಪೂ.ಕಾಲೇಜು. ದೊಡ್ಡಬೆಳವಂಗಲ(ಪ್ರೌ.ಶಾ.ವಿಭಾಗ) | 2 | 31.50 |
| 18 | 4202-01-201-0-04-059 | ರಾಜ್ಯ ವಲಯದ 2018-19ನೇ ಸಾಲಿನಲ್ಲಿ ಸರ್ಕಾರಿ ಪ್ರಾಥಮಿಕ ಶಾಲೆಗಳ ಕೊಠಡಿ ಮರುನಿರ್ಮಾಣದ ವಿವರ | ಸ.ಕಿ.ಪ್ರಾ, ಶಾಲೆ, ಕರೇಕಲ್ಲುಪಾಳ್ಯ | 1 | 10.60 |
| 19 | 2202-01-053-0-01-059 | 2018-19ನೇ ಸಾಲಿನ ಆಯವ್ಯದಲ್ಲಿ "ಪಾರಂಪರಿಕ ಶಾಲೆಗಳ" ನವೀಕರಿಸುವ ಕುರಿತು | ಸರ್ಕಾರಿ ಮಾದರಿ ಹಿರಿಯ ಪ್ರಾಥಮಿಕ ಶಾಲೆ, ನೇಯಗೇಯರ ಬೀದಿ | 2 | 5 |
| 20 | 4202-01-201-1-04-422 | 2019-20ರಲ್ಲಿ ರಾಜ್ಯ ವಲಯದ ಯೋಜನೆಯಡಿ ಸರ್ಕಾರಿ ಶಾಲೆಗಳಿಗೆ ಕೊಠಡಿ ನಿರ್ಮಾಣ ಕಾಮಗಾರಿಗೆ ಬಿಡುಗಡೆಯಾದ ಅನುದಾನ | ಸ.ಕಿ.ಪ್ರಾ.ಶಾಲೆ, ಕಣಿವೆಪುರ | 1 | 10.60 |
| 21 | 2202-02-053-0-01-059/422 | 2019-20ರಲ್ಲಿ ರಾಜ್ಯ ವಲಯದ ಯೋಜನೆಯಡಿ ಸರ್ಕಾರಿ ಪ್ರೌಢ ಶಾಲೆಗಳ ದುರಸ್ಥಿ ಕಾಮಗಾರಿಗೆ ಬಿಡುಗಡೆಯಾದ ಅನುದಾನ | ತೆಲುಗು ಪ್ರೌ.ಶಾಲೆ ದೊಡ್ಡಬಳ್ಳಾಪುರ | 4 | 3.156 |
| 22 | | | ಸ.ಪ್ರೌ.ಶಾಲೆ ಹಣಬೆ | 3 | 2.367 |

| 23 | 2202-01-053-0-01-200 | 2019-20ರಲ್ಲಿ ರಾಜ್ಯ ವಲಯದ ಯೋಜನೆಯಡಿ ಸರ್ಕಾರಿ ಪ್ರಾಥಮಿಕ ಶಾಲೆಗಳ ದುರಸ್ಥಿ ಕಾಮಗಾರಿಗೆ ಬಿಡುಗಡೆಯಾದ ಅನುದಾನ | ಸ.ಹಿ.ಪ್ರಾ.ಶಾಲೆ ಮೇಳೆಕೋಟೆ | 7 | 3.738 |
|---|---|---|---|---|---|
| 24 | | | ಸ.ಹಿ.ಪ್ರಾ.ಶಾಲೆ ಅರಳುಮಲ್ಲಿಗೆ ಬಾಗಿಲು | 2 | 4 |
| 25 | | | ಸ.ಹಿ.ಪ್ರಾ.ಶಾಲೆ ಖಾಸ್ ಬಾಗ್ | 1 | 1.87 |
| 26 | | | ಸ.ಕಿ.ಪ್ರಾ.ಶಾಲೆ ಲಕ್ಕೇನಹಳ್ಳಿ | 1 | 11 |
| 27 | 42202-01-201-1-04-436 | 2019-20ನೇ ಸಾಲಿನಲ್ಲಿ ನಬಾರ್ಡ್ ಸಹಯೋಗದಿಂದ ಆರ್.ಐ.ಡಿ.ಎಫ್-25 ಯೋಜನೆಯಡಿ ಮಳೆಯಿಂದ ಹಾನಿಗೊಳಗಾದ ಶಾಲಾ ಕೊಠಡಿಗಳ ಮರು ನಿರ್ಮಾಣ ಕಾಮಗಾರಿಗ ಬಿಡುಗಡೆಯಾದ ಅನುಧಾನ | ಸ.ಕಿ.ಪ್ರಾ.ಶಾಲೆ ತಿಮ್ಮಸಂದ್ರ | 2 | 22 |
| 28 | | | ಸ.ಪ.ಪೂ ಕಾಲೇಜ್ ಕನಸವಾಡಿ(ಪ್ರೌ.ಶಾ. ವಿಭಾಗ) | 3 | 47.1 |
| 29 | | | ಸ.ಕಿ.ಪ್ರಾ.ಶಾಲೆ ಶಿರಸ್ತೆದಾರನಪಾಳ್ಯ | 1 | 5.5 |
| 30 | 420201-202-1-07 | 2019-20ರಲ್ಲಿ ಎಸ್.ಎಸ್.ಕೆ ವತಿಯಿಂದ ಸರ್ಕಾರಿ ಶಾಲೆಗಳಿಗೆ ಮೂಲಭೂತ ಸೌಕರ್ಯ ಕಲ್ಪಿಸಲು ಅನುದಾನ ಬಿಡುಗಡೆ | ಸ.ಕಿ.ಪ್ರಾ.ಶಾಲೆ ಭೂಮೆನಹಳ್ಳಿ | 1 | 5.5 |
| 31 | | | ಸ.ಹಿ.ಪ್ರಾ.ಶಾಲೆ ತಂಬೇನಹಳ್ಳಿ | 1 | 5.5 |
| 32 | | | ಸ.ಕಿ.ಪ್ರಾ.ಶಾಲೆ ಕೆಳಗಿನ ನಾಯಕರಾಂಡಹಳ್ಳಿ | 1 | 5.5 |
| | | ಒಟ್ಟು | | **60** | **392.98** |

# ಅನುಬಂಧ-1

| ಕ್ರ.ಸಂ. | ಗ್ರಾಮ ಪಂಚಾಯತಿ ಗ್ರಂಥಾಲಯಗಳ ಹೆಸರು | ಮೇಲ್ವಿಚಾರಕರುಗಳ ಹೆಸರು |
|---|---|---|
| 1. | ಎಸ್.ಎಸ್.ಘಾಟಿ | ಶ್ರೀ ಎಂ.ವೆಂಕಟೇಶ |
| 2. | ಕನಸವಾಡಿ | ಶ್ರೀ ಎ.ಎಸ್.ಪೂರ್ಣಚಂದ್ರ |
| 3. | ಕಾಡನೂರು | ಶ್ರೀಕೆ.ಆರ್‌ಲಕ್ಷ್ಮೀನರಸಿಂಹಮೂರ್ತಿ |
| 4. | ತೂಬುಗೆರೆ | ಶ್ರೀ ಎಸ್.ಆರ್.ಮಂಜುನಾಥ |
| 5. | ಚನ್ನದೇವಿ ಅಗ್ರಹಾರ | ಶ್ರೀಮತಿ ಬಿ.ವಸಂತಕುಮಾರಿ |
| 6. | ಮೆಳೆಕೋಟೆ | ಶ್ರೀಮತಿ ಎಮ್.ಎನ್ ಮುನಿಕೃಷ್ಣಮ್ಮ |
| 7. | ಅರಳುಮಲ್ಲಿಗೆ | ಶ್ರೀ ಎಸ್.ಗುರುಶಂಕರಯ್ಯ |
| 8. | ಹೆಗ್ಗಡಿಹಳ್ಳಿ | ಖಾಲಿ(ಮೇಲ್ವಿಚಾರಕರ ನೇಮಕಾತಿಗಾಗಿ ಕ್ರಮವಹಿಸಲಾಗುತ್ತಿದೆ). |
| 9. | ಸಾಸಲು | ಶ್ರೀಮತಿ ಸಿ.ಮಾಲಾ |
| 10. | ಬಾಶೆಟ್ಟಿ ಹಳ್ಳಿ | ಶ್ರೀಮತಿ ಅನಿತಾ ಹೆಚ್.ಆರ್. |
| 11. | ಹೊನ್ನಾವರ | ಶ್ರೀ ಎಸ್.ಬಿ.ರವಿಕುಮಾರ್ |
| 12. | ಹಾದ್ರಿಪುರ | ಶ್ರೀ ರಂಗಸ್ವಾಮಯ್ಯ ಎಲ್. |
| 13. | ತಿಪ್ಪೂರು | ಶ್ರೀ ಎನ್. ಮಂಜುನಾಥ |
| 14. | ಮಜರಾ ಹೊಸಹಳ್ಳಿ | ಶ್ರೀಮತಿ ಮುದ್ದು ಮೀನಾ.ಬಿ.ಎಂ |
| 15. | ಹೊಸಹಳ್ಳಿ | ಶ್ರೀಮತಿ ಟಿ.ಎಂ.ಮಂಜುಳ |
| 16. | ಆರೂಢಿ | ಶ್ರೀ ಶಂಕರಾಚಾರಿ ಎ.ಎನ್. |
| 17. | ಕಂಟನಕುಂಟೆ | ಶ್ರೀ ವಿ. ಲಕ್ಷ್ಮೀನಾರಾಯಣ |
| 18. | ಹಾಡೋನಹಳ್ಳಿ | ಹೆಚ್.ಆರ್.ಮಧು |
| 19. | ದರ್ಗಾ ಜೋಗಿಹಳ್ಳಿ | ಶ್ರೀಮತಿ ಮಮತ.ಎನ್ |
| 20. | ಹುಲಿಕುಂಟೆ | ಶ್ರೀಮತಿ ಟಿ.ಗಾಯಿತ್ರಿ |
| 21. | ದೊಡ್ಡ ತುಮಕೂರು | ಶ್ರೀಮತಿ ಹೆಚ್.ಚನ್ನಮ್ಮ |
| 22. | ಕೋನಘಟ್ಟ | ಶ್ರೀಮತಿ ಜಿ.ಕೆ.ಸುಗುಣ |
| 23. | ದೊಡ್ಡಬೆಳವಂಗಲ | ಶ್ರೀಮತಿ ದಿವ್ಯಜ್ಯೋತಿ |
| 24. | ಸಕ್ಕರೆಗೊಲ್ಲಹಳ್ಳಿ | ಶ್ರೀಮತಿ ಹೆಚ್.ವಸಂತಕುಮಾರಿ |
| 25. | ಭಕ್ತರಹಳ್ಳಿ | ಶ್ರೀ ಸತೀಶ್ ಬಿ.ಎಸ್. |
| 26. | ಕೆಸ್ತೂರು | ಶ್ರೀಮತಿ ಶೈಲಜ |
| 27. | ರಾಜಘಟ್ಟ | ಶ್ರೀಮತಿ ಬಿ.ಎನ್.ಮಂಜುಳ |
| 28. | ಕೊಡಿಗೇಹಳ್ಳಿ | ಶ್ರೀಮತಿ. ಆರ್.ಅನಸೂಯ |
| 29. | ಹಣಬೆ | ಶ್ರೀ ಶಿವಕುಮಾರ್.ಹೆಚ್.ಎಲ್. |

ನಿರ್ದೇಶಕರು
ಸಾರ್ವಜನಿಕ ಗ್ರಂಥಾಲಯ ಇಲಾಖೆ
ಬೆಂಗಳೂರು.

U.K/LALC/2955

# ಕರ್ನಾಟಕ ವಿಧಾನ ಸಭೆ

ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 2955

ಸದಸ್ಯರ ಹೆಸರು : ಶ್ರೀ ವೆಂಕಟರಮಣಯ್ಯ ಟಿ (ದೊಡ್ಡಬಳ್ಳಾಪುರ)

ಉತ್ತರಿಸುವ ದಿನಾಂಕ : 18.03.2021

ಉತ್ತರಿಸುವ ಸಚಿವರು : ಪ್ರಾಥಮಿಕ ಮತ್ತು ಪ್ರೌಢ ಶಿಕ್ಷಣ ಹಾಗೂ ಸಕಾಲ ಸಚಿವರು.

| ಕ್ರ ಸಂ. | ಪ್ರಶ್ನೆ | ಉತ್ತರ |
|---|---|---|
| ಅ) | ದೊಡ್ಡಬಳ್ಳಾಪುರ ವಿಧಾನ ಸಭಾ ಕ್ಷೇತ್ರದ ಪ್ರಾಥಮಿಕ ಮತ್ತು ಪ್ರೌಢ ಶಿಕ್ಷಣ ಶಾಲೆಗಳ ಅಭಿವೃದ್ಧಿ ಹಾಗೂ ಮೂಲಭೂತ ಸೌಕರ್ಯಗಳಿಗೆ 2018 ರಿಂದ 2020ನೇ ಸಾಲಿನವರೆಗೆ ವಿವಿಧ ಲೆಕ್ಕ ಶೀರ್ಷಿಕೆಯಡಿಯಲ್ಲಿ ಮಂಜೂರು ಮಾಡಲಾದ ಅನುದಾನ ಹಾಗೂ ಕಾಮಗಾರಿಗಳ ವಿವರ ನೀಡುವುದು. | 2018 ರಿಂದ 2020ನೇ ಸಾಲಿನವರೆಗೆ ವಿವಿಧ ಲೆಕ್ಕ ಶೀರ್ಷಿಕೆಯಡಿಯಲ್ಲಿ ರಾಜ್ಯ ವಲಯ ಹಾಗೂ ಎಸ್.ಎಸ್.ಕೆ ವತಿಯಿಂದ ಸರ್ಕಾರಿ ಶಾಲೆ ದುರಸ್ಥಿ ಹಾಗೂ ಮರು ನಿರ್ಮಾಣ ಕಾಮಗಾರಿಗಾಗಿ ಮಂಜೂರು ಮಾಡಲಾದ ಅನುದಾನ ರೂ.392.98 ಲಕ್ಷಗಳು (ವಿವರ ಲಗತ್ತಿಸಿದೆ). |
| ಆ) | ದೊಡ್ಡಬಳ್ಳಾಪುರ ವಿಧಾನ ಸಭಾ ಕ್ಷೇತ್ರದಲ್ಲಿನ ಎಲ್ಲಾ ಗ್ರಾಮ ಪಂಚಾಯಿತಿಗಳಲ್ಲಿ ಗ್ರಂಥಾಲಯಗಳನ್ನು ಸ್ಥಾಪಿಸಲಾಗಿದೆಯೆ; | ದೊಡ್ಡಬಳ್ಳಾಪುರ ವಿಧಾನ ಸಭಾ ಕ್ಷೇತ್ರದಲ್ಲಿ 29 ಗ್ರಾಮ ಪಂಚಾಯಿತಿಗಳಿದ್ದು, ಎಲ್ಲಾ ಗ್ರಾಮ ಪಂಚಾಯಿತಿಗಳಲ್ಲಿ ಗ್ರಂಥಾಲಯಗಳನ್ನು ಸ್ಥಾಪಿಸಲಾಗಿದೆ. |
| ಇ) | ಅಲ್ಲಿ ಗ್ರಂಥಪಾಲಕರನ್ನು ನೇಮಕ ಮಾಡಲಾಗಿದೆಯೇ; (ವಿವರ ನೀಡುವುದು) | ದೊಡ್ಡಬಳ್ಳಾಪುರ ವಿಧಾನ ಸಭಾ ಕ್ಷೇತ್ರದ 29 ಗ್ರಾಮ ಪಂಚಾಯಿತಿ ಗ್ರಂಥಾಲಯಗಳಲ್ಲಿ ಮೇಲ್ವಿಚಾರಕರನ್ನು ನೇಮಕ ಮಾಡಲಾಗಿದೆ. ಅವುಗಳಲ್ಲಿ ಹೆಗ್ಗಡಿಹಳ್ಳಿ ಗ್ರಾಮ ಪಂಚಾಯತಿ ಗ್ರಂಥಾಲಯದ ಮೇಲ್ವಿಚಾರಕರು ದಿನಾಂಕ: 27.04.2019ರಂದು ನಿಧನ ಹೊಂದಿರುತ್ತಾರೆ. ಸದರಿ ಗ್ರಂಥಾಲಯಕ್ಕೆ ಮೇಲ್ವಿಚಾರಕರನ್ನು ನೇಮಕಾತಿ ಮಾಡಲು ಕ್ರಮವಹಿಸಲಾಗುತ್ತಿದೆ.<br><br>29 ಗ್ರಾಮ ಪಂಚಾಯಿತಿ ಗ್ರಂಥಾಲಯಗಳ ಮೇಲ್ವಿಚಾರಕರುಗಳ ವಿವರವನ್ನು ಅನುಬಂಧ-01ರಂತೆ ಲಗತ್ತಿಸಿದೆ. |
| ಈ) | ಸದರಿ ಗ್ರಂಥಾಲಯಗಳಲ್ಲಿ ಯಾವ ಯಾವ ಸೌಲಭ್ಯಗಳನ್ನು ಒದಗಿಸಲಾಗಿದೆ? (ವಿವರ ನೀಡುವುದು) | ಗ್ರಾಮ ಪಂಚಾಯಿತಿ ವತಿಯಿಂದ ನೀಡಲಾದ ಉಚಿತ ಕಟ್ಟಡಗಳಲ್ಲಿ ಗ್ರಂಥಾಲಯಗಳನ್ನು ತೆರೆಯಲಾಗಿದೆ. ಗ್ರಂಥಾಲಯ ಸೌಲಭ್ಯಗಳಾದ ಪುಸ್ತಕಗಳು, ನಿಯತಕಾಲಿಕೆಗಳು ಮತ್ತು ದಿನಪತ್ರಿಕೆಗಳು ಹಾಗೂ ಪೀಠೋಪಕರಣಗಳನ್ನು ಒದಗಿಸಲಾಗಿದೆ.<br><br>ಮುಂದುವರೆದು, ಸರ್ಕಾರದ ಆದೇಶ ಸಂಖ್ಯೆ:ಇಡಿ 64 ಎಲ್ಐಬಿ 2015, ದಿನಾಂಕ:26.02.2019 ಮತ್ತು 24.07.2019ಗಳನ್ವಯ ದಿನಾಂಕ:01.03.2019ರಿಂದ |

|  |  | ಜಾರಿಗೆ ಬರುವಂತೆ ಗ್ರಾಮ ಪಂಚಾಯಿತಿ ಗ್ರಂಥಾಲಯಗಳನ್ನು ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆಯ ಮೂಲಕ ಗ್ರಾಮ ಪಂಚಾಯಿತಿಗಳಿಗೆ ವರ್ಗಾಯಿಸಲಾಗಿದೆ. |
|---|---|---|

ಸಂಖ್ಯೆ: ಇಡಿ 29 ಎಸ್‌ಟಿಬಿ 2021

(ಎಸ್.ಸುರೇಶ್‌ಕುಮಾರ್)
ಪ್ರಾಥಮಿಕ ಮತ್ತು ಪ್ರೌಢ ಶಿಕ್ಷಣ ಹಾಗೂ
ಸಕಾಲ ಸಚಿವರು

ಉಪನಿರ್ದೇಶಕರ ಕಛೇರಿ ಸಾರ್ವಜನಿಕ ಶಿಕ್ಷಣ ಇಲಾಖೆ ಬೆಂಗಳೂರು ಗ್ರಾಮಾಂತರ ಜಿಲ್ಲೆ

## ದೊಡ್ಡಬಳ್ಳಾಪುರ ತಾಲ್ಲೂಕಿನ ಮೂಲಭೂತ ಸೌಕರ್ಯಗಳಿಗೆ 2018-ರಂದ 2020ನೇ ಸಾಲಿನವರೆಗೆ ವಿವಿಧ ಲೆಕ್ಕಶೀರ್ಷಿಕೆಯಡಿ ಬಿಡುಗಡೆಯಾದ ಅನುದಾನ ವಿವರ

| ಕ್ರಸಂ | ಲೆಕ್ಕ ಶೀರ್ಷಿಕೆ | ವಿವರ | ಶಾಲೆಗಳ ಹೆಸರು | ಕೊಠಡಿಗಳ ಸಂಖ್ಯೆ | ಬಿಡುಗಡೆಯಾದ ಅನುದಾನ |
|---|---|---|---|---|---|
| 1 | 4202-01-201-1-04-059 | 2018-19 ನೇ ಸಾಲಿನಲ್ಲಿ ಸರ್ಕಾರಿ ಪ್ರಾಥಮಿಕ ಶಾಲೆಗಳಿಗೆ ನೆಲಸಮಗೊಳಿಸಿ ಮರು ನಿರ್ಮಾಣದ ಕಾಮಗಾರಿಗಳಿಗೆ ಬಿಡುಗಡೆಯಾದ ಅನುದಾನ(3 ವರ್ಷದ ವಿಶೇಷ ಪ್ಯಾಕೇಜ್ ಯೋಜನೆ) | ಸ.ಹಿ.ಪ್ರಾ.ಶಾಲೆ,ಗುಂಡಪ್ಪನಾಯಕನಹಳ್ಳಿ | 1 | 10.60 |
| 2 | | | ಸ.ಹಿ.ಪ್ರಾ.ಶಾಲೆ, ಕಲ್ಲುಕುಂಟೆ | 1 | 10.60 |
| 3 | | | ಸ.ಹಿ.ಪ್ರಾ.ಶಾಲೆ, ಗುಂಡಂಗೆರೆ | 1 | 10.60 |
| 4 | | | ಸ.ಹಿ.ಪ್ರಾ.ಶಾಲೆ, ಜಾಲಿಗೆರೆ | 1 | 10.60 |
| 5 | | | ಸ.ಹಿ.ಪ್ರಾ.ಶಾಲೆ, ತಪಸಿಹಳ್ಳಿ | 1 | 10.60 |
| 6 | | | ಸ.ಹಿ.ಪ್ರಾ.ಶಾಲೆ, ವರದನಹಳ್ಳಿ | 1 | 10.60 |
| 7 | | | ಸ.ಹಿ.ಪ್ರಾ.ಶಾಲೆ, ಸಕ್ಕರೆಗೊಲ್ಲಹಳ್ಳಿ | 1 | 10.60 |
| 8 | | | ಸ.ಹಿ.ಪ್ರಾ.ಶಾಲೆ, ದೊಡ್ಡಬೆಳವಂಗಲ | 1 | 10.60 |
| 9 | | | ಸ.ಹಿ.ಪ್ರಾ.ಶಾಲೆ, ಹುಲಿಕುಂಟೆ | 2 | 21.20 |
| 10 | | | ಸ.ಪ್ರೌ.ಶಾಲೆ, ಹೊಸಹಳ್ಳಿ | 5 | 78.75 |
| 11 | 4202-01-201-1-04-386 | 2018-19 ನೇ ಸಾಲಿನಲ್ಲಿ ಸರ್ಕಾರಿ ಪ್ರೌಢ ಶಾಲೆಗಳಿಗೆ ನೆಲಸಮಗೊಳಿಸಿ ಮರು ನಿರ್ಮಾಣದ ಕೊಠಡಿಗಳ ಬಿಡುಗಡೆಯಾದ ಅನುದಾನ(3 ವರ್ಷದ ವಿಶೇಷ ಪ್ಯಾಕೇಜ್ ಯೋಜನೆ) | ಸ.ಪ್ರೌ.ಶಾಲೆ, ತೂಬಗೆರೆ | 1 | 15.75 |

| | | | ಸ.ಹಿ.ಪ್ರಾ.ಶಾಲೆ. ಹೊಸಹಳ್ಳಿ ತಾಂಡ | 3 | 2 |
|---|---|---|---|---|---|
| 12 | 2202-01-053-0-01-200 | 2018-19 ನೇ ಸಾಲಿನಲ್ಲಿ ಸರ್ಕಾರಿ ಪ್ರಾಥಮಿಕ ಶಾಲೆಗಳಿಗೆ ದುರಸ್ಥಿ ಅನುದಾನ | ಸ.ಹಿ.ಪ್ರಾ.ಶಾಲೆ, ಮುಷ್ಟಿಘಟ್ಟ | 1 | 1.75 |
| 13 | | | ಸ.ಹಿ.ಪ್ರಾ.ಶಾಲೆ, ಕತ್ತಿಹೊಸಹಳ್ಳಿ | 1 | 5.8 |
| 14 | | | ಸ.ಪ್ರೌ.ಶಾಲೆ, ಸಕ್ಕರೆಗೊಲ್ಲಹಳ್ಳಿ | 3 | 4 |
| 15 | 2202-02-053-0-01-059/422/423 | 2018-19 ನೇ ಸಾಲಿನಲ್ಲಿ ಸರ್ಕಾರಿ ಪ್ರೌಢ ಶಾಲೆಗಳಿಗೆ ದುರಸ್ಥಿ ಅನುದಾನ | ಸ.ಪ್ರೌ.ಶಾಲೆ, ಅರಳುಮಲ್ಲಿಗೆ ಬಾಗಿಲು | 3 | |
| 16 | | | | | |
| 17 | ಲೆಕ್ಕ ಶೀರ್ಷಿಕೆ: 4202-01-202-1-05-386 | ರಾಜ್ಯ ವಲಯದ 2018-19ನೇ ಸಾಲಿನ ಸರ್ಕಾರಿ ಪ್ರೌಢ ಶಾಲೆಗಳ ಕೊಠಡಿ ಮರುನಿರ್ಮಾಣದ ವಿವರ | ಸ.ಪ.ಪೂ.ಕಾಲೇಜು. ದೊಡ್ಡಬೆಳವಂಗಲ(ಪ್ರೌ.ಶಾ.ವಿಭಾಗ) | 2 | 31.50 |
| 18 | 4202-01-201-0-04-059 | ರಾಜ್ಯ ವಲಯದ 2018-19ನೇ ಸಾಲಿನಲ್ಲಿ ಸರ್ಕಾರಿ ಪ್ರಾಥಮಿಕ ಶಾಲೆಗಳ ಕೊಠಡಿ ಮರುನಿರ್ಮಾಣದ ವಿವರ | ಸ.ಕಿ.ಪ್ರಾ. ಶಾಲೆ, ಕರೇಕಲ್ಲುಪಾಳ್ಯ | 1 | 10.60 |
| 19 | 2202-01-053-0-01-059 | 2018-19ನೇ ಸಾಲಿನ ಆಯವ್ಯದಲ್ಲಿ "ಪಾರಂಪರಿಕ ಶಾಲೆಗಳ" ನವೀಕರಿಸುವ ಕುರಿತು | ಸರ್ಕಾರಿ ಮಾದರಿ ಹಿರಿಯ ಪ್ರಾಥಮಿಕ ಶಾಲೆ, ನೇಯಗೇಯರ ಬೀದಿ | 2 | 5 |
| 20 | 4202-01-201-1-04-422 | 2019-20ರಲ್ಲಿ ರಾಜ್ಯ ವಲಯದ ಯೋಜನೆಯಡಿ ಸರ್ಕಾರಿ ಶಾಲೆಗಳಿಗೆ ಕೊಠಡಿ ನಿರ್ಮಾಣ ಕಾಮಗಾರಿಗೆ ಬಿಡುಗಡೆಯಾದ ಅನುದಾನ | ಸ.ಕಿ.ಪ್ರಾ.ಶಾಲೆ, ಕಣಿವೆಪುರ | 1 | 10.60 |
| 21 | 2202-02-053-0-01-059/422 | 2019-20ರಲ್ಲಿ ರಾಜ್ಯ ವಲಯದ ಯೋಜನೆಯಡಿ ಸರ್ಕಾರಿ ಪ್ರೌಢ ಶಾಲೆಗಳ ದುರಸ್ಥಿ ಕಾಮಗಾರಿಗೆ ಬಿಡುಗಡೆಯಾದ ಅನುದಾನ | ತೆಲುಗು ಪ್ರೌ.ಶಾಲೆ ದೊಡ್ಡಬಳ್ಳಾಪುರ | 4 | 3.156 |
| 22 | | | ಸ.ಪ್ರೌ.ಶಾಲೆ ಹಣಬೆ | 3 | 2.367 |

| | | | | | |
|---|---|---|---|---|---|
| 23 | 2202-01-053-0-01-200 | 2019-20ರಲ್ಲಿ ರಾಜ್ಯ ವಲಯದ ಯೋಜನೆಯಡಿ ಸರ್ಕಾರಿ ಪ್ರಾಥಮಿಕ ಶಾಲೆಗಳ ದುರಸ್ಥಿ ಕಾಮಗಾರಿಗೆ ಬಿಡುಗಡೆಯಾದ ಅನುದಾನ | ಸ.ಹಿ.ಪ್ರಾ.ಶಾಲೆ ಮೆಳೆಕೋಟೆ | 7 | 3.738 |
| 24 | | | ಸ.ಹಿ.ಪ್ರಾ.ಶಾಲೆ ಅರಳುಮಲ್ಲಿಗೆ ಬಾಗಿಲು | 2 | 4 |
| 25 | | | ಸ.ಹಿ.ಪ್ರಾ.ಶಾಲೆ ಖಾಸ್ ಬಾಗ್ | 1 | 1.87 |
| 26 | 42202-01-201-1-04-436 | 2019-20ನೇ ಸಾಲಿನಲ್ಲಿ ನಬಾರ್ಡ್ ಸಹಯೋಗದಿಂದ ಆರ್.ಐ.ಡಿ.ಎಫ್-25 ಯೋಜನೆಯಡಿ ಮಳೆಯಿಂದ ಹಾನಿಗೊಳಗಾದ ಶಾಲಾ ಕೊಠಡಿಗಳ ಮರು ನಿರ್ಮಾಣ ಕಾಮಗಾರಿಗೆ ಬಿಡುಗಡೆಯಾದ ಅನುದಾನ | ಸ.ಕಿ.ಪ್ರಾ.ಶಾಲೆ ಲಕ್ಕೇನಹಳ್ಳಿ | 1 | 11 |
| 27 | | | ಸ.ಕಿ.ಪ್ರಾ.ಶಾಲೆ ತಿಮ್ಮಸಂದ್ರ | 2 | 22 |
| 28 | | | ಸ.ಪ.ಪೂ ಕಾಲೇಜ್ ಕನಸವಾಡಿ(ಪ್ರೌ.ಶಾ. ವಿಭಾಗ) | 3 | 47.1 |
| 29 | 420201-202-1-07 | 2019-20ರಲ್ಲಿ ಎಸ್.ಎಸ್.ಕೆ ವತಿಯಿಂದ ಸರ್ಕಾರಿ ಶಾಲೆಗಳಿಗೆ ಮೂಲಭೂತ ಸೌಕರ್ಯ ಕಲ್ಪಿಸಲು ಅನುದಾನ ಬಿಡುಗಡೆ | ಸ.ಕಿ.ಪ್ರಾ.ಶಾಲೆ ಶಿರಸ್ತೇದಾರನಪಾಳ್ಯ | 1 | 5.5 |
| 30 | | | ಸ.ಕಿ.ಪ್ರಾ.ಶಾಲೆ ಭೂಮೆನಹಳ್ಳಿ | 1 | 5.5 |
| 31 | | | ಸ.ಹಿ.ಪ್ರಾ.ಶಾಲೆ ತಂಬೇನಹಳ್ಳಿ | 1 | 5.5 |
| 32 | | | ಸ.ಕಿ.ಪ್ರಾ.ಶಾಲೆ ಕೆಳಗಿನ ನಾಯಕರಾಂಡಹಳ್ಳಿ | 1 | 5.5 |
| | | ಒಟ್ಟು | | **60** | **392.98** |

# ಅನುಬಂಧ-1

| ಕ್ರ.ಸಂ. | ಗ್ರಾಮ ಪಂಚಾಯತಿ ಗ್ರಂಥಾಲಯಗಳ ಹೆಸರು | ಮೇಲ್ವಿಚಾರಕರುಗಳ ಹೆಸರು |
|---|---|---|
| 1. | ಎಸ್.ಎಸ್.ಘಾಟಿ | ಶ್ರೀ ಎಂ.ವೆಂಕಟೇಶ |
| 2. | ಕನಸವಾಡಿ | ಶ್ರೀ ಎ.ಎಸ್.ಪೂರ್ಣಚಂದ್ರ |
| 3. | ಕಾಡನೂರು | ಶ್ರೀಕೆ.ಆರ್‌ಲಕ್ಷ್ಮೀನರಸಿಂಹಮೂರ್ತಿ |
| 4. | ತೂಬುಗೆರೆ | ಶ್ರೀ ಎಸ್.ಆರ್.ಮಂಜುನಾಥ |
| 5. | ಚನ್ನದೇವಿ ಅಗ್ರಹಾರ | ಶ್ರೀಮತಿ ಬಿ.ವಸಂತಕುಮಾರಿ |
| 6. | ಮೆಳೆಕೋಟೆ | ಶ್ರೀಮತಿ ಎಮ್.ಎನ್ ಮುನಿಕೃಷ್ಣಮ್ಮ |
| 7. | ಅರಳುಮಲ್ಲಿಗೆ | ಶ್ರೀ ಎಸ್.ಗುರುಶಂಕರಯ್ಯ |
| 8. | ಹೆಗ್ಗಡಿಹಳ್ಳಿ | ಖಾಲಿ(ಮೇಲ್ವಿಚಾರಕರ ನೇಮಕಾತಿಗಾಗಿ ಕ್ರಮವಹಿಸಲಾಗುತ್ತಿದೆ). |
| 9. | ಸಾಸಲು | ಶ್ರೀಮತಿ ಸಿ.ಮಾಲಾ |
| 10. | ಬಾಶೆಟ್ಟಿ ಹಳ್ಳಿ | ಶ್ರೀಮತಿ ಅನಿತಾ ಹೆಚ್.ಆರ್. |
| 11. | ಹೊನ್ನಾವರ | ಶ್ರೀ ಎಸ್.ಬಿ.ರವಿಕುಮಾರ್ |
| 12. | ಹಾದ್ರಿಪುರ | ಶ್ರೀ ರಂಗಸ್ವಾಮಯ್ಯ ಎಲ್. |
| 13. | ತಿಪ್ಪೂರು | ಶ್ರೀ ಎನ್. ಮಂಜುನಾಥ |
| 14. | ಮಜರಾ ಹೊಸಹಳ್ಳಿ | ಶ್ರೀಮತಿ ಮುದ್ದು ಮೀನಾ.ಬಿ.ಎಂ |
| 15. | ಹೊಸಹಳ್ಳಿ | ಶ್ರೀಮತಿ ಟಿ.ಎಂ.ಮಂಜುಳ |
| 16. | ಆರೂಢಿ | ಶ್ರೀ ಶಂಕರಾಚಾರಿ ಎ.ಎನ್. |
| 17. | ಕಂಟನಕುಂಟೆ | ಶ್ರೀ ವಿ. ಲಕ್ಷ್ಮೀನಾರಾಯಣ |
| 18. | ಹಾಡೋನಹಳ್ಳಿ | ಹೆಚ್.ಆರ್.ಮಧು |
| 19. | ದರ್ಗಾ ಜೋಗಿಹಳ್ಳಿ | ಶ್ರೀಮತಿ ಮಮತ.ಎನ್ |
| 20. | ಹುಲಿಕುಂಟೆ | ಶ್ರೀಮತಿ ಟಿ.ಗಾಯಿತ್ರಿ |
| 21. | ದೊಡ್ಡ ತುಮಕೂರು | ಶ್ರೀಮತಿ ಹೆಚ್.ಚನ್ನಮ್ಮ |
| 22. | ಕೋನಘಟ್ಟ | ಶ್ರೀಮತಿ ಜಿ.ಕೆ.ಸುಗುಣ |
| 23. | ದೊಡ್ಡಬೆಳವಂಗಲ | ಶ್ರೀಮತಿ ದಿವ್ಯಜ್ಯೋತಿ |
| 24. | ಸಕ್ಕರೆಗೊಲ್ಲಹಳ್ಳಿ | ಶ್ರೀಮತಿ ಹೆಚ್.ವಸಂತಕುಮಾರಿ |
| 25. | ಭಕ್ತರಹಳ್ಳಿ | ಶ್ರೀ ಸತೀಶ್ ಬಿ.ಎಸ್. |
| 26. | ಕೆಸ್ತೂರು | ಶ್ರೀಮತಿ ಶೈಲಜ |
| 27. | ರಾಜಘಟ್ಟ | ಶ್ರೀಮತಿ ಬಿ.ಎನ್.ಮಂಜುಳ |
| 28. | ಕೊಡಿಗೇಹಳ್ಳಿ | ಶ್ರೀಮತಿ. ಆರ್.ಅನಸೂಯ |
| 29. | ಹಣಬೆ | ಶ್ರೀ ಶಿವಕುಮಾರ್.ಹೆಚ್.ಎಲ್. |

ನಿರ್ದೇಶಕರು
ಸಾರ್ವಜನಿಕ ಗ್ರಂಥಾಲಯ ಇಲಾಖೆ
ಬೆಂಗಳೂರು.

U.K/LALC/2955

# ಕರ್ನಾಟಕ ವಿಧಾನಸಭೆ

(15ನೇ ವಿಧಾನಸಭೆ, 9ನೇ ಅಧಿವೇಶನ)

1) ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 2995

2) ಸದಸ್ಯರ ಹೆಸರು : ಶ್ರೀ ಮಂಜುನಾಥ ಹೆಚ್.ಪಿ (ಹುಣಸೂರು)

3) ಉತ್ತರಿಸುವ ದಿನಾಂಕ : 18-03-2021

4) ಉತ್ತರಿಸುವವರು : ಅರಣ್ಯ, ಕನ್ನಡ ಮತ್ತು ಸಂಸ್ಕೃತಿ ಸಚಿವರು

<table>
<tr><th>ಕ್ರ ಸಂ</th><th>ಪ್ರಶ್ನೆ</th><th>ಉತ್ತರ</th></tr>
<tr><td>ಅ)</td><td>ಮೈಸೂರು ಜಿಲ್ಲೆ ಹುಣಸೂರು ತಾಲ್ಲೂಕಿನ ವ್ಯಾಪ್ತಿಯಲ್ಲಿ ಬರುವ ಕಾಡಂಚಿನ ಗ್ರಾಮಗಳಲ್ಲಿ ಇತ್ತೀಚೆಗೆ ಕಾಡಾನೆಗಳ ಹಾವಳಿ ಹೆಚ್ಚಾಗಿದ್ದು, ರೈತರ ಬೆಳೆಗಳೆಲ್ಲವನ್ನು ನಾಶಪಡಿಸುವುದರ ಜೊತೆಗೆ ಮಾನವ ಹಾನಿಯನ್ನುಂಟು ಮಾಡುತ್ತಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ;</td><td>ಬಂದಿದೆ.</td></tr>
<tr><td>ಆ)</td><td>ಹಾಗಿದ್ದಲ್ಲಿ, ಈ ಕಾಡಾನೆಗಳ ಹಾವಳಿಯನ್ನು ತಡೆಯಲು ಸರ್ಕಾರವು ಅಗತ್ಯ ಸಿಬ್ಬಂದಿಗಳನ್ನು ನೇಮಿಸದಿರಲು ಕಾರಣಗಳೇನು;</td><td>ಮೈಸೂರು ಜಿಲ್ಲೆ ಹುಣಸೂರು ತಾಲ್ಲೂಕಿನ ವ್ಯಾಪ್ತಿಗೆ ಹುಣಸೂರು ಮತ್ತು ವೀರನ ಹೊಸಹಳ್ಳಿ ವನ್ಯಜೀವಿ ವಲಯಗಳು ಬರುತ್ತಿದ್ದು, ಸದರಿ ವಲಯಗಳಲ್ಲಿ ಕರ್ತವ್ಯ ನಿರ್ವಹಿಸುತ್ತಿರುವ ಸಿಬ್ಬಂದಿಗಳ ವಿವರ ಈ ಕೆಳಕಂಡಂತಿದೆ:
<table>
<tr><th>ಕ್ರ ಸಂ</th><th>ಹುದ್ದೆ</th><th>ಮಂಜೂರಾದ ಹುದ್ದೆ</th><th>ಭರ್ತಿ</th><th>ಖಾಲಿ</th></tr>
<tr><td colspan="5">ಹುಣಸೂರು ವನ್ಯಜೀವಿ ವಲಯ</td></tr>
<tr><td>1</td><td>ವಲಯ ಅರಣ್ಯಾಧಿಕಾರಿ</td><td>01</td><td>01</td><td>-</td></tr>
<tr><td>2</td><td>ಉಪ ವಲಯ ಅರಣ್ಯಾಧಿಕಾರಿ</td><td>08</td><td>08</td><td>-</td></tr>
<tr><td>3</td><td>ಅರಣ್ಯ ರಕ್ಷಕರು</td><td>19</td><td>14</td><td>05</td></tr>
<tr><td>4</td><td>ಅರಣ್ಯ ವೀಕ್ಷಕರು</td><td>03</td><td>01</td><td>02</td></tr>
<tr><td>5</td><td>ಕರ್ನಾಟಕ ದಿನಗೂಲಿ ನೌಕರರ ಕ್ಷೇಮಾಭಿವೃದ್ಧಿ ಅಧಿಸೂಚಿಸಲ್ಪಟ್ಟ ನೌಕರ</td><td>1</td><td>1</td><td>-</td></tr>
<tr><td></td><td>ಒಟ್ಟು</td><td>32</td><td>25</td><td>07</td></tr>
</table></td></tr>
</table>

| ವೀರನ ಹೊಸಹಳ್ಳಿ ವನ್ಯಜೀವಿ ವಲಯ | | | | |
|---|---|---|---|---|
| 1 | ವಲಯ ಅರಣ್ಯಾಧಿಕಾರಿ | 01 | 01 | - |
| 2 | ಉಪ ವಲಯ ಅರಣ್ಯಾಧಿಕಾರಿ | 04 | 04 | - |
| 3 | ಅರಣ್ಯ ರಕ್ಷಕರು | 16 | 14 | 02 |
| 4 | ಅರಣ್ಯ ವೀಕ್ಷಕರು | 14 | 11 | 03 |
| 5 | ಕರ್ನಾಟಕ ದಿನಗೂಲಿ ನೌಕರರ ಕ್ಷೇಮಾಭಿವೃದ್ಧಿ ಅಧಿಸೂಚಿಸಲ್ಪಟ್ಟ ನೌಕರರು | 05 | 05 | - |
| | ಒಟ್ಟು | 40 | 35 | 05 |
| | ನಿವ್ವಳ ಒಟ್ಟು | 72 | 60 | 12 |

ಮೇಲ್ಕಂಡ ಸಿಬ್ಬಂದಿಗಳ ಜೊತೆಗೆ ಕಾಡಾನೆ ಹಾವಳಿ ನಿಯಂತ್ರಿಸಲು 06 ಆನೆ ಹಿಮ್ಮೆಟ್ಟಿಸುವ ತಂಡಕ್ಕೆ ಮತ್ತು ಕ್ಷಿಪ್ರ ಕಾರ್ಯಪಡೆಗಾಗಿ ಹೊರಗುತ್ತಿಗೆ ಆಧಾರದ ಮೇಲೆ ಸಿಬ್ಬಂದಿಯನ್ನು ನೇಮಿಸಿಕೊಳ್ಳಲಾಗಿರುತ್ತದೆ.

| | | |
|---|---|---|
| ಇ) | ಕಾಡಾನೆಗಳು ಹಾಗೂ ಕ್ರೂರ ಪ್ರಾಣಿಗಳು ಕಾಡಿನಿಂದ ಗ್ರಾಮಗಳಿಗೆ ಬಾರದಂತೆ, ರೈಲ್ವೆ ಕಂಬಿ ತಡೆಗೋಡೆಗಳನ್ನು ಶೀಘ್ರವಾಗಿ ನಿರ್ಮಿಸಲು (ಬಾಕಿ ಇರುವ ಪ್ರದೇಶಕ್ಕೆ) ಸರ್ಕಾರವು ಕೈಗೊಂಡಿರುವ ಕ್ರಮಗಳೇನು; (ವಿವರ ನೀಡುವುದು) | ಹುಣಸೂರು ತಾಲ್ಲೂಕಿಗೆ ಸಂಬಂಧಿಸಿದಂತೆ ಉಪಯೋಗಿತ ರೈಲ್ವೆ ಹಳಿಗಳನ್ನು ಉಪಯೋಗಿಸಿ ಒಟ್ಟು 82.60 ಕಿ.ಮೀ ರೈಲ್ವೆ ಬ್ಯಾರಿಕೇಡ್ ನಿರ್ಮಿಸಲು ಉದ್ದೇಶಿಸಲಾಗಿದೆ.<br><br>2020-21ನೇ ಸಾಲಿನವರೆಗೆ ಒಟ್ಟು 21.512 ಕಿ.ಮೀ ರೈಲ್ವೆ ಬ್ಯಾರಿಕೇಡ್ ನಿರ್ಮಿಸಲಾಗಿದ್ದು, ಇನ್ನು 61.088 ಕಿ.ಮೀ ರೈಲ್ವೆ ಬ್ಯಾರಿಕೇಡ್ ನಿರ್ಮಾಣ ಮಾಡಬೇಕಾಗಿರುತ್ತದೆ.<br><br>ಅನುದಾನದ ಲಭ್ಯತೆಯನುಸಾರ ಆದ್ಯತೆ ಮೇರೆಗೆ ರೈಲ್ವೆ ಬ್ಯಾರಿಕೇಡ್ ಕಾಮಗಾರಿ ಕೈಗೊಳ್ಳಲಾಗುವುದು. |
| ಈ) | ಈಗಾಗಲೇ ಕೆಲವು ಗ್ರಾಮಗಳಿಗೆ / ಹಾಡಿಗಳ ವ್ಯಾಪ್ತಿಯಲ್ಲಿ ರೈಲ್ವೆ ಕಂಬಿ ತಡೆಗೋಡೆ ನಿರ್ಮಿಸುತ್ತಿದ್ದು, ಸದರಿ ಕಾಮಗಾರಿಯು ಅತ್ಯಂತ ನಿಧಾನಗತಿಯಲ್ಲಿ ಸಾಗುತ್ತಿರಲು ಕಾರಣಗಳೇನು; (ವಿವರ ನೀಡುವುದು) | ಈಗಾಗಲೇ 21.512 ಕಿ.ಮೀ ರೈಲ್ವೆ ಬ್ಯಾರಿಕೇಡ್ ನಿರ್ಮಿಸಲಾಗಿದ್ದು, ನಿಧಾನಗತಿಯಲ್ಲಿ ಸಾಗುತ್ತಿರುವ ಬಗ್ಗೆ ಯಾವುದೇ ದೂರುಗಳು ಸ್ವೀಕೃತವಾಗಿರುವುದಿಲ್ಲ. |

[illegible]

| ವನ್ಯಜೀವಿ ವಲಯದ ಹೆಸರು | ಗ್ರಾಮಗಳ ಸಂಖ್ಯೆ | ರೈಲ್ವೆ ಬ್ಯಾರಿಕೇಡ್ ನಿರ್ಮಿಸಬೇಕಾದ ದೂರ |
|---|---|---|
| ಹುಣಸೂರು | 26 | 45.48 ಕಿ.ಮೀ |
| ವೀರನಹೊಸಹಳ್ಳಿ | 21 | 15.602 ಕಿ.ಮೀ |

| ಕ್ರ ಸಂ. | ಹುಣಸೂರು ವನ್ಯಜೀವಿ ವಲಯದ ಗ್ರಾಮ / ಹಾಡಿಗಳ ವಿವರ | ವೀರನಹೊಸಹಳ್ಳಿ ವನ್ಯಜೀವಿ ವಲಯದ ಗ್ರಾಮ / ಹಾಡಿಗಳ ವಿವರ |
|---|---|---|
| 1 | ಕರಡಿಮೊಕ್ಕೆ ಹಾಡಿ | ನಾಗಾಪುರ-4 |
| 2 | ಮಲಗನಕೆರೆ ಹಾಡಿ | ನಾಗಾಪುರ-5 |
| 3 | ಮರಳುಕಟ್ಟೆ ಎ ಹಾಡಿ | ಪ್ರಭಾನಗರ |
| 4 | ಮರಳುಕಟ್ಟೆ ಬಿ ಹಾಡಿ | ಬಸವರಾಜನಕಟ್ಟೆ |
| 5 | [illegible] ಹಾಡಿ | ಹನುಮಂತನಗರ (ಕೆ.ಎಡತೊರೆ) |
| 6 | ಹಳೆಕೆರೆ ಹಾಡಿ | ಬೂದನೂರು |
| 7 | ದಾಣಿಗೇಟ್ ಗ್ರಾಮ | ಹೊಸಹಳ್ಳಿ |
| 8 | ದೊಡ್ಡಹರವೆ ಗ್ರಾಮ | ಉಣ್ಣೂರು |
| 9 | ನವಿಲೂರು ಗ್ರಾಮ | ಚಕ್ಕರೆ |
| 10 | ಲಿಂಗಾಪುರ ಗ್ರಾಮ | ಎಲೆಹುಂಡಿ |
| 11 | ಅಯರಬೀಡು ಗ್ರಾಮ | ರಾಜೇಗೌಡನಹುಂಡಿ |
| 12 | ಮುತ್ತೂರು | ಭೀಮನಹಳ್ಳಿ |
| 13 | ಕಾಳೇತಿಮ್ಮನಹಳ್ಳಿ ಗ್ರಾಮ | ಮುಷ್ಕರ ಹಾಡಿ |
| 14 | ಸುಳುಗೋಡು ಗ್ರಾಮ | ಹಂಚೀಪುರ ಹಾಡಿ |
| 15 | ಕೋಗಿಲವಾಡಿ ಗ್ರಾಮ | ಮಜ್ಜನಕುಪ್ಪೆ |
| 16 | ಚೌಡಿಗ್ರಾಮ | ಮಹದೇಶ್ವರ ಕಾಲೋನಿ |
| 17 | ಲಕ್ಷ್ಮೀಪುರ ಗ್ರಾಮ | ಮಾಸ್ತಿಗುಡಿ |
| 18 | ದೊಡ್ಡಹರವೆ ಗ್ರಾಮ | ಚಿಕ್ಕೋಡನಹಳ್ಳಿ |
| 19 | ನವಿಲೂರು ಗ್ರಾಮ | ಹೊಮ್ಮರಗಳ್ಳಿ |
| 20 | ಲಿಂಗಾಪುರ ಗ್ರಾಮ | ಮೇಟಿಕುಪ್ಪೆ |
| 21 | ಅಯರಬೀಡು ಗ್ರಾಮ | ಸೊಳ್ಳೆಪುರ |
| 22 | ಮುತ್ತೂರು | – |
| 23 | ಕಾಳೇತಿಮ್ಮನಹಳ್ಳಿ ಗ್ರಾಮ | – |
| 24 | ಸುಳುಗೋಡು ಗ್ರಾಮ | – |
| 25 | ಕೋಗಿಲವಾಡಿ ಗ್ರಾಮ | – |
| 26 | ಚೌಡಿ ಗ್ರಾಮ | – |

| ಊ) | ತಡೆಗೋಡೆಗಳನ್ನು ಯಾವಾಗ ನಿರ್ಮಿಸಲಾಗುವುದು ? | ಅನುದಾನದ ಲಭ್ಯತೆಯನುಸಾರ ಕಾಡಾನೆ ಹಾವಳಿ ಹೆಚ್ಚು ಇರುವ ಪ್ರದೇಶಗಳಲ್ಲಿ ಆದ್ಯತೆ ಮೇರೆಗೆ ರೈಲ್ವೆ ಬ್ಯಾರಿಕೇಡ್ ನಿರ್ಮಿಸಲು ಕ್ರಮ ತೆಗೆದುಕೊಳ್ಳಲಾಗುವುದು. |
|---|---|---|

ಸಂಖ್ಯೆ: ಅಪಜೀ 63 ಎಫ್‌ಡಬ್ಲ್ಯೂಎಲ್ 2021

(ಅರವಿಂದ ಲಿಂಬಾವಳಿ)
ಅರಣ್ಯ, ಕನ್ನಡ ಮತ್ತು ಸಂಸ್ಕೃತಿ ಸಚಿವರು

# ಕರ್ನಾಟಕ ವಿಧಾನಸಭೆ

1) ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 2992

2) ಸದಸ್ಯರ ಹೆಸರು : ಶ್ರೀ ಶಿವಲಿಂಗೇಗೌಡ ಕೆ.ಎಂ (ಅರಸೀಕೆರೆ)

3) ಉತ್ತರಿಸುವ ದಿನಾಂಕ : 18.03.2021

4) ಉತ್ತರಿಸುವವರು : ಅರಣ್ಯ, ಕನ್ನಡ ಮತ್ತು ಸಂಸ್ಕೃತಿ ಸಚಿವರು

| ಕ್ರ ಸಂ | ಪ್ರಶ್ನೆ | ಉತ್ತರ |
|---|---|---|
| ಅ) | ಗ್ರಾಮೀಣ ಪ್ರದೇಶಗಳಲ್ಲಿ ಇತ್ತೀಚಿನ ದಿನಗಳಲ್ಲಿ ಚಿರತೆಗಳ ಹಾವಳಿ ಹೆಚ್ಚಾಗಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; | ಬಂದಿದೆ. |
| ಆ) | ಬಂದಿದ್ದಲ್ಲಿ, ಚಿರತೆಗಳ ಹಾವಳಿಯನ್ನು ತಡೆಗಟ್ಟಲು ಸರ್ಕಾರವು ತೆಗೆದುಕೊಂಡಿರುವ ಕ್ರಮಗಳೇನು; | ರಾಜ್ಯದಲ್ಲಿ ಚಿರತೆಗಳ ಹಾವಳಿಯನ್ನು ತಡೆಗಟ್ಟಲು ಸರ್ಕಾರದಿಂದ ಈ ಕೆಳಕಂಡ ಕ್ರಮಗಳನ್ನು ಕೈಗೊಳ್ಳಲಾಗುತ್ತಿದೆ.<br><br>1. ವನ್ಯಪ್ರಾಣಿಗಳಿಗೆ ಕಾಡಿನಲ್ಲಿಯೇ ನೀರು, ಆಹಾರ ಸಿಗುವಂತೆ ಕಾರ್ಯಕ್ರಮವನ್ನು ರೂಪಿಸಲಾಗುತ್ತಿದೆ.<br><br>2. ವನ್ಯಪ್ರಾಣಿಗಳ ಹಾವಳಿ ಇರುವ ಪ್ರದೇಶಗಳನ್ನು ಗುರುತಿಸಿ, ಆ ಪ್ರದೇಶದಲ್ಲಿ ಆನೆ ಹಿಮ್ಮೆಟ್ಟಿಸುವ ತಂಡ (Anti Depredation Camp) ಹಾಗೂ ಕ್ಷಿಪ್ರ ಕಾರ್ಯಚರಣೆ ಪಡೆಗಳನ್ನು (Rapid Response Teams) ರಚಿಸಿಕೊಂಡು ಸಾರ್ವಜನಿಕರ ಮತ್ತು ಗ್ರಾಮ ಅರಣ್ಯ ಸಮಿತಿಯ ಸದಸ್ಯರ ಸಹಕಾರದಿಂದ ಅವುಗಳ ಆವಾಸಸ್ಥಾನದಿಂದ ಸ್ಥಳೀಯ ಗ್ರಾಮಗಳಿಗೆ / ನಗರಗಳಿಗೆ ಬರದಂತೆ ಕ್ರಮ ಕೈಗೊಳ್ಳಲಾಗುತ್ತಿದೆ.<br><br>3. ಸಾರ್ವಜನಿಕರಿಗೆ ವನ್ಯಪ್ರಾಣಿಗಳ ಬಗ್ಗೆ ಮುಂಜಾಗ್ರತೆ ವಹಿಸಲು ಅರಿವು ಮೂಡಿಸಲಾಗುತ್ತಿದೆ.<br><br>4. ಚಿರತೆಗಳು ಗ್ರಾಮಗಳಲ್ಲಿ ಕಾಣಿಸಿಕೊಂಡ ಸಂದರ್ಭದಲ್ಲಿ ಯಾವುದೇ ಅನಾಹುತ ಸಂಭವಿಸುವ ಮುನ್ನವೆ ಅವುಗಳನ್ನು ಬಲೆ ಹಾಗೂ ಬೋನುಗಳನ್ನು (cage) ಅಳವಡಿಸಿ, ಸೆರೆಹಿಡಿದು ದೂರದ ಕಾಡಿನೊಳಗೆ ಸುರಕ್ಷಿತವಾಗಿ ಬಿಡಲಾಗುತ್ತಿದೆ. |

.....2

| ಕ್ರ ಸಂ | ಪ್ರಶ್ನೆ | ಉತ್ತರ |
|---|---|---|
| | | 5. ಇಲಾಖೆಯ ಕಾರ್ಯನಿರ್ವಾಹಕ ಸಿಬ್ಬಂದಿಗಳು ತಮ್ಮ ಕ್ಷೇತ್ರ ವ್ಯಾಪ್ತಿಯಲ್ಲಿ ನಿರಂತರವಾಗಿ ಹಗಲು ಮತ್ತು ರಾತ್ರಿಯ ವೇಳೆಗಳಲ್ಲಿ ಗಸ್ತು ಕಾರ್ಯವನ್ನು ಮಾಡುತ್ತಿದ್ದು, ಕಾಡು ಪ್ರಾಣಿಗಳಿಂದ ಆಗುವ ಅನಾಹುತಗಳನ್ನು ತಪ್ಪಿಸಲು ಕ್ರಮಕೈಗೊಳ್ಳಲಾಗುತ್ತಿದೆ.<br><br>6. ಚಿರತೆಯ ಚಲನವಲನ ಗಮನಿಸಲು ಸೂಕ್ಷ್ಮ ಪ್ರದೇಶಗಳನ್ನು ಗುರುತಿಸಿ ಕ್ಯಾಮರಾ ಟ್ರಾಪ್‌ಗಳನ್ನು ಅಳವಡಿಸಲಾಗಿರುತ್ತದೆ. ಅಲ್ಲದೇ, ಸೂಕ್ತ ತಜ್ಞರನ್ನು ಕರೆಸಿಕೊಂಡು ಕ್ಯಾಮೆರಾ ಟ್ರ್ಯಾಪ್‌ಗಳನ್ನು ಉಪಯೋಗಿಸುವ ಬಗ್ಗೆ ಇಲಾಖೆಯ ಸಿಬ್ಬಂದಿಗಳಿಗೆ ತರಬೇತಿಯನ್ನು ನೀಡಲಾಗಿದೆ.<br><br>7. ಡ್ರೋನ್ ಕ್ಯಾಮರಾ ಸಹಾಯದಿಂದ ಕುರುಚಲು ಅರಣ್ಯ ಪ್ರದೇಶದಲ್ಲಿ ಚಿರತೆಯ ಇರುವಿಕೆ ಬಗ್ಗೆ ಖಚಿತ ಪಡಿಸಿಕೊಳ್ಳಲಾಗಿರುತ್ತದೆ.<br><br>8. ಚಿರತೆ ದಾಳಿಯಿಂದ ಮಾನವ-ಪ್ರಾಣ ಹಾನಿ ಉಂಟಾದ ಸಂದರ್ಭದಲ್ಲಿ ಚಿರತೆಯನ್ನು ಸೆರೆ ಹಿಡಿಯಲು ಹತ್ತಿರದ ಆನೆ ಶಿಬಿರದಿಂದ ಕುಮ್ಕಿ ಆನೆಗಳನ್ನು ಕರೆಸಿ, ಚಿರತೆ ಸೆರೆ ಹಿಡಿಯುವ ಕೂಂಬಿಂಗ್ ಕಾರ್ಯಾಚರಣೆಗೆ ಬಳಸಿಕೊಳ್ಳಲಾಗುತ್ತಿದೆ. |
| ಇ) | ಚಿರತೆಗಳ ದಾಳಿಯಿಂದ ಜಾನುವಾರುಗಳು ಪದೇ ಪದೇ ಬಲಿಯಾಗುತ್ತಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ: | ಬಂದಿದೆ. |
| ಈ) | ಚಿರತೆದಾಳಿಗೆ ಬಲಿಯಾದ ಜಾನುವಾರುಗಳ ಮಾಲೀಕರುಗಳಿಗೆ ಸರ್ಕಾರವು ಧನವನ್ನೇನಾದರೂ ನೀಡುತ್ತಿದೆಯೇ? (ವಿವರ ನೀಡುವುದು) | ವನ್ಯಪ್ರಾಣಿಗಳ ದಾಳಿಯಿಂದ ಉಂಟಾಗುವ ಸಾಕುಪ್ರಾಣಿ ಹತ್ಯೆ ಪ್ರಕರಣಗಳಲ್ಲಿ ಸರ್ಕಾರದ ಆದೇಶ ಸಂಖ್ಯೆ:ಅಪಜೀ/109/ಎಫ್‌ಎಪಿ/2014, ದಿನಾಂಕ:13.08.2014 ರನ್ವಯ ಹಸು, ಎತ್ತು, ಎಮ್ಮೆ ಮತ್ತು ಕೋಣ ಮೃತಪಟ್ಟಲ್ಲಿ ರೂ.10,000/- ಹಾಗೂ ಕುರಿ, ಮೇಕೆ ಮೃತಪಟ್ಟಲ್ಲಿ ರೂ.5,000/-ಗಳ ದಯಾತ್ಮಕ ಧನವನ್ನು ಪಾವತಿಸಲಾಗುತ್ತಿದೆ. |

ಸಂಖ್ಯೆ: ಅಪಜೀ 60 ಎಫ್‌ಡಬ್ಲ್ಯೂಎಲ್ 2021

(ಅರವಿಂದ ಲಿಂಬಾವಳಿ)
ಅರಣ್ಯ, ಕನ್ನಡ ಮತ್ತು ಸಂಸ್ಕೃತಿ ಸಚಿವರು.

# ಕರ್ನಾಟಕ ವಿಧಾನ ಸಭೆ

ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 2774

ಸದಸ್ಯರ ಹೆಸರು : ಶ್ರೀ ಮಹದೇವ ಕೆ. (ಪಿರಿಯಾಪಟ್ಟಣ)

ಉತ್ತರಿಸುವ ದಿನಾಂಕ : 18.03.2021

ಉತ್ತರಿಸುವ ಸಚಿವರು : ಮಾನ್ಯ ಉಪ ಮುಖ್ಯಮಂತ್ರಿಗಳು ಹಾಗೂ ಉನ್ನತ ಶಿಕ್ಷಣ, ಮಾಹಿತಿ ತಂತ್ರಜ್ಞಾನ, ಜೈವಿಕ ತಂತ್ರಜ್ಞಾನ ಹಾಗೂ ವಿಜ್ಞಾನ ಮತ್ತು ತಂತ್ರಜ್ಞಾನ, ಕೌಶಲ್ಯಾಭಿವೃದ್ಧಿ ಉದ್ಯಮಶೀಲತೆ ಮತ್ತು ಜೀವನೋಪಾಯ ಸಚಿವರು

<table>
<tr><th>ಕ್ರ. ಸಂ</th><th>ಪ್ರಶ್ನೆ</th><th>ಉತ್ತರ</th></tr>
<tr><td>ಅ</td><td>ರಾಜ್ಯದಲ್ಲಿ ಹೊಸದಾಗಿ ಸರ್ಕಾರಿ ಪ್ರಥಮ ದರ್ಜೆ ಕಾಲೇಜು ತೆರೆಯುವ ಪ್ರಸ್ತಾವನೆಯಿದೆಯೇ;</td><td>ಇಲ್ಲ<br>ಕೋವಿಡ್-19 ಪ್ರಯುಕ್ತ ಆರ್ಥಿಕ ನಿರ್ಬಂಧ ಜಾರಿಯಲ್ಲಿರುವುದರಿಂದ ಹೊಸ ಕಾಲೇಜು ಪ್ರಾರಂಭಿಸುವ ಪ್ರಸ್ತಾವನೆ ಇರುವುದಿಲ್ಲ.</td></tr>
<tr><td>ಆ</td><td>ಇದ್ದಲ್ಲಿ ಪಿರಿಯಾಪಟ್ಟಣ ಮತಕ್ಷೇತ್ರದ ರಾವಂದೂರು ಗ್ರಾಮವು ಶೈಕ್ಷಣಿಕವಾಗಿ ಹಿಂದುಳಿದಿರುವ ಪ್ರದೇಶವಾಗಿದ್ದು ಈ ಗ್ರಾಮದಲ್ಲಿ ಹೊಸದಾಗಿಸರ್ಕಾರಿ ಪ್ರಥಮ ದರ್ಜೆ ಕಾಲೇಜು ತೆರೆಯಲು ಪ್ರಸ್ತಾವನೆ ಇದೆಯೇ;</td><td rowspan="3">ರಾವಂದೂರು ಗ್ರಾಮದಲ್ಲಿ 18 ಕಿ.ಮೀ ಅಂತರದಲ್ಲಿರುವ ಸರ್ಕಾರಿ ಪ್ರಥಮ ದರ್ಜೆ ಕಾಲೇಜುಗಳ ವಿವರ ಕೆಳಕಂಡಂತಿದೆ.<br><table><tr><th>ಕಾಲೇಜಿನ ಹೆಸರು</th><th>ಅಂತರ ಕಿ.ಮೀ</th><th>ಪ್ರವೇಶ ಪಡೆದಿರುವ ವಿದ್ಯಾರ್ಥಿಗಳ ಸಂಖ್ಯೆ</th><th>ಲಭ್ಯವಿರುವ ಕೋರ್ಸುಗಳು</th></tr><tr><td>ಸ.ಪ್ರ.ದ.ಕಾಲೇಜು ಬೆಟ್ಟದಪುರ</td><td>15 ಕಿ.ಮೀ</td><td>509</td><td>ಬಿ.ಎ., ಬಿ.ಕಾಂ</td></tr><tr><td>ಸ.ಪ್ರ.ದ.ಕಾಲೇಜು. ಪಿರಿಯಾಪಟ್ಟಣ</td><td>18 ಕಿ.ಮೀ</td><td>526</td><td>ಬಿ.ಎ., ಬಿ.ಬಿ.ಎಂ ಬಿ.ಕಾಂ</td></tr></table><br>ಮೇಲಿನ ಅಂಕಣದಲ್ಲಿ ತಿಳಿಸಿರುವಂತೆ ರಾವಂದೂರು ಗ್ರಾಮದ ವಿದ್ಯಾರ್ಥಿಗಳು ಮೇಲಿನ ಸರ್ಕಾರಿ ಪ್ರಥಮ ದರ್ಜೆ ಕಾಲೇಜುಗಳಲ್ಲಿ ಪ್ರವೇಶಪಡೆಯಬಹುದಾಗಿರುತ್ತದೆ.</td></tr>
<tr><td>ಇ</td><td>ಈ ಗ್ರಾಮದಿಂದ 15 ರಿಂದ 20 ಕಿ.ಮೀ ಅಂತರದಲ್ಲಿ ಯಾವುದೇ ಪ್ರಥಮ ದರ್ಜೆ ಕಾಲೇಜುಗಳು ಇಲ್ಲದೆ ಇರುವುದರಿಂದ ವಿದ್ಯಾರ್ಥಿಗಳು ಶಿಕ್ಷಣ ಪಡೆಯಲು ದೂರ ಹೋಗಬೇಕಾಗಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ;</td></tr>
<tr><td>ಈ</td><td>ಕಾಲೇಜು ತೆರೆಯುವ ಬಗ್ಗೆ ಸರ್ಕಾರದ ನಿಲುವೇನು?</td></tr>
</table>

ಕಡತ ಸಂಖ್ಯೆ: ಇಡಿ 40 ಹೆಚ್‌ಪಿಸಿ 2021

(ಡಾ: ಅಶ್ವಥ್ ನಾರಾಯಣ ಸಿ.ಎನ್)
ಉಪ ಮುಖ್ಯಮಂತ್ರಿಗಳು ಹಾಗೂ ಉನ್ನತ ಶಿಕ್ಷಣ, ಮಾಹಿತಿ ತಂತ್ರಜ್ಞಾನ, ಜೈವಿಕ ತಂತ್ರಜ್ಞಾನ ಹಾಗೂ ವಿಜ್ಞಾನ ಮತ್ತು ತಂತ್ರಜ್ಞಾನ, ಕೌಶಲ್ಯಾಭಿವೃದ್ಧಿ ಉದ್ಯಮಶೀಲತೆ ಮತ್ತು ಜೀವನೋಪಾಯ ಸಚಿವರು

116

## ಕರ್ನಾಟಕ ವಿಧಾನ ಸಭೆ

| | |
|---|---|
| ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ | 2043 |
| ಸದಸ್ಯರ ಹೆಸರು | ಡಾ|| ಶ್ರೀ ರಂಗನಾಥ್ ಹೆಚ್.ಡಿ (ಕುಣಿಗಲ್) |
| ಉತ್ತರಿಸಬೇಕಾದ ದಿನಾಂಕ | 18–03–2021 |
| ಉತ್ತರಿಸಬೇಕಾದ ಸಚಿವರು | ಪ್ರಾಥಮಿಕ ಮತ್ತು ಪ್ರೌಢ ಶಿಕ್ಷಣ ಹಾಗೂ ಸಕಾಲ ಸಚಿವರು |

| ಪ್ರಶ್ನೆ | ಉತ್ತರ |
|---|---|
| **ಅ)** ಸರ್ಕಾರವು ಶಾಲೆಯು ಸೇರಿದಂತೆ, ವಿವಿಧ ಸಂಸ್ಥೆಗಳಲ್ಲಿ ಮಕ್ಕಳ ರಕ್ಷಣೆಯನ್ನು ಮಾಡುವ ಉದ್ದೇಶದಿಂದ ಶಾಲಾ ಮಕ್ಕಳ ರಕ್ಷಣಾ ನೀತಿಯನ್ನು ಅಳವಡಿಸಿಕೊಂಡಿದೆಯೆ; | ರಾಜ್ಯದಲ್ಲಿ ಮಕ್ಕಳ ಮೇಲಿನ ಲೈಂಗಿಕ ದೌರ್ಜನ್ಯ, ಶೋಷಣೆ, ಮತ್ತು ದುರುಪಯೋಗಕ್ಕೆ ಒಳಗಾಗುವ ಪ್ರಕರಣಗಳು ಕಂಡು ಬಂದ ಹಿನ್ನೆಲೆಯಲ್ಲಿ ಮಕ್ಕಳ ರಕ್ಷಣೆಯನ್ನು ಮಾಡುವ ದೃಷ್ಟಿಯಿಂದ ಕರ್ನಾಟಕ ರಾಜ್ಯದ ಶಾಲೆಗಳಲ್ಲಿ; **"ಕರ್ನಾಟಕ ರಾಜ್ಯ ಮಕ್ಕಳ ರಕ್ಷಣಾ ನೀತಿ 2016ನ್ನು" ಸರ್ಕಾರದ ಆದೇಶ ಸಂಖ್ಯೆ:ಮಮಿ.259.ಮಭಾಬ.2014, ದಿನಾಂಕ:30–04–2016ರಲ್ಲಿ** ಜಾರಿಗೆ ತರಲಾಗಿದೆ. |
| **ಆ)** ಈ ನೀತಿಯು ಮಕ್ಕಳು ಸರಿಯಾಗಿ ಶಾಲೆಗೆ ಬಂದು ಧೈರ್ಯವಾಗಿ ತಮ್ಮ ಅನಿಸಿಕೆ ಮತ್ತು ಅಭಿಪ್ರಾಯವನ್ನು ತಿಳಿಸಲು ಪೂರಕವಾಗಿದೆಯೇ; | ಹೌದು, ಕರ್ನಾಟಕ ರಾಜ್ಯ ಮಕ್ಕಳ ರಕ್ಷಣಾ ನೀತಿ 2016ರಲ್ಲಿ ಮಾನದಂಡಗಳನ್ನು ರೂಪಿಸಿದ್ದು, ಅದರಂತೆ ಮಕ್ಕಳು ರಕ್ಷಣಾ ಸಮಿತಿ, ಶಾಲಾ ಮೇಲ್ವಿಚಾರಣಾ ಸಮಿತಿ, ಅಥವಾ ಪೋಷಕ ಸಂಘಗಳ ಮೂಲಕ ಮಕ್ಕಳ ಮೇಲೆ ನಡೆಯುವಂತಹ ದೌರ್ಜನ್ಯದ ಪ್ರಕರಣಗಳನ್ನು ವಿಚಾರಣೆಗೆ ಒಳಪಡಿಸಲು ಅವಕಾಶ ಕಲ್ಪಿಸಲಾಗಿದೆ. |
| **ಇ)** ಪ್ರಸ್ತಾಪಿತ ಮಕ್ಕಳ ರಕ್ಷಣಾ ನೀತಿಯು ಅಧಿಸೂಚಿತಗೊಂಡಿದೆಯೇ;<br><br>**ಈ)** ಈ ನೀತಿಯು ಎಲ್ಲಾ ಸರ್ಕಾರಿ, ಅನುದಾನಿತ ಮತ್ತು ಖಾಸಗಿ ಶಾಲೆಗಳಿಗೂ ಅನ್ವಯಿಸುತ್ತದೆಯೇ;<br><br>**ಉ)** ಯಾವುದಾದರೂ ಶಾಲೆಗಳು ಈ ನೀತಿಯನ್ನು ಅಳವಡಿಸಿಕೊಳ್ಳದಿದ್ದಲ್ಲಿ ಅಥವಾ ಉಲ್ಲಂಘಿಸಿದ್ದಲ್ಲಿ ಅವುಗಳ ಮೇಲೆ ಕೈಗೊಳ್ಳಲಾಗುವ/ಕೈಗೊಂಡಿರುವ ಕ್ರಮಗಳೇನು; | ಹೌದು, ಕರ್ನಾಟಕ ಶಿಕ್ಷಣ ಕಾಯ್ದೆಗೆ ದಿನಾಂಕ:22–04–2017ರಲ್ಲಿ ತಿದ್ದುಪಡಿ ತಂದಿದ್ದು, ಮಕ್ಕಳ ಸುರಕ್ಷತೆಗೆ ಸಂಬಂಧಿಸಿದಂತೆ 5(ಎ)ಅನ್ನು ಸೇರ್ಪಡೆಗೊಳಿಸಲಾಗಿದ್ದು, ಸದರಿ ತಿದ್ದುಪಡಿ ಈ ಕೆಳಗಿನಂತಿರುತ್ತದೆ.<br>" **5A. Safety and security of students:-** Every educational institution and an employee of such educational institutions shall take such measures to ensure safety and security of students including protection from sexual offence, in the manner as may be prescribed."<br>"**112A. Penalty for contravention of section 5A:-** (1) Any employee or member of the management of an educational institution who contravenes section 5A shall on conviction, be punished with imprisonment for a minimum term of six months and with a fine which may extend to one lakh rupees. |

| | |
|---|---|
| ಊ) ಈ ರೀತಿಯ ಕ್ರಮಗಳನ್ನು ಜರುಗಿಸುವ ಜವಾಬ್ದಾರಿಯನ್ನು ಯಾರಿಗೆ ನೀಡಲಾಗಿದೆ? (ವಿವರ ನೀಡುವುದು) | ಮಕ್ಕಳ ಸುರಕ್ಷತಾ ನೀತಿಯನ್ನು ಅಳವಡಿಸಿಕೊಳ್ಳದ ಶಾಲೆಗಳ ವಿರುದ್ಧ ಜಿಲ್ಲಾ District Education Regulatory Authority (DERA) ಸಮಿತಿಯಲ್ಲಿ ದೂರು ದಾಖಲಿಸಬಹುದಾಗಿದೆ. |

ಇಪಿ 100 ಪಿಜಿಸಿ 2021

[ ಎಸ್.ಸುರೇಶ್ ಕುಮಾರ್]
ಪ್ರಾಥಮಿಕ ಮತ್ತು ಪ್ರೌಢ ಶಿಕ್ಷಣ ಹಾಗೂ
ಸಕಾಲ ಸಚಿವರು.

## ಕರ್ನಾಟಕ ವಿಧಾನ ಸಭೆ

| | |
|---|---|
| ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ | 2773 |
| ಸದಸ್ಯರ ಹೆಸರು | ಶ್ರೀ ನಿಂಬಣ್ಣನವರ್ ಸಿ.ಎಂ (ಕಲಘಟಗಿ) |
| ಉತ್ತರಿಸಬೇಕಾದ ದಿನಾಂಕ | 18-03-2021 |
| ಉತ್ತರಿಸಬೇಕಾದ ಸಚಿವರು | ಪ್ರಾಥಮಿಕ ಮತ್ತು ಪ್ರೌಢ ಶಿಕ್ಷಣ ಹಾಗೂ ಸಕಾಲ ಸಚಿವರು |

| ಪ್ರಶ್ನೆ | ಉತ್ತರ |
|---|---|
| ಅ) ಇತ್ತೀಚಿನ ದಿನಗಳಲ್ಲಿ ಖಾಸಗಿ ಅನುದಾನಿತ ಮತ್ತು ಅನುದಾನ ರಹಿತ ಶಿಕ್ಷಣ ಸಂಸ್ಥೆಗಳ ಬಗ್ಗೆ ಸರ್ಕಾರವು ಕಠೋರ ನಿಲುವು ತಳೆಯುತ್ತಿರಲು ಕಾರಣವೇನು; | ಕರ್ನಾಟಕ ಶಿಕ್ಷಣ ಕಾಯ್ದೆ 1983 ಹಾಗೂ ನಿಯಮಗಳು 1999ರ ಅನ್ವಯ ಅನುದಾನ ಮತ್ತು ಅನುದಾನ ರಹಿತ ಶಿಕ್ಷಣ ಸಂಸ್ಥೆಗಳಿಗೆ ಕಾಯ್ದೆಗಳನ್ನು ರೂಪಿಸಲಾಗಿದ್ದು, ಅದರಂತೆ ಕ್ರಮವಹಿಸಲಾಗುತ್ತಿದೆ. |
| ಆ) ವೇತನಾನುದಾನ ಹೊರತುಪಡಿಸಿ ಸರ್ಕಾರ ಖಾಸಗಿ ಶಿಕ್ಷಣ ಸಂಸ್ಥೆಗಳಿಗೆ ಯಾವುದೇ ಆರ್ಥಿಕ ನೆರವು ನೀಡುತ್ತಿಲ್ಲ. ಹೀಗಿದ್ದರೂ, ಸರ್ಕಾರದ ಅಧಿಕಾರಿಗಳು ಈ ಸಂಸ್ಥೆಗಳ ಆಡಳಿತದಲ್ಲಿ ಪದೇ ಪದೇ ಹಸ್ತಕ್ಷೇಪ ಮಾಡುತ್ತಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; | 1983ರ ಕರ್ನಾಟಕ ಶಿಕ್ಷಣ ಕಾಯ್ದೆ, 1999ರ ನಿಯಮಗಳು ಮತ್ತು ಸರ್ಕಾರದ ಆದೇಶ/ಸುತ್ತೋಲೆಗಳನ್ವಯ ಆಡಳಿತಾತ್ಮಕವಾಗಿ ಕ್ರಮವಹಿಸಲಾಗುತ್ತಿದೆ. ಖಾಸಗಿ ಶಿಕ್ಷಣ ಸಂಸ್ಥೆಗಳ ಆಡಳಿತದಲ್ಲಿ ಹಸ್ತಕ್ಷೇಪ ಮಾಡಲಾಗುತ್ತಿಲ್ಲ. |
| ಇ) ರಾಜ್ಯದ ಶೇಕಡ 40% ವಿದ್ಯಾರ್ಥಿಗಳು ಪ್ರತಿಷ್ಠಿತ ಖಾಸಗಿ ಅನುದಾನಿತ ಮತ್ತು ಅನುದಾನರಹಿತ ಶಿಕ್ಷಣ ಸಂಸ್ಥೆಗಳಲ್ಲಿ ಗುಣಮಟ್ಟ ಶಿಕ್ಷಣ ಪಡೆಯುತ್ತಿದ್ದು, ಈ ಖಾಸಗಿ ಸಂಸ್ಥೆಗಳ ಹಿತಾಸಕ್ತಿ ಕಾಪಾಡಲು ಸರ್ಕಾರ ಯಾವ ಕ್ರಮಕೈಗೊಳ್ಳುತ್ತಿದೆ? | ರಾಜ್ಯದ ಖಾಸಗಿ ಅನುದಾನಿತ ವಿದ್ಯಾಸಂಸ್ಥೆಗಳಿಗೆ ಸರ್ಕಾರವು ಅನುದಾನವನ್ನು ನೀಡುತ್ತಿದ್ದು, ಸದರಿ ಶಾಲೆಗಳು ಕರ್ನಾಟಕ ಶಿಕ್ಷಣ ಕಾಯ್ದೆ 1983ರಡಿ ರೂಪಿಸಲಾದ ನಿಯಮಗಳಿಗೆ ಬದ್ಧವಾಗಿ ಕಾರ್ಯನಿರ್ವಹಿಸುತ್ತಿವೆ.<br><br>ರಾಜ್ಯದ ಖಾಸಗಿ ಅನುದಾನರಹಿತ ಶಿಕ್ಷಣ ಸಂಸ್ಥೆಗಳು ಕರ್ನಾಟಕ ಶಿಕ್ಷಣ ಕಾಯ್ದೆ 1983ರಡಿ ಅನ್ವಯಿಸುವ ನಿಯಮಗಳಿಗೆ ಬದ್ಧರಿದ್ದು, ಸದರಿ ಶಾಲೆಗಳು ಖಾಸಗಿ ಅಸೋಸಿಯೇಷನ್‌ಗಳಿಗೊಳಪಟ್ಟು ಹಾಗೂ ಕೆಲವೊಂದು ವಿಷಯಗಳಿಗೆ ಸಂಬಂಧಿಸಿದಂತೆ ಮುಕ್ತವಾಗಿ ವ್ಯವಹರಿಸುವ ಸ್ವಾತಂತ್ರ್ಯವನ್ನು ಹೊಂದಿದ್ದು, ಸದರಿ ಶಿಕ್ಷಣ ಸಂಸ್ಥೆಗಳ ಆಡಳಿತದಲ್ಲಿ ಹಸ್ತಕ್ಷೇಪ ಮಾಡಲಾಗುತ್ತಿಲ್ಲ. |

ಇಪಿ 99 ಪಿಜಿಸಿ 2021

[ ಎಸ್.ಸುರೇಶ್ ಕುಮಾರ್]
ಪ್ರಾಥಮಿಕ ಮತ್ತು ಪ್ರೌಢ ಶಿಕ್ಷಣ ಹಾಗೂ
ಸಕಾಲ ಸಚಿವರು.

# ಕರ್ನಾಟಕ ವಿಧಾನ ಸಭೆ

ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 2629

ಸದಸ್ಯರ ಹೆಸರು : ಶ್ರೀ ಅಮರೇಗೌಡ ಲಿಂಗನಗೌಡ ಪಾಟೀಲ್ ಬಯ್ಯಾಪುರ್ (ಕುಷ್ಟಗಿ)

ಉತ್ತರಿಸುವ ದಿನಾಂಕ : 18-03-2021

ಉತ್ತರಿಸುವ ಸಚಿವರು : ಪ್ರಾಥಮಿಕ ಮತ್ತು ಪ್ರೌಢ ಶಿಕ್ಷಣ ಹಾಗೂ ಸಕಾಲ ಸಚಿವರು

| ಕ್ರ ಸಂ. | ಪ್ರಶ್ನೆ | ಉತ್ತರ |
|---|---|---|
| ಅ) | ಸೇವೆಯಲ್ಲಿರುವ ನೌಕರ ಸ್ಥಳೀಯ ವೃಂದ ಸೇರಲು ದಾಖಲೆಗಳನ್ನು ನೀಡಬೇಕೆಂಬ ನಿಯಮವಿದ್ದರೂ ಸಹ ಪದವಿ ಪೂರ್ವ ಶಿಕ್ಷಣ ಇಲಾಖೆಯಲ್ಲಿ ಸುಳ್ಳು ದಾಖಲೆಗಳನ್ನು ನೀಡಿ, ಸ್ಥಳೀಯ ವೃಂದ ಸೇರಿರುವ ಬಗ್ಗೆ ದೂರು ಬಂದಿದೆಯೇ; ಪ್ರಸ್ತುತ ದೂರು ಯಾವ ಹಂತದಲ್ಲಿದೆ; | ಹೌದು ಬಂದಿದೆ.<br><br>ಸದರಿ ನೌಕರರ ಬಡ್ತಿಯನ್ನು ರದ್ದುಪಡಿಸಿ ಪ್ರಕರಣವನ್ನು ಇತ್ಯರ್ಥಗೊಳಿಸಲಾಗಿದೆ. |
| ಆ) | ಪದವಿ ಪೂರ್ವ ಶಿಕ್ಷಣ ಇಲಾಖೆಯಲ್ಲಿ ಕಲಂ-371-ಜೆ ಅಡಿಯಲ್ಲಿ ಅನುಬಂಧ-ಬಿ ಯಲ್ಲಿ ವಾಸಸ್ಥಳ ಪ್ರಮಾಣ ಪತ್ರ ನೀಡಿ ಸ್ಥಳೀಯ ವೃಂದಕ್ಕೆ ಸ್ಥಳೀಯರಲ್ಲದ ಉಪನ್ಯಾಸಕರು ಸೇರಿ ಬಡ್ತಿ ಪಡೆದಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; | ಬಂದಿರುತ್ತದೆ. |
| ಇ) | ಹಾಗಿದ್ದಲ್ಲಿ, ಅಂತಹ ಉಪನ್ಯಾಸಕರ ವಿರುದ್ಧ ಸರ್ಕಾರ ಕೈಗೊಂಡ ಕ್ರಮವೇನು; | ಪದವಿ ಪೂರ್ವ ಶಿಕ್ಷಣ ಇಲಾಖೆಯ ಸರ್ಕಾರಿ ಪದವಿ ಪೂರ್ವ ಕಾಲೇಜುಗಳಲ್ಲಿ ಕಾರ್ಯನಿರ್ವಹಿಸುತ್ತಿರುವ ಹೈದ್ರಾಬಾದ್-ಕನಾಟಕ ಪ್ರಾದೇಶಿಕ ರಾಜಯವ್ಯಾಪಿ ಸ್ಥಳೀಯ ವೃಂದದ 15 ಮತ್ತು ರಾಜ್ಯ ವ್ಯಾಪಿ ಉಳಿಕೆ ಮೂಲ ವೃಂದದ 80 ಉಪನ್ಯಾಸಕರುಗಳಿಗೆ ಪ್ರಾಚಾರ್ಯರ ವೃಂದದ ಹುದ್ದೆಗೆ ಸರ್ಕಾರದ ಅಧಿಸೂಚನೆ ಸಂಖ್ಯೆ:ಇಡಿ 52 ಡಿಜಿಡಿ 2019 ದಿನಾಂಕ:08-01-2020ರಲ್ಲಿ ಸ್ಥಾನಪನ್ನ ಬಡ್ತಿ ನೀಡಿ ಆದೇಶಿಸಿದೆ. ಅದರಂತೆ ಸದರಿ ಉಪನ್ಯಾಸಕರುಗಳಿಗೆ ಕೌನ್ಸೆಲಿಂಗ್ ಮೂಲಕ ಸ್ಥಳ ನಿಯುಕ್ತಿಗೊಳಿಸಲಾಗಿರುತ್ತದೆ.<br><br>ಸ್ಥಳ ನಿಯುಕ್ತಿಗೊಳಿಸಿದ ಆದೇಶದಲ್ಲಿನ ಶ್ರೀ ರವೀಂದ್ರ ಸಿದ್ದಪ್ಪ ಬಂಡಿ, ಗಣಿತಶಾಸ್ತ್ರ ಉಪನ್ಯಾಸಕರು, ಸರ್ಕಾರಿ ಪದವಿ ಪೂರ್ವ ಕಾಲೇಜು, ಹಟ್ಟಿ, ಲಿಂಗಸ್ಗೂರು ತಾಲ್ಲೂಕು, ರಾಯಚೂರು ಜಿಲ್ಲೆ ಇವರು ಸುಳ್ಳು ದಾಖಲೆ ಸಲ್ಲಿಸಿ, ಸ್ಥಳೀಯ ವೃಂದದ ಜೇಷ್ಠತಾ ಪಟ್ಟಿಯಲ್ಲಿ ಸೇರ್ಪಡೆಯಾಗಿರುವುದಾಗಿ ದೂರು |
| ಈ) | ಸುಳ್ಳು ದಾಖಲೆ ನೀಡಿ ಸರ್ಕಾರಿ ಸೇವೆಯಲ್ಲಿ ಮುಂಬಡ್ತಿ ಪಡೆದಿರುವುದು ಸರ್ಕಾರದ ಗಮನಕ್ಕಿದ್ದರೂ ಸಹ, ಅಂತಹವರ ವಿರುದ್ಧ ಕ್ರಮ ಕೈಗೊಳ್ಳದಿರುವುದಕ್ಕೆ ಕಾರಣವೇನು? | |

| | | |
|---|---|---|
| | | ದಾಖಲಾಗಿರುವುದರಿಂದ ಸದರಿಯವರ ಮೂಲ ಸೇವಾ ಪುಸ್ತಕವನ್ನು ಪರಿಶೀಲಿಸಲಾಗಿ, ಇವರ ನಿವಾಸ ಬಿಜಾಪುರ ಎಂದು ನಮೂದಾಗಿರುತ್ತದೆ ಮತ್ತು ಸರ್ಕಾರದ ಪತ್ರ ಸಂಖ್ಯೆ:ಸಿಆಸುಇ 78 ಹೈಕಕೋ 2014 ದಿನಾಂಕ:14-01-2015ರಲ್ಲಿ ಈ ರೀತಿಯಾಗಿ ಉಲ್ಲೇಖಿಸಲಾಗಿದೆ-<br><br>"ಸಕ್ಷಮ ಪ್ರಾಧಿಕಾರಗಳು ಈಗಾಗಲೇ ಕಾರ್ಯನಿರ್ವಹಿಸುತ್ತಿರುವ ನೌಕರರಿಗೆ ಅರ್ಹತಾ ಪ್ರಮಾಣ ಪತ್ರ ನೀಡಿದಲ್ಲಿ ಅಂತಹ ಅರ್ಹತಾ ಪ್ರಮಾಣ ಪತ್ರಗಳನ್ನು ಹಿಂಪಡೆದು ಸಂಬಂಧಿಸಿದ ನೇಮಕಾತಿ ಪ್ರಾಧಿಕಾರಗಳಿಗೆ ತಿಳಿಸಲು ಸೂಚಿಸಿದೆ."<br><br>ಈ ಕುರಿತು ಸಹಾಯಕ ಆಯುಕ್ತರು, ರಾಯಚೂರು ಇವರು ದಿನಾಂಕ:16-01-2015ರಲ್ಲಿ ಜಿಲ್ಲೆಯ ಎಲ್ಲಾ ಇಲಾಖೆಗಳಿಗೆ ಪತ್ರ ಬರೆದು ಮಾನ್ಯವಲ್ಲದ ಅರ್ಹತಾ ಪ್ರಮಾಣ ಪತ್ರಗಳನ್ನು ಹಿಂದಿರುಗಿಸಲು ಸೂಚಿಸಿರುತ್ತಾರೆ. ಆದರೆ ಶ್ರೀ ರವೀಂದ್ರಪ್ಪ ಸಿದ್ದಪ್ಪ ಬಂಡಿ, ಗಣಿತಶಾಸ್ತ್ರ ಉಪನ್ಯಾಸಕರು ಇವರು ಹಿಂದಿರುಗಿಸದೇ ಸದರಿ ಅರ್ಹತಾ ಪ್ರಮಾಣ ಪತ್ರವನ್ನು ಸಲ್ಲಿಸಿ, ರಾಜ್ಯವ್ಯಾಪಿ ಸ್ಥಳೀಯ ವೃಂದದ ಜೇಷ್ಠತಾ ಪಟ್ಟಿಯಲ್ಲಿ ಸ್ಥಾನ ಪಡೆಯದಲ್ಲದೇ ಪ್ರಾಂಶುಪಾಲರ ಹುದ್ದೆಗೂ ಬಡ್ತಿಯನ್ನು ಪಡೆದಿರುತ್ತಾರೆ.<br><br>ಮೇಲಿನ ಎಲ್ಲಾ ಅಂಶಗಳ ಕಾರಣದಿಂದಾಗಿ ಸ್ಥಳನಿಯುಕ್ತಿಗೊಳಿಸಿದ ಆದೇಶದಲ್ಲಿನ ಶ್ರೀ ರವೀಂದ್ರ ಸಿದ್ಧಪ್ಪ ಬಂಡಿ, ಗಣಿತಶಾಸ್ತ್ರ ಉಪನ್ಯಾಸಕರು, ಸರ್ಕಾರಿ ಪದವಿ ಪೂರ್ವ ಕಾಲೇಜು, ಹಟ್ಟಿ, ಲಿಂಗಸ್ಗೂರು ತಾಲ್ಲೂಕು, ರಾಯಚೂರು ಜಿಲ್ಲೆ ಇವರ ಬಡ್ತಿ ಆದೇಶವನ್ನು ರದ್ದುಪಡಿಸಲು ನಿರ್ದೇಶಕರು, ಪದವಿ ಪೂರ್ವ ಶಿಕ್ಷಣ ಇಲಾಖೆರವರು ದಿನಾಂಕ:31-01-2020ರಂದು ಪ್ರಸ್ತಾವನೆ ಸಲ್ಲಿಸಿದ್ದರು.<br><br>ನಿರ್ದೇಶಕರ ಪ್ರಸ್ತಾವನೆಯಲ್ಲಿನ ಅಂಶಗಳನ್ನು ಪರಿಶೀಲಿಸಲಾಗಿ, ಶ್ರೀ ರವೀಂದ್ರ ಸಿದ್ಧಪ್ಪ ಬಂಡಿ ಇವರು ತಪ್ಪು ಮಾಹಿತಿ ನೀಡಿ ಹೈದರಾಬಾದ್ – ಕರ್ನಾಟಕ ರಾಜ್ಯ ವ್ಯಾಪಿ ಸ್ಥಳೀಯ ಉಪನ್ಯಾಸಕರ ವೃಂದದ ಜೇಷ್ಠತಾ ಪಟ್ಟಿಯಲ್ಲಿ ಸ್ಥಾನ ಪಡೆದು ಈ ಮೂಲಕ |

| | | |
|---|---|---|
| | | ಪ್ರಾಂಶುಪಾಲರ ಹುದ್ದೆಗೆ ಬಡ್ತಿ ಹೊಂದಿರುವುದರಿಂದ ಸದರಿಯವರ ಬಡ್ತಿಯನ್ನು ಏಕೆ ಹಿಂಪಡೆಯಬಾರದು ಎಂದು ನಿರ್ಣಯಿಸಿ, ಸದರಿಯವರಿಗೆ ದಿನಾಂಕ:17-06-2020ರಂದು ಕಾರಣ ಕೇಳುವ ಸೂಚನಾ ಪತ್ರವನ್ನು ಜಾರಿ ಮಾಡಲಾಗಿತ್ತು.<br><br>ಸದರಿ ಉಪನ್ಯಾಸಕರು ದಿನಾಂಕ:29-06-2020ರಂದು ಸಮಜಾಯಿಷಿ ಹೇಳಿಕೆಯನ್ನು ಲಿಖಿತವಾಗಿ ಸಲ್ಲಿಸಿರುತ್ತಾರೆ. ಸದರಿ ಹೇಳಿಕೆಯನ್ನು ಪರಿಶೀಲಿಸಿ, ಸರ್ಕಾರದ ಆದೇಶ ಸಂಖ್ಯೆ:ಇಡಿ 52 ಡಿಜಿಡಿ 2019 ದಿನಾಂಕ:24-09-2020ರಲ್ಲಿ ಶ್ರೀ ರವೀಂದ್ರ ಸಿದ್ಧಪ್ಪ ಬಂಡಿ ಇವರಿಗೆ ನೀಡಿದ್ದ ಬಡ್ತಿ ಆದೇಶವನ್ನು ರದ್ದುಪಡಿಸಲಾಗಿದೆ. |

**ಸಂಖ್ಯೆ: ಇಪಿ 59 ಡಿಜಿಡಬ್ಲ್ಯೂ 2021**

(ಎಸ್.ಸುರೇಶ್ ಕುಮಾರ್)
ಪ್ರಾಥಮಿಕ ಮತ್ತು ಪ್ರೌಢ ಶಿಕ್ಷಣ ಹಾಗೂ ಸಕಾಲ ಸಚಿವರು.

# ಕರ್ನಾಟಕ ವಿಧಾನ ಸಭೆ

ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 2963

ಸದಸ್ಯರ ಹೆಸರು : ಶ್ರೀ ಆನಂದ್ ಸಿದ್ದು ನ್ಯಾಮಗೌಡ (ಜಮಖಂಡಿ)

ಉತ್ತರಿಸುವ ದಿನಾಂಕ : 18.03.2021

ಉತ್ತರಿಸುವ ಸಚಿವರು : ಮಾನ್ಯ ಉಪ ಮುಖ್ಯಮಂತ್ರಿಗಳು ಹಾಗೂ ಉನ್ನತ ಶಿಕ್ಷಣ, ಮಾಹಿತಿ ತಂತ್ರಜ್ಞಾನ, ಜೈವಿಕ ತಂತ್ರಜ್ಞಾನ ಹಾಗೂ ವಿಜ್ಞಾನ ಮತ್ತು ತಂತ್ರಜ್ಞಾನ, ಕೌಶಲ್ಯಾಭಿವೃದ್ಧಿ ಉದ್ಯಮಶೀಲತೆ ಮತ್ತು ಜೀವನೋಪಾಯ ಸಚಿವರು

| ಕ್ರ. ಸಂ | ಪ್ರಶ್ನೆ | ಉತ್ತರ |
|---|---|---|
| (ಅ) | ಜಮಖಂಡಿ ನಗರದಲ್ಲಿ ಗಂಡು ಮಕ್ಕಳ ಸರ್ಕಾರಿ ಪದವಿ ಕಾಲೇಜು ಇಲ್ಲದಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; | ಬಂದಿದೆ |
| (ಆ) | ಬಂದಿದ್ದಲ್ಲಿ ಪ್ರಥಮ ದರ್ಜೆ ಕಾಲೇಜನ್ನು ಯಾವಾಗ ಮಂಜೂರು ಮಾಡಲಾಗುವುದು | ಕೋವಿಡ್-19 ಪ್ರಯುಕ್ತ ಆರ್ಥಿಕ ನಿರ್ಬಂಧ ಜಾರಿಯಲ್ಲಿರುವುದರಿಂದ ಹೊಸ ಕಾಲೇಜು ಪ್ರಾರಂಭಿಸುವ ಪ್ರಸ್ತಾವನೆ ಇರುವುದಿಲ್ಲ. |
| ಇ) | ಯಾವ ಕಾಲಮಿತಿಯಲ್ಲಿ ಕಾಲೇಜನ್ನುಪ್ರಾರಂಭಿಸಲಾಗುವುದು? | |

ಕಡತ ಸಂಖ್ಯೆ: ಇಡಿ 37 ಹೆಚ್‌ಪಿಸಿ 2021

(ಡಾ: ಅಶ್ವಥ್‌ನಾರಾಯಣ ಸಿ.ಎನ್)
ಉಪ ಮುಖ್ಯಮಂತ್ರಿಗಳು ಹಾಗೂ ಉನ್ನತ ಶಿಕ್ಷಣ,
ಮಾಹಿತಿ ತಂತ್ರಜ್ಞಾನ, ಜೈವಿಕ ತಂತ್ರಜ್ಞಾನ ಹಾಗೂ ವಿಜ್ಞಾನ ಮತ್ತು
ತಂತ್ರಜ್ಞಾನ, ಕೌಶಲ್ಯಾಭಿವೃದ್ಧಿ ಉದ್ಯಮಶೀಲತೆ ಮತ್ತು
ಜೀವನೋಪಾಯ ಸಚಿವರು

# ಕರ್ನಾಟಕ ವಿಧಾನಸಭೆ

| | | |
|---|---|---|
| ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ | : | 2034 |
| ಸದಸ್ಯರ ಹೆಸರು | : | ಶ್ರೀ ದೊಡ್ಡಗೌಡರ ಮಹಾಂತೇಶ ಬಸವಂತರಾಯ(ಕಿತ್ತೂರು) |
| ಉತ್ತರಿಸಬೇಕಾದ ದಿನಾಂಕ | : | 18.03.2021 |
| ಉತ್ತರಿಸುವ ಸಚಿವರು | : | ಮಾನ್ಯ ಪ್ರಾಥಮಿಕ ಮತ್ತು ಪ್ರೌಢ ಶಿಕ್ಷಣ ಹಾಗೂ ಸಕಾಲ ಸಚಿವರು |

| ಕ್ರ.ಸಂ | ಪ್ರಶ್ನೆ | ಉತ್ತರ |
|---|---|---|
| ಅ) | ಬೆಳಗಾವಿ ಜಿಲ್ಲೆಯಲ್ಲಿ 2019-20 ಮತ್ತು 2020-21ನೇ ಸಾಲಿನಲ್ಲಿ ಸುರಿದ ಭೀಕರ ಮಳೆ ಮತ್ತು ಪ್ರವಾಹದಿಂದ ಪ್ರಾಥಮಿಕ ಮತ್ತು ಪ್ರೌಢ ಶಾಲೆಗಳು ತುಂಬಾ ಹಾನಿಗೊಳಗಾಗಿದ್ದು ಸಿ.ಎಸ್.ಆರ್(CSR FUND) ಅನುದಾನದಡಿ ಹಾನಿಗೊಳಗಾದ ಕಟ್ಟಡಗಳ ದುರಸ್ತಿಗೊಳಿಸುವಲ್ಲಿ ಸರ್ಕಾರವು ಕೈಗೊಂಡ ಕ್ರಮವೇನು; | 2019-20ನೇ ಸಾಲಿನಲ್ಲಿ ಸುರಿದ ಭೀಕರ ಮಳೆ ಮತ್ತು ಪ್ರವಾಹದಿಂದ ಹಾನಿಗೊಳಗಾದ ಬೆಳಗಾವಿ ಕಂದಾಯ ಜಿಲ್ಲೆಗೆ ಸಂಬಂಧಿಸಿದಂತೆ ಸಿ.ಎಸ್.ಆರ್(CSR FUND) ಯೋಜನೆಯಡಿ 19 ಸರ್ಕಾರಿ ಶಾಲೆಗಳಲ್ಲಿ ಕೊಠಡಿ ನಿರ್ಮಾಣ ಕಾರ್ಯವನ್ನು ಮಾಡಲಾಗಿರುತ್ತದೆ.<br><br>ಇದರಲ್ಲಿ ಶಾಲಾ ಕೊಠಡಿಗಳ ನಿರ್ಮಾಣಕ್ಕೆ OSAAT, PES, SISB(USA) ಮತ್ತು ಮಾನ್ಯ ಶ್ರೀ ಬಾಲಚಂದ್ರ ಲಕ್ಷ್ಮಣರಾವ್ ಜಾರಕಿಹೊಳಿ ಹೆಸರಿನ ಸಂಸ್ಥೆಗಳ ಕೊಡುಗೆಗಳು ಗಣನೀಯವಾಗಿವೆ. ವಿವರವಾದ ಪಟ್ಟಿಯನ್ನು ಅನುಬಂಧ-1ರಲ್ಲಿ ಲಗತ್ತಿಸಿದೆ.<br><br>• ಮುಂದುವರೆದು ಬೆಳಗಾವಿ ಜಿಲ್ಲೆಗೆ 2019-20ನೇ ಸಾಲಿನಲ್ಲಿ ರಾಜ್ಯ ಬಂಡವಾಳ ವೆಚ್ಚದಡಿ ದುರಸ್ಥಿ ಕಾರ್ಯಕ್ಕಾಗಿ ರೂ.65.48ಲಕ್ಷಗಳನ್ನು ಬಿಡುಗಡೆ ಮಾಡಲಾಗಿದೆ.<br><br>• ಬೆಳಗಾವಿ ಜಿಲ್ಲೆಗೆ 2019-20ನೇ ಸಾಲಿನಲ್ಲಿ ರಾಜ್ಯ ಬಂಡವಾಳ ವೆಚ್ಚದಡಿ ನಿರ್ಮಾಣ ಕಾಮಗಾರಿಗಳಿಗಾಗಿ ರೂ.116.00ಲಕ್ಷಗಳನ್ನು ಬಿಡುಗಡೆ ಮಾಡಲಾಗಿದೆ.<br><br>• ಹಾಗೂ ಬೆಳಗಾವಿ ಜಿಲ್ಲೆಗೆ 2019-20ನೇ ಸಾಲಿನಲ್ಲಿ |

| | | |
|---|---|---|
| | | ಮಳೆ ಹಾನಿಗೊಳಗಾದ ಸರ್ಕಾರಿ ಶಾಲಾ ಕೊಠಡಿಗಳ ಮರು ನಿರ್ಮಾಣಕ್ಕಾಗಿ ಆರ್.ಐ.ಡಿ.ಎಫ್–25 ಯೋಜನೆಯಡಿ ರೂ.6623.50ಲಕ್ಷಗಳನ್ನು ಬಿಡುಗಡೆ ಮಾಡಲಾಗಿದೆ<br>• ಬೆಳಗಾವಿ ಜಿಲ್ಲೆಗೆ 2020–21ನೇ ಸಾಲಿನಲ್ಲಿ ಕಿರಿಯ ಮತ್ತು ಹಿರಿಯ ಪ್ರಾಥಮಿಕ ಶಾಲಾ ಕೊಠಡಿಗಳ ಮರು ನಿರ್ಮಾಣದ/ ಹೆಚ್ಚುವರಿ ಕೊಠಡಿಗಳ ನಿರ್ಮಾಣಕ್ಕಾಗಿ ರೂ.392.20ಲಕ್ಷಗಳನ್ನು ಬಿಡುಗಡೆ ಮಾಡಲಾಗಿದೆ ಹಾಗೂ ಪ್ರೌಢಶಾಲಾ ಕೊಠಡಿಗಳ ಮರು ನಿರ್ಮಾಣದ/ ಹೆಚ್ಚುವರಿ ಕೊಠಡಿಗಳ ನಿರ್ಮಾಣಕ್ಕಾಗಿ ರೂ.453.75ಲಕ್ಷಗಳನ್ನು ಬಿಡುಗಡೆ ಮಾಡಲಾಗಿದೆ. |
| ಆ) | ಹಾಗಿದ್ದಲ್ಲಿ, ಕಿತ್ತೂರು ವಿಧಾನಸಭಾ ಕ್ಷೇತ್ರದ ವ್ಯಾಪ್ತಿಯ ವಿವಿಧ ಗ್ರಾಮಗಳ ಶಾಲಾ–ಕಾಲೇಜುಗಳ ಕಟ್ಟಡ ನಿರ್ಮಾಣಕ್ಕೆ ಸಿ.ಎಸ್.ಆರ್(CSR FUND) ಅನುದಾನ ಸದ್ಭಳಕೆ ಮಾಡಿಕೊಳ್ಳಲು ಸರ್ಕಾರವು ಕ್ರಮ ಜರುಗಿಸುವುದೇ? | ಇಲಾಖೆಯು ಸಿ.ಎಸ್.ಆರ್(CSR FUND), ಪ್ರತಿಷ್ಠಿತ ಐ.ಟಿ ಸಂಸ್ಥೆಗಳು ಹಾಗೂ ಇತರೆ ದಾನಿಗಳಿಂದ ಅನುದಾನ ಲಭ್ಯವಾದಲ್ಲಿ ಅದನ್ನು ಸದುಪಯೋಗ ಮಾಡಿಕೊಳ್ಳಲು ಎಲ್ಲಾ ರೀತಿಯ ಅವಕಾಶಗಳನ್ನು ರೂಪಿಸಿಕೊಂಡಿದೆ.<br>ಅದಕ್ಕಾಗಿ "ನನ್ನ ಶಾಲೆ ನಮ್ಮ ಕೊಡುಗೆ" ಎಂಬ ಮೊಬೈಲ್ ಆ್ಯಪ್ ಮತ್ತು ಸೊಸೈಟಿಯನ್ನು ರೂಪಿಸಿ ಅದರ ಮೂಲಕ ಸರ್ಕಾರಿ ಶಾಲೆಗಳಿಗೆ ಕೊಡುಗೆಗಳನ್ನು ಒದಗಿಸಲು ಪ್ರಮುಖ ವೇದಿಕೆಯನ್ನಾಗಿ ರೂಪಿಸಲಾಗುತ್ತಿದೆ.<br>ಶಾಲಾ ಹಂತದಿಂದ ಆಯುಕ್ತಾಲಯ ಹಂತದವರೆಗೂ ಸಿ.ಎಸ್.ಆರ್ ನಿಧಿಯನ್ನು/ ಕೊಡುಗೆಗಳನ್ನು ಪಡೆಯಲು ಅವಕಾಶ ಕಲ್ಪಿಸಲಾಗಿದೆ. |

ಇಪಿ 71 ಎಂ.ಹೆಚ್.ಟಿ 2021

S. Su

(ಎಸ್. ಸುರೇಶ್ ಕುಮಾರ್)
ಪ್ರಾಥಮಿಕ ಮತ್ತು ಪ್ರೌಢಶಿಕ್ಷಣ ಸಚಿವರು

ಅನುಬಂಧ-1

# ಸಾರ್ವಜನಿಕ ಶಿಕ್ಷಣ ಇಲಾಖೆಯ ಉಪನಿರ್ದೇಶಕರ ಕಾರ್ಯಾಲಯ ಚಿಕ್ಕೋಡಿ

ಮಾನ್ಯ ವಿಧಾನ ಸಭಾ ಸದಸ್ಯರು ಶ್ರೀ ದೊಡ್ಡಗೌಡರ ಮಹಾಂತೇಶ ಬಸವರಾಯ (ಕಿತ್ತೂರ ಮತ ಕ್ಷೇತ್ರ) ಇವರ ಎಲ.ಎ.ಕ್ಯೂ ಪ್ರಶ್ನೆ ಸಂಖ್ಯೆ 2034ಕ್ಕೆ ಉತ್ತರ

## Corporate Social Responsibility (CSR) ಯೋಜನೆಯಡಿ ಕೈಗೊಂಡ ಕಾರ್ಯಕ್ರಮಗಳ ಮಾಹಿತಿ

| ಕ್ರ.ಸಂ. | ವಲಯ | ಸಂಸ್ಥೆ/ಸ್ವಯಂಸೇವಾ ಸಂಸ್ಥೆ/ಎನ್‌ಜಿಓ/ದಾನಿಗಳು | ಶಾಲೆಗಳ ಹೆಸರು | ಕಾಮಗಾರಿಯ ಸ್ವರೂಪ | ಆರಂಭಗೊಂಡ ವರ್ಷ ಮತ್ತು ದಿನಾಂಕ | ಕಾರ್ಯಕ್ರಮದ ಆರ್ಥಿಕ ಮೊತ್ತ/ವೆಚ್ಚ | ಕಾಮಗಾರಿಯ ಪ್ರಗತಿ ಹಂತ |
|---|---|---|---|---|---|---|---|
| 1 | ಹುಕ್ಕೇರಿ | OSAAT EDUCATION CHARTIBALE TRUST | ಕ ಗಂ ಶಾಲೆ ಅವರಗೋಳ | 3 ಶಾಲಾ ಕೊಠಡಿಗಳ ನಿರ್ಮಾಣ | 2019–20 | 35.00 | ಪ್ಲಂತ |
| 2 | ಹುಕ್ಕೇರಿ | OSAAT EDUCATION CHARTIBALE TRUST | ಕ ಗಂ ಶಾಲೆ ರಾಜಕಟ್ಟಿ | 3 ಶಾಲಾ ಕೊಠಡಿಗಳ ನಿರ್ಮಾಣ | 2019–20 | 35.00 | ಸ್ಲ್ಯಾಬ |
| 3 | ಅಥಣಿ | PES UNIVERSITY BANGALURU | ಕೆ.ಎಚ್.ಪಿ.ಎಸ್.ತೀರ್ಥ | 5 ಕೊಠಡಿ ನಿರ್ಮಾಣ | 2019–20 | 50.00 | ಮುಕ್ತಾಯ |
| 4 | ಅಥಣಿ | PES UNIVERSITY BANGALURU | ಕೆ.ಎಚ್.ಪಿ.ಎಸ್ ಮಹೇಶವಾಡಗಿ | 4 ಕೊಠಡಿ ನಿರ್ಮಾಣ | 2019–20 | 50.00 | ಮುಕ್ತಾಯ ಹಂತದಲ್ಲಿವೆ |
| 5 | ಅಥಣಿ | PES UNIVERSITY BANGALURU | ಕೆ.ಎಚ್.ಪಿ.ಎಸ್ ಪೇರಲ ತೋಟ | 4 ಕೊಠಡಿ ನಿರ್ಮಾಣ | 2019–20 | 50.00 | ಮುಕ್ತಾಯ |
| 6 | ಕಾಗವಾಡ | OSAAT EDUCATION CHARTIBALE TRUST | ಕೆ.ಎಚ್.ಪಿ.ಎಸ್.ಕಾತ್ರಾಳ: | 3 ವರ್ಗ ಕೋಣೆಗಳ ನಿರ್ಮಾಣ | 2019–20 | 35.00 | ಪ್ಲಂತ ಲೇವಲ್ |
| 7 | ರಾಯಬಾಗ | PES UNIVERSITY BENGALORE | ಸ ಕಿ ಪ್ರಾ ಶಾಲೆ ಹಸರೆ ತೋಟ ನಿಲಜ | 4 ಶಾಲಾ ಕೊಠಡಿಗಳ ನಿರ್ಮಾಣ | 2019–20 | 50.00 | ಮುಕ್ತಾಯ ಹಂತದಲ್ಲಿದೆ |
| 8 | ರಾಯಬಾಗ | OSAAT EDUCATION CHARTIBALE TRUST | ಕ ಗಂ ಶಾಲೆ ಹುಬ್ಬರವಾಡಿ | 2 ಶಾಲಾ ಕೊಠಡಿಗಳ ನಿರ್ಮಾಣ | 2019–20 | 24.00 | 2 ಕೊಠಡಿಗಳ ಸ್ಲ್ಯಾಬ ಮತ್ತು 1 ಹೌಟೇಕ ಶೌಚಾಲಯ |
| 9 | ಗೋಕಾಕ | SEVA INTERNATIONAL SOCIETY BANGALURU (U.S.A) | ಸರಕಾರಿ ಹಿರಿಯ ಪ್ರಾಥಮಿಕ ಗಂಡು ಶಾಲೆ ಅಂಕಲಗಿ | ಶೌಚಾಲಯ–2 ಮೂತ್ರಿ–2 | 2019–20 | 1.70 | ಮುಕ್ತಾಯಗೊಂಡಿದೆ |
| 10 | ಗೋಕಾಕ | SEVA INTERNATIONAL SOCIETY BANGALURU (U.S.A) | ಸರಕಾರಿ ಹಿರಿಯ ಉರ್ದು ಪ್ರಾಥಮಿಕ ಶಾಲೆ ಅಂಕಲಗಿ | ಶೌಚಾಲಯ–2 ಮೂತ್ರಿ–2 | 2019–20 | 2.00 | ಮುಕ್ತಾಯಗೊಂಡಿದೆ |
| 11 | ಗೋಕಾಕ | SEVA INTERNATIONAL SOCIETY BANGALURU (U.S.A) | ಸರಕಾರಿ ಕಿರಿಯ ಪ್ರಾಥಮಿಕ ಶಾಲೆ ಲಗಮೇಶ್ವರ | ಶೌಚಾಲಯ/ಮೂತ್ರಿ/ಕೊಠಡಿಗಳ ಫ್ಲೋರಿಂಗ್ | 2019–20 | 0.70 | ಮುಕ್ತಾಯಗೊಂಡಿದೆ |

| | | | | | | | |
|---|---|---|---|---|---|---|---|
| 12 | ಗೋಕಾಕ | SEVA INTERNATIONAL SOCIETY BANGALURU (U.S.A) | ಸರಕಾರಿ ಕಿರಿಯ ಪ್ರಾಥಮಿಕ ಶಾಲೆ ಅಡಿಬಟ್ಟಿ ಬಡಾವಣೆ | ಶೌಚಾಲಯ-2 ಮೂತ್ರಿ-2 ಕೊಠಡಿಗಳ ಪ್ಲೋರಿಂಗ್-1 | 2019-20 | 2.20 | ಮುಕ್ತಾಯಗೊಂಡಿದೆ |
| 13 | ಗೋಕಾಕ | SEVA INTERNATIONAL SOCIETY BANGALURU (U.S.A) | ಸರಕಾರಿ ಕಿರಿಯ ಪ್ರಾಥಮಿಕ ಶಾಲೆ ಯದ್ದಲಗುಡ್ಡ | ಶೌಚಾಲಯ-2 ಮೂತ್ರಿ-1/ಕೊಠಡಿಗಳ ಪ್ಲೋರಿಂಗ್ | 2019-20 | 2.00 | ಮುಕ್ತಾಯಗೊಂಡಿದೆ |
| 14 | ಮೂಡಲಗಿ | ಮಾನ್ಯ ಶ್ರೀ ಬಾಲಚಂದ್ರ ಲಕ್ಷ್ಮಣರಾವ ಜಾರಕಿಹೊಳಿ | ಸ ಹಿ ಪ್ರಾ ಶಾಲೆ ಅಡಿಬಟ್ಟಿ | 2 ಶಾಲಾ ಕೊಠಡಿ | 2019-20 | 24.00 | ಪೂರ್ಣಗೊಂಡಿದೆ |
| 15 | ಮೂಡಲಗಿ | ಮಾನ್ಯ ಶ್ರೀ ಬಾಲಚಂದ್ರ ಲಕ್ಷ್ಮಣರಾವ ಜಾರಕಿಹೊಳಿ | ಸ ಹಿ ಪ್ರಾ ಶಾಲೆ ಚಿಗಡೊಳ್ಳಿ | 2 ಶಾಲಾ ಕೊಠಡಿ | 2019-20 | 24.00 | ಪೂರ್ಣಗೊಂಡಿದೆ |
| 16 | ಮೂಡಲಗಿ | ಮಾನ್ಯ ಶ್ರೀ ಬಾಲಚಂದ್ರ ಲಕ್ಷ್ಮಣರಾವ ಜಾರಕಿಹೊಳಿ | ಸ ಹಿ ಪ್ರಾ ಶಾಲೆ ಮೆಳವಂಕಿ | 1 ಶಾಲಾ ಕೊಠಡಿ | 2019-20 | 12.00 | ಪೂರ್ಣಗೊಂಡಿದೆ |
| 17 | ಮೂಡಲಗಿ | OSAAT EDUCATION CHARTIBALE TRUST | ಸ ಹಿ ಪ್ರಾ ಶಾಲೆ ಮಸಗುಪ್ಪಿ | 3 ಶಾಲಾ ಕೊಠಡಿ, 1 ಶೌಚಾಲಯ | 2019-20 | 35.00 | ಸ್ಲ್ಯಾಬ |
| 18 | ಮೂಡಲಗಿ | RAPID SOCIETY TAMILINADU | ಸ ಹಿ ಪ್ರಾ ಶಾಲೆ ಮಸಗುಪ್ಪಿ | 1 ಶೌಚಾಲಯ | 2019-20 | 6.00 | ಮುಕ್ತಾಯ ಹಂತ |
| 19 | ಮೂಡಲಗಿ | HABITTED SOCIETY BANGALURU | ಸ ಹಿ ಪ್ರಾ ಶಾಲೆ ಸಿದ್ದಾರೂಢ ಮಠ ಮೆಳವಂಕಿ | 1 ಶೌಚಾಲಯ | 2019-20 | 6.00 | ಪ್ರಾರಂಭಿಸಿದೆ |

ಉಪನಿರ್ದೇಶಕರು (ಆಡಳಿತ)
ಸಾರ್ವಜನಿಕ ಶಿಕ್ಷಣ ಇಲಾಖೆ, ಚಿಕ್ಕೋಡಿ

# ಕರ್ನಾಟಕ ವಿಧಾನ ಸಭೆ

ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 2986

ಸದಸ್ಯರ ಹೆಸರು : ಶ್ರೀ ಲಿಂಗೇಶ ಕೆ.ಎಸ್.(ಬೇಲೂರು)

ಉತ್ತರಿಸುವ ದಿನಾಂಕ : 18.03.2021

ಉತ್ತರಿಸುವ ಸಚಿವರು : ಮಾನ್ಯ ಉಪ ಮುಖ್ಯಮಂತ್ರಿಗಳು ಹಾಗೂ ಉನ್ನತ ಶಿಕ್ಷಣ, ಮಾಹಿತಿ ತಂತ್ರಜ್ಞಾನ, ಜೈವಿಕ ತಂತ್ರಜ್ಞಾನ ಹಾಗೂ ವಿಜ್ಞಾನ ಮತ್ತು ತಂತ್ರಜ್ಞಾನ. ಕೌಶಲ್ಯಾಭಿವೃದ್ಧಿ ಉದ್ಯಮಶೀಲತೆ ಮತ್ತು ಜೀವನೋಪಾಯ ಸಚಿವರು

| ಕ್ರ. ಸಂ | ಪ್ರಶ್ನೆ | ಉತ್ತರ |
|---|---|---|
| (ಅ) | ಬೇಲೂರು ಪಟ್ಟಣದ ಸರ್ಕಾರಿ ಪ್ರಥಮ ದರ್ಜೆ ಕಾಲೇಜಿನಲ್ಲಿ ಸರಿಯಾದ ಮೂಲಭೂತ ಸೌಲಭ್ಯಗಳಿಲ್ಲದೇ ವಿದ್ಯಾರ್ಥಿಗಳಿಗೆ ತೊಂದರೆಯಾಗುತ್ತಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; | ಬಂದಿದೆ. |
| (ಆ) | ಬಂದಿದ್ದಲ್ಲಿ, ಸರ್ಕಾರಿ ಪ್ರಥಮ ದರ್ಜೆ ಕಾಲೇಜಿನ ಹಳೆಯ ಕಟ್ಟಡ ದುರಸ್ಥಿ ಕಾಮಗಾರಿಗೆ ಹಾಗೂ ಹೊಸದಾಗಿ 8 ಕೊಠಡಿಗಳ ನಿರ್ಮಾಣಕ್ಕೆ ಮತ್ತು ಶೌಚಾಲಯ ನಿರ್ಮಾಣಕ್ಕೆ ಯಾವಾಗ ಅನುದಾನ ಮಂಜೂರು ಮಾಡಿ, ಕಾಮಗಾರಿಯನ್ನು ಪ್ರಾರಂಭಿಸಲಾಗುವುದು? (ಸಂಪೂರ್ಣ ವಿವರ ನೀಡುವುದು). | 2019-20ನೇ ಸಾಲಿನಲ್ಲಿ ಬೇಲೂರು ಪಟ್ಟಣದ ಸರ್ಕಾರಿ ಪ್ರಥಮ ದರ್ಜೆ ಕಾಲೇಜಿನ ಕಟ್ಟಡ ದುರಸ್ಥಿ ಕಾಮಗಾರಿಗೆ ಹಾಗೂ ಹೊಸದಾಗಿ 8 ಕೊಠಡಿಗಳ ನಿರ್ಮಾಣಕ್ಕೆ ಮತ್ತು ಶೌಚಾಲಯ ನಿರ್ಮಾಣಕ್ಕೆ ರೂ.220.00ಲಕ್ಷಗಳ ಕಾಮಗಾರಿಯನ್ನು ಮಂಜೂರು ಮಾಡಿದ್ದು, ಆ ಪೈಕಿ ರೂ.50.00ಲಕ್ಷಗಳ ಅನುದಾನವನ್ನು ಲೋಕೋಪಯೋಗಿ ಇಲಾಖೆ ಇವರಿಗೆ ಬಿಡುಗಡೆ ಮಾಡಲಾಗಿರುತ್ತದೆ. ಸದರಿ ಕಾಮಗಾರಿಯನ್ನು ಕೋವಿಡ್ ಕಾರಣದಿಂದ ಕಾಮಗಾರಿ ಪ್ರಾರಂಭಿಸುವ ಮುನ್ನ ಆರ್ಥಿಕ ಇಲಾಖೆಯ ಸಹಮತಿ ಪಡೆಯಬೇಕಾಗಿದ್ದು, ಅದರಂತೆ ಕ್ರಮವಹಿಸಲಾಗುತ್ತಿದೆ. |

ಕಡತ ಸಂಖ್ಯೆ: ಇಡಿ 44 ಹೆಚ್‌ಪಿಸಿ 2021

(ಡಾ: ಅಶ್ವಥ್ ನಾರಾಯಣ ಸಿ.ಎನ್)
ಉಪ ಮುಖ್ಯಮಂತ್ರಿಗಳು ಹಾಗೂ ಉನ್ನತ ಶಿಕ್ಷಣ,
ಮಾಹಿತಿ ತಂತ್ರಜ್ಞಾನ, ಜೈವಿಕ ತಂತ್ರಜ್ಞಾನ ಹಾಗೂ ವಿಜ್ಞಾನ ಮತ್ತು
ತಂತ್ರಜ್ಞಾನ, ಕೌಶಲ್ಯಾಭಿವೃದ್ಧಿ ಉದ್ಯಮಶೀಲತೆ ಮತ್ತು
ಜೀವನೋಪಾಯ ಸಚಿವರು

54

ಕರ್ನಾಟಕ ವಿಧಾನ ಸಭೆ

ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 3037

ಸದಸ್ಯರ ಹೆಸರು : ಶ್ರೀ ಶ್ರೀನಿವಾಸ್ ಎಂ. (ಮಂಡ್ಯ)

ಉತ್ತರಿಸುವ ದಿನಾಂಕ : 18.03.2021

ಉತ್ತರಿಸುವ ಸಚಿವರು : ಪ್ರಾಥಮಿಕ ಮತ್ತು ಪ್ರೌಢ ಶಿಕ್ಷಣ ಹಾಗೂ ಸಕಾಲ ಸಚಿವರು.

| ಕ್ರ.ಸಂ. | ಪ್ರಶ್ನೆ | ಉತ್ತರ |
|---|---|---|
| ಅ) | ಪ್ರಾಥಮಿಕ ಶಿಕ್ಷಣದ ಗುಣಮಟ್ಟ ಸುಧಾರಣೆಗೆ ಮಹತ್ವದ ಪಾತ್ರ ನಿರ್ವಹಿಸುತ್ತಿರುವ ಕ್ಷೇತ್ರ ಸಂಪನ್ಮೂಲ ಸಮನ್ವಯ ಕೇಂದ್ರಗಳಲ್ಲಿ ಕಛೇರಿ ಸಹಾಯಕರ(ಪ್ರ.ದ.ಸ.,/ದ್ವಿ.ದ.ಸ.,)_ಹುದ್ದೆಗಳನ್ನು ಮಂಜೂರು ಮಾಡದಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; | ಬಂದಿದೆ. |
| ಆ) | ಬಂದಿದ್ದಲ್ಲಿ, ಈ ಸಂಬಂಧದಲ್ಲಿ ಕೈಗೊಂಡಿರುವ ಕ್ರಮಗಳೇನು? | ಕ್ಷೇತ್ರ ಸಂಪನ್ಮೂಲ ಸಮನ್ವಯ ಕೇಂದ್ರಗಳು ಕೇಂದ್ರ ಪ್ರಾಯೋಜಿತ ಸಮಗ್ರ ಶಿಕ್ಷಣ ಕರ್ನಾಟಕ ಯೋಜನೆಯಡಿಯ ಕ್ಷೇತ್ರದ ಪ್ರಾಥಮಿಕ ಶಾಲಾ ಶಿಕ್ಷಕರಿಗೆ ತರಬೇತಿಗಳನ್ನು ನೀಡಲಾಗುತ್ತದೆ. ಈ ಕಛೇರಿಗಳಿಗೆ ಪ್ರತ್ಯೇಕವಾಗಿ ಬೋಧಕೇತರ ನೌಕರರ ಹುದ್ದೆಗಳು ಮಂಜೂರಾಗಿರುವುದಿಲ್ಲ.<br>ಸರ್ಕಾರಿ ಪ್ರೌಢ ಶಾಲೆ/ಸರ್ಕಾರಿ ಪದವಿ ಪೂರ್ವ ಕಾಲೇಜು(ಪ್ರೌಢ ಶಾಲಾ ವಿಭಾಗ)ಗಳಲ್ಲಿ ಹೆಚ್ಚುವರಿ ಇರುವ ಪ್ರಥಮ ದರ್ಜೆ ಸಹಾಯಕರ ಹಾಗೂ ದ್ವಿತೀಯ ದರ್ಜೆ ಸಹಾಯಕರ ಹುದ್ದೆಗಳನ್ನು ಗುರುತಿಸಿ ಅಗತ್ಯವಿರುವ ಶಾಲೆಗಳಿಗೆ ಸ್ಥಳಾಂತರಿಸಲು ಮರು ಹೊಂದಾಣಿಕೆ ಮಾಡುವ ಕುರಿತಂತೆ ಪ್ರಸ್ತಾವನೆಯು ಪರಿಶೀಲನೆಯಲ್ಲಿದೆ.<br>ಮುಂದುವರೆದು, ಬೋಧಕೇತರ ಹುದ್ದೆಗಳಾದ ಪ್ರಥಮ ದರ್ಜೆ ಸಹಾಯಕ / ದ್ವಿತೀಯ ದರ್ಜೆ ಸಹಾಯಕರ ಮತ್ತು ಗ್ರೂಪ್ 'ಡಿ' ಹುದ್ದೆಗಳನ್ನು ಅನುಕಂಪದ ಆಧಾರದ ಮೇರೆಗೆ ನೇಮಕಾತಿ ಮೂಲಕ ಭರ್ತಿ ಮಾಡಲಾಗುತ್ತಿದೆ. |
| ಇ) | ಹಲವು ಸರ್ಕಾರಿ ಪ್ರೌಢ ಶಾಲೆಗಳಲ್ಲಿ ಕಛೇರಿ ಸಹಾಯಕರ (ಪ್ರ.ದ.ಸ/ದ್ವಿ.ದ.ಸ) ಮತ್ತು ಡಿ ಗುಂಪಿನ ಹುದ್ದೆಗಳು ಇಲ್ಲದಿರುವುದರಿಂದ ತೊಂದರೆಯಾಗುತ್ತಿದ್ದು, ಈ ಸಂಬಂಧ ಕೈಗೊಂಡಿರುವ ಕ್ರಮಗಳೇನು? | |

**ಸಂಖ್ಯೆ: ಇಡಿ 25 ಎಸ್‌ಟಿಬಿ 2021**

(ಎಸ್.ಸುರೇಶ್‌ಕುಮಾರ್)
ಪ್ರಾಥಮಿಕ ಮತ್ತು ಪ್ರೌಢ ಶಿಕ್ಷಣ ಹಾಗೂ
ಸಕಾಲ ಸಚಿವರು

# ಕರ್ನಾಟಕ ವಿಧಾನ ಸಭೆ

ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 2588

ಸದಸ್ಯರ ಹೆಸರು : ಶ್ರೀ ಗುತ್ತೇದಾರ್ ಸುಭಾಷ್‌ರುಕ್ಮಯ್ಯ (ಆಳಂದ)

ಉತ್ತರಿಸುವ ದಿನಾಂಕ : 18.03.2021

ಉತ್ತರಿಸುವ ಸಚಿವರು : ಮಾನ್ಯ ಉಪ ಮುಖ್ಯಮಂತ್ರಿಗಳು ಹಾಗೂ ಉನ್ನತ ಶಿಕ್ಷಣ, ಮಾಹಿತಿ ತಂತ್ರಜ್ಞಾನ, ಜೈವಿಕ ತಂತ್ರಜ್ಞಾನ ಹಾಗೂ ವಿಜ್ಞಾನ ಮತ್ತು ತಂತ್ರಜ್ಞಾನ, ಕೌಶಲ್ಯಾಭಿವೃದ್ಧಿ ಉದ್ಯಮಶೀಲತೆ ಮತ್ತು ಜೀವನೋಪಾಯ ಸಚಿವರು

| ಕ್ರ. ಸಂ | ಪ್ರಶ್ನೆ | ಉತ್ತರ |
|---|---|---|
| (ಅ) | ಆಳಂದ ತಾಲ್ಲೂಕಿನ ಆಳಂದ ಪಟ್ಟಣದ ಸರ್ವೆ ನಂ 646/17/1ರಲ್ಲಿ ಸರ್ಕಾರಿ ಪಾಲಿಟೆಕ್ನಿಕ್ ಕಟ್ಟಡ ನಿರ್ಮಾಣಕ್ಕೆ 4 ಎಕರೆ ಜಮೀನು ಮಂಜೂರಾಗಿದ್ದು, ಕಟ್ಟಡ ನಿರ್ಮಾಣಕ್ಕೆ ಇದುವರೆಗೂ ಅನುದಾನ ಮಂಜೂರಾಗದೇ ಇರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ: | ಬಂದಿರುತ್ತದೆ. |
| (ಆ) | ಬಂದಿದ್ದಲ್ಲಿ, ಯಾವ ಕಾಲಮಿತಿಯೊಳಗೆ ಅನುದಾನ ಮಂಜೂರು ಮಾಡಲಾಗುವುದು? (ಸಂಪೂರ್ಣ ವಿವರ ನೀಡುವುದು) | ದಿನಾಂಕ: 26/12/2017ರಲ್ಲಿ ಸರ್ಕಾರಿ ಪಾಲಿಟೆಕ್ನಿಕ್ ಕನಕಗಿರಿ ಸಂಸ್ಥೆಯ ಮುಖ್ಯಕಟ್ಟಡ ನಿರ್ಮಾಣ ಕಾಮಗಾರಿಯನ್ನು ಅಂದಾಜು ಮೊತ್ತ ರೂ.800.00 ಲಕ್ಷಗಳ ವೆಚ್ಚದಲ್ಲಿ ಅನುಷ್ಠಾನಗೊಳಸಲು ನಿರ್ಮಾಣ ಸಂಸ್ಥೆಯನ್ನು ನಿಗದಿಪಡಿಸಿ ಆದೇಶಿಸಲಾಗಿರುತ್ತದೆ.<br><br>ಜಿಲ್ಲಾಧಿಕಾರಿಗಳು, ಕಲಬುರಗಿ ಜಿಲ್ಲೆ, ಕಲಬುರಗಿ ಇವರ ಕಛೇರಿಯ ದಿನಾಂಕ:18/02/2020ರ ಆದೇಶದಲ್ಲಿ ಕಲಬುರಗಿ ಜಿಲ್ಲೆ, ಆಳಂದ ತಾಲ್ಲೂಕಿನ ಆಳಂದ ಗ್ರಾಮದ ಸ.ನಂ.646/17/1ರಲ್ಲಿ 04-00 ಎಕರೆ ಜಮೀನನ್ನು ಸರ್ಕಾರಿ ಪಾಲಿಟೆಕ್ನಿಕ್, ಆಳಂದ ಸಂಸ್ಥೆಗೆ ಮಂಜೂರು ಮಾಡಿ ಆದೇಶಿಸಿರುತ್ತಾರೆ. ಸದರಿ ಜಮೀನಿನ ದಾಖಲೆಗಳ ನಮೂದು ಪ್ರಕ್ರಿಯೆ ಪೂರ್ಣಗೊಂಡಿದ್ದು, ಪ್ರಚಲಿತ ನಿಯಮಗಳು ಹಾಗೂ ಅನುದಾನದ ಲಭ್ಯತೆಯನುಸಾರ ಕೈಗೊಳ್ಳಲಾಗುವುದು. |

ಕಡತ ಸಂಖ್ಯೆ: ಇಡಿ 32 ಹೆಚ್‌ಪಿಟಿ 2021

(ಡಾ: ಅಶ್ವಥ್ ನಾರಾಯಣ ಸಿ.ಎನ್)
ಉಪ ಮುಖ್ಯಮಂತ್ರಿಗಳು ಹಾಗೂ ಉನ್ನತ ಶಿಕ್ಷಣ, ಮಾಹಿತಿ ತಂತ್ರಜ್ಞಾನ, ಜೈವಿಕ ತಂತ್ರಜ್ಞಾನ ಹಾಗೂ ವಿಜ್ಞಾನ ಮತ್ತು ತಂತ್ರಜ್ಞಾನ, ಕೌಶಲ್ಯಾಭಿವೃದ್ಧಿ ಉದ್ಯಮಶೀಲತೆ ಮತ್ತು ಜೀವನೋಪಾಯ ಸಚಿವರು

# ಕರ್ನಾಟಕ ವಿಧಾನ ಸಭೆ

ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 2786

ಸದಸ್ಯರ ಹೆಸರು : ಶ್ರೀ ಶಿವಾನಂದ ಎಸ್.ಪಾಟೀಲ್ (ಬಸವನಬಾಗೇವಾಡಿ)

ಉತ್ತರಿಸುವ ದಿನಾಂಕ : 18.03.2021

ಉತ್ತರಿಸುವ ಸಚಿವರು : ಮಾನ್ಯ ಉಪ ಮುಖ್ಯಮಂತ್ರಿಗಳು ಹಾಗೂ ಉನ್ನತ ಶಿಕ್ಷಣ. ಮಾಹಿತಿ ತಂತ್ರಜ್ಞಾನ, ಜೈವಿಕ ತಂತ್ರಜ್ಞಾನ ಹಾಗೂ ವಿಜ್ಞಾನ ಮತ್ತು ತಂತ್ರಜ್ಞಾನ, ಕೌಶಲ್ಯಾಭಿವೃದ್ಧಿ ಉದ್ಯಮಶೀಲತೆ ಮತ್ತು ಜೀವನೋಪಾಯ ಸಚಿವರು

| ಕ್ರ. ಸಂ | ಪ್ರಶ್ನೆ | ಉತ್ತರ |
|---|---|---|
| (ಅ) | ಬಸವನ ಬಾಗೇವಾಡಿಯ ಹೊಸ ಸರ್ಕಾರಿ ಪಾಲಿಟೆಕ್ನಿಕ್ ಗೆ ಮೂಲಭೂತ ಸೌಕರ್ಯಗಳ ಕೊರತೆ ಇರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; | ಬಂದಿದೆ |
| (ಆ) | ಹಾಗಿದ್ದಲ್ಲಿ, ಯಾವಯಾವ ಮೂಲಭೂತ ಸೌಕರ್ಯಗಳ ಕೊರತೆ ಇರುತ್ತದೆ; | ಸರ್ಕಾರಿ ಪಾಲಿಟೆಕ್ನಿಕ್, ಬಸವನ ಬಾಗೇವಾಡಿ ಸಂಸ್ಥೆಯನ್ನು ಪ್ರಾರಂಭಿಸಲು ಅಗತ್ಯವಿರುವ ಪೀಠೋಪಕರಣಗಳು, ಯಂತ್ರೋಪಕರಣಗಳು, ಪುಸ್ತಕಗಳುಹಾಗೂ ಇನ್ನಿತರೆ ಮೂಲಭೂತ ಸೌಕರ್ಯಗಳ ಬೇಡಿಕೆ ಇರುತ್ತದೆ. |
| ಇ) | ಮೂಲಭೂತ ಸೌಕರ್ಯಗಳನ್ನು ಕಲ್ಪಿಸದೇ ಇರುವುದಕ್ಕೆ ಕಾರಣಗಳೇನು; | ಸರ್ಕಾರಿ ಪಾಲಿಟೆಕ್ನಿಕ್ -ಬಸವನಬಾಗೇವಾಡಿ ಸಂಸ್ಥೆಯನ್ನು 2020-21 ನೇ ಸಾಲಿನಲ್ಲಿ ಕಾರ್ಯಾರಂಭ ಮಾಡಲು ಎಐಸಿಟಿಇ ಅನುಮೋದನೆನೀಡಿದ್ದು, ಅಗತ್ಯವಿರುವ ಮೂಲಭೂತ ಸೌಕರ್ಯಗಳನ್ನು ಅನುದಾನದ ಲಭ್ಯತೆಯನ್ವಯ ಒದಗಿಸಲಾಗುತ್ತಿದೆ. . |
| ಈ) | ಹಾಗಿದ್ದಲ್ಲಿ, ಮೂಲಭೂತ ಸೌಕರ್ಯಗಳನ್ನು ಒದಗಿಸಲು ಇದುವರೆಗೂ ಸರ್ಕಾರವು ಕೈಗೊಂಡ ಕ್ರಮಗಳೇನು? | ರಾಜ್ಯದಲ್ಲಿ ಪ್ರಸ್ತುತ 85 ಸರ್ಕಾರಿ ಪಾಲಿಟೆಕ್ನಿಕ್‌ಗಳು ಕಾರ್ಯನಿರ್ವಹಿಸುತ್ತಿದ್ದು ಈ ಎಲ್ಲಾ ಸಂಸ್ಥೆಗಳಿಗೆ ಎಐಸಿಟಿಇ ನಿಯಮಾನುಸಾರ ಒದಗಿಸಬೇಕಾಗಿದ್ದ ಮೂಲಭೂತ ಸೌಕರ್ಯಗಳ ಕೊರತೆಯನ್ನು ತಿಳಿಯಲು ಗ್ಯಾಪ್ ಅನಾಲಿಸಿಸ್ ಮಾಡಲಾಗಿದ್ದು ಬಾಕಿ ಇರುವ ಮೂಲಭೂತ ಸೌಕರ್ಯಗಳನ್ನು ಹಂತಹಂತವಾಗಿ ಅನುದಾನದ ಲಭ್ಯತೆಯನುಸಾರ ಒದಗಿಸಲು ಕ್ರಮ ಜರುಗಿಸಲಾಗುತ್ತಿದೆ. |

ಕಡತ ಸಂಖ್ಯೆ: ಇಡಿ 35 ಹೆಚ್‌ಪಿಟಿ 2021

(ಡಾ: ಅಶ್ವಥ್ ನಾರಾಯಣ ಸಿ.ಎನ್)
ಉಪ ಮುಖ್ಯಮಂತ್ರಿಗಳು ಹಾಗೂ ಉನ್ನತ ಶಿಕ್ಷಣ.
ಮಾಹಿತಿ ತಂತ್ರಜ್ಞಾನ, ಜೈವಿಕ ತಂತ್ರಜ್ಞಾನ ಹಾಗೂ ವಿಜ್ಞಾನ ಮತ್ತು
ತಂತ್ರಜ್ಞಾನ, ಕೌಶಲ್ಯಾಭಿವೃದ್ಧಿ ಉದ್ಯಮಶೀಲತೆ ಮತ್ತು
ಜೀವನೋಪಾಯ ಸಚಿವರು

# ಕರ್ನಾಟಕ ವಿಧಾನ ಸಭೆ

ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 3003

ಸದಸ್ಯರ ಹೆಸರು : ಶ್ರೀ ಸುಬ್ಬಾರೆಡ್ಡಿ ಎಸ್.ಎನ್. (ಬಾಗೇಪಲ್ಲಿ)

ಉತ್ತರಿಸುವ ದಿನಾಂಕ : 18.03.2021

ಉತ್ತರಿಸುವ ಸಚಿವರು : ಮಾನ್ಯ ಉಪ ಮುಖ್ಯಮಂತ್ರಿಗಳು ಹಾಗೂ ಉನ್ನತ ಶಿಕ್ಷಣ, ಮಾಹಿತಿ ತಂತ್ರಜ್ಞಾನ, ಜೈವಿಕ ತಂತ್ರಜ್ಞಾನ ಹಾಗೂ ವಿಜ್ಞಾನ ಮತ್ತು ತಂತ್ರಜ್ಞಾನ, ಕೌಶಲ್ಯಾಭಿವೃದ್ಧಿ ಉದ್ಯಮಶೀಲತೆ ಮತ್ತು ಜೀವನೋಪಾಯ ಸಚಿವರು

| ಕ್ರ. ಸಂ | ಪ್ರಶ್ನೆ | ಉತ್ತರ |
|---|---|---|
| ಅ) | ರಾಜ್ಯದಲ್ಲಿ 2019-20 ಹಾಗೂ 2020-21ನೇ ಸಾಲಿನಲ್ಲಿ ಪ್ರಥಮ ದರ್ಜೆ ಕಾಲೇಜುಗಳ ಅಭಿವೃದ್ಧಿಗಾಗಿ ಎಷ್ಟು ಅನುದಾನ ಒದಗಿಸಲಾಗಿದೆ; (ಕಾಲೇಜುವಾರು ವಿವರ ನೀಡುವುದು) | 2019-20 ನೇ ಸಾಲಿನಲ್ಲಿ ಕಾಲೇಜು ಶಿಕ್ಷಣ ಇಲಾಖೆಯಡಿ ಸರ್ಕಾರಿ ಪ್ರಥಮ ದರ್ಜೆ ಕಾಲೇಜುಗಳ ಅಭಿವೃದ್ಧಿಗಾಗಿ ಒಟ್ಟು ರೂ.120.00ಕೋಟಿಗಳ ಕ್ರಿಯಾ ಯೋಜನೆ ಸರ್ಕಾರದಿಂದ ಅನುಮೋದನೆಯಾಗಿದ್ದು, ಕೋವಿಡ್ ನಿಂದಾಗಿ ಸದರಿ ಕಾಮಗಾರಿಗಳನ್ನು ಕೈಗೊಂಡಿರುವುದಿಲ್ಲ.<br>2020-21ನೇ ಸಾಲಿನಲ್ಲಿ ಕಾಲೇಜು ಶಿಕ್ಷಣ ಇಲಾಖೆಯಡಿ ಸರ್ಕಾರಿ ಪ್ರಥಮ ದರ್ಜೆ ಕಾಲೇಜುಗಳ ಅಭಿವೃದ್ಧಿಗಾಗಿ ಒಟ್ಟು ರೂ.86.00 ಕೋಟಿಗಳ ಕ್ರಿಯಾ ಯೋಜನೆಗೆ ಸರ್ಕಾರದಿಂದ ಅನುಮೋದನೆ ದೊರೆತಿರುತ್ತದೆ. ವಿವರಗಳು ಅನುಬಂಧ ದಲ್ಲಿ ಲಗತ್ತಿಸಲಾಗಿದೆ. |
| ಆ) | ಈ ಅನುದಾನವನ್ನು ಯಾವ ಏಜೆನ್ಸಿಯ ಮುಖಾಂತರ ಅನುಷ್ಠಾನಗೊಳಿಸಲಾಗಿದೆ; | 2020-21ನೇ ಸಾಲಿನ ಕಾಮಗಾರಿಗಳಿಗೆ ಮ್ಯಾರೈಟ್ಸ್ ಸಂಸ್ಥೆಯವರನ್ನು ಯೋಜನಾ ನಿರ್ವಹಣಾ ಸಂಸ್ಥೆಯೆಂದು ನಿಗದಿಪಡಿಸಲಾಗಿರುತ್ತದೆ. |
| ಇ) | ಈ ಎಲ್ಲಾ ಕಾಮಗಾರಿಗಳು ಯಾವ ಹಂತದಲ್ಲಿವೆ; | ರೂ.86.00ಕೋಟಿಗಳ ಕಾಮಗಾರಿಗಳ ಅಂದಾಜು ಪಟ್ಟಿ, ನಕ್ಷೆ, ಅಗತ್ಯ ವಿವರಗಳನ್ನು ಪರಿಶೀಲಿಸಿ, ಆಡಳಿತಾತ್ಮಕ ಅನುಮೋದನೆ ನೀಡಿ ಕಟ್ಟಡ ನಿರ್ಮಾಣಕ್ಕೆ ಕ್ರಮಕೈಗೊಳ್ಳಲಾಗುವುದು. |
| ಈ) | ಬಾಗೇಪಲ್ಲಿ ವಿಧಾನಸಭಾ ಕ್ಷೇತ್ರ ವ್ಯಾಪ್ತಿಯಲ್ಲಿ ಇದುವರೆವಿಗೂ ಕಾಮಗಾರಿಗಳನ್ನು ಪ್ರಾರಂಭಿಸದಿರಲು ಕಾರಣಗಳೇನು? | ಬಾಗೇಪಲ್ಲಿ ವಿಧಾನಸಭಾ ಕ್ಷೇತ್ರ ವ್ಯಾಪ್ತಿಯ ಬಾಗೇಪಲ್ಲಿ ಸರ್ಕಾರಿ ಪ್ರಥಮ ದರ್ಜೆ ಕಾಲೇಜಿಗೆ 2012-13ರಲ್ಲಿ ರೂ.77.54ಲಕ್ಷಗಳ ಮೊತ್ತದ ಹೆಚ್ಚುವರಿ ತರಗತಿ ಕೊಠಡಿ ಕಾಮಗಾರಿಯನ್ನು ನೀಡಿದ್ದು, ಕಾಮಗಾರಿ ಪೂರ್ಣಗೊಳಿಸಿ ಹಸ್ತಾಂತರಿಸಲಾಗಿದೆ. |

| | | |
|---|---|---|
| | | 2014-15ನೇ ಸಾಲಿನಲ್ಲಿ ರೂ.58.00ಲಕ್ಷಗಳ ಮೊತ್ತದ ಹೆಚ್ಚುವರಿ ತರಗತಿ ಕೊಠಡಿ, ಮಹಿಳಾ ವಿಶ್ರಾಂತಿ ಕೊಠಡಿ ಹಾಗೂ ಶೌಚಾಲಯಗಳ ಕಾಮಗಾರಿಗಳನ್ನು ಪೂರ್ಣಗೊಳಿಸಿ ಹಸ್ತಾಂತರಿಸಲಾಗಿರುತ್ತದೆ.<br>2016-17ನೇ ಸಾಲಿನ ವಿಶೇಷ ಅಭಿವೃದ್ಧಿ ಯೋಜನೆಯಡಿ ರೂ.100.00ಲಕ್ಷಗಳ ಹೆಚ್ಚುವರಿ ತರಗತಿ ಕೊಠಡಿ ಕಾಮಗಾರಿಯನ್ನು ಪೂರ್ಣಗೊಳಿಸಿ ಹಸ್ತಾಂತರಿಸಲಾಗಿರುತ್ತದೆ. |

ಕಡತ ಸಂಖ್ಯೆ: ಇಡಿ 43 ಹೆಚ್‌ಪಿಸಿ 2021

(ಡಾ: ಅಶ್ವಥ್ ನಾರಾಯಣ ಸಿ.ಎನ್)

ಉಪ ಮುಖ್ಯಮಂತ್ರಿಗಳು ಹಾಗೂ ಉನ್ನತ ಶಿಕ್ಷಣ, ಮಾಹಿತಿ ತಂತ್ರಜ್ಞಾನ, ಜೈವಿಕ ತಂತ್ರಜ್ಞಾನ ಹಾಗೂ ವಿಜ್ಞಾನ ಮತ್ತು ತಂತ್ರಜ್ಞಾನ, ಕೌಶಲ್ಯಾಭಿವೃದ್ಧಿ ಉದ್ಯಮಶೀಲತೆ ಮತ್ತು ಜೀವನೋಪಾಯ ಸಚಿವರು

# ಕರ್ನಾಟಕ ವಿಧಾನ ಸಭೆ

ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 3005

ಸದಸ್ಯರ ಹೆಸರು : ಶ್ರೀ ರೇವಣ್ಣ ಹೆಚ್.ಡಿ., (ಹೊಳೆನರಸೀಪುರ)

ಉತ್ತರಿಸುವ ದಿನಾಂಕ : 18.03.2021

ಉತ್ತರಿಸುವ ಸಚಿವರು : ಮಾನ್ಯ ಉಪ ಮುಖ್ಯಮಂತ್ರಿಗಳು ಹಾಗೂ ಉನ್ನತ ಶಿಕ್ಷಣ, ಮಾಹಿತಿ ತಂತ್ರಜ್ಞಾನ, ಜೈವಿಕ ತಂತ್ರಜ್ಞಾನ ಹಾಗೂ ವಿಜ್ಞಾನ ಮತ್ತು ತಂತ್ರಜ್ಞಾನ, ಕೌಶಲ್ಯಾಭಿವೃದ್ಧಿ ಉದ್ಯಮಶೀಲತೆ ಮತ್ತು ಜೀವನೋಪಾಯ ಸಚಿವರು

| ಕ್ರ. ಸಂ | ಪ್ರಶ್ನೆ | ಉತ್ತರ |
|---|---|---|
| (ಅ) | ಹಾಸನ ಜಿಲ್ಲೆ, ಶಾಂತಿಗ್ರಾಮ ಹೋಬಳಿ ಮೊಸಳೆಹೊಸಳ್ಳಿ ಗ್ರಾಮದ ಸರ್ಕಾರಿ ಇಂಜಿನಿಯರಿಂಗ್ ಕಾಲೇಜಿಗೆ ಎ.ಐ.ಸಿ.ಟಿ.ಇ ನಿಯಮಾನುಸಾರ ಪ್ರಕಾರ ಅಗತ್ಯವಾಗಿರುವ ಮೂಲಭೂತ ಸೌಕರ್ಯಗಳಾದ ಕಂಪ್ಯೂಟರ್ ಲ್ಯಾಬ್ ಹಾಗೂ ಕಂಪ್ಯೂಟರ್ ಪ್ರಿಂಟರ್, ಕಂಪ್ಯೂಟರ್ ಟೇಬಲ್‌ಗಳು ಹಾಗೂ ಇನ್ನಿತರೆ ಸಾಮಾಗ್ರಿಗಳು, ವಿದ್ಯಾರ್ಥಿಗಳಿಗೆ ಕಳಿತುಕೊಳ್ಳಲು ಬೇಕಾಗುವ ಡೆಸ್ಕ್‌ಗಳು, ಗ್ರಂಥಾಲಯದಲ್ಲಿ ಅಗತ್ಯವಿರುವ ಪುಸ್ತಕಗಳು ಹಾಗೂ ಇನ್ನಿತರೆ ಮೂಲಭೂತ ಸೌಕರ್ಯಗಳು ಲಭ್ಯವಿಲ್ಲದೆ ಗ್ರಾಮೀಣ ಪ್ರದೇಶದಿಂದ ಬಂದ ಪ್ರತಿಭಾವಂತ ವಿದ್ಯಾರ್ಥಿಗಳಿಗೆ ಕಳೆದ ಒಂದು ವರ್ಷದಿಂದ ಸೌಲಭ್ಯಗಳನ್ನು ಒದಗಿಸದೇ ಇರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; | ಬಂದಿದೆ. |
| (ಆ) | ಬಂದಿದ್ದಲ್ಲಿ ಕೂಡಲೇ ಹಾಸನ ಜಿಲ್ಲೆಯ ಮೊಸಳೆಹೊಸಳ್ಳಿ ಗ್ರಾಮದಲ್ಲಿ ಸರ್ಕಾರಿ ಇಂಜಿನಿಯರಿಂಗ್ ಕಾಲೇಜಿಗೆ ವಿದ್ಯಾರ್ಥಿಗಳ ಹಿತದೃಷ್ಟಿಯಿಂದ ಪ್ರಸ್ತಾಪಿತ 'ಅಗತ್ಯ ಮೂಲಭೂತ ಸೌಕರ್ಯಗಳನ್ನು ಒದಗಿಸಲು ಅವಶ್ಯಕತೆ ಇರುವ ಅನುದಾನ ಬಿಡುಗಡೆ ಮಾಡಲು ಸರ್ಕಾರ ಕೈಗೊಂಡ ಕ್ರಮಗಳಾವುವು (ಸಂಪೂರ್ಣ ಮಾಹಿತಿ ನೀಡುವುದು); | ಸರ್ಕಾರಿ ಇಂಜಿನಿಯರಿಂಗ್ ಕಾಲೇಜು, ಮೊಸಳೆಹೊಸಹ ಸಂಸ್ಥೆಗೆ ಅಗತ್ಯವಿರುವ ಡೆಸ್ಕ್‌ಗಳು, ಕಂಪ್ಯೂಟರ್ ಹಾಗೂ ಇತ ಸಾಮಾಗ್ರಿಗಳನ್ನು ಹಾಗೂ ಗ್ರಂಥಾಲಯಕ್ಕೆ ಪುಸ್ತಕಗಳನ ಒದಗಿಸುವ ಸಂಬಂಧ ಕಳೆದ 02 ವರ್ಷಗಳಲ್ಲಿ ಈ ಕೆಳಕಂಡಂ ಅನುದಾನವನ್ನು ಒದಗಿಸಲಾಗಿದೆ<br><br>ವರ್ಷ / ಯಂತ್ರೋಪಕರಣ, ಪುಸ್ತಕ ಹಾಗೂ ಪೀಠೋಪಕರಣ ಖರೀದಿಸಲು ಒದಗಿಸಲಾದ ಅನುದಾನದ ವಿವರ<br>2019-20 : 48.67 ಲಕ್ಷ<br>2018-19 : 78.77 ಲಕ್ಷ<br>ಒಟ್ಟು : 127.44 ಲಕ್ಷ |
| ಇ) | ಹಾಸನ ಜಿಲ್ಲೆಯ ಮೊಸಳೆಹೊಸಳ್ಳಿ ಗ್ರಾಮದ | ಹಾಸನ ಜಿಲ್ಲೆ, ಹಾಸನ ತಾಲ್ಲೂಕು ಮೊಸಳೆ ಹೊಸಹಳ್ಳಿ ಗ್ರಾಮದ |

|  | ಸರ್ಕಾರಿ ಇಂಜಿನಿಯರಿಂಗ್ ಕಾಲೇಜ್‌ನ್ನು 2019-20ನೇ ಸಾಲಿನಿಂದ ಪ್ರಾರಂಭಿಸಿದ್ದು, ಅಗತ್ಯ ಮೂಲಭೂತ ಸೌಕರ್ಯ ಹಾಗೂ ಕಟ್ಟಡವನ್ನು ನಿರ್ಮಾಣ ಮಾಡಿ ಇಂಜಿನಿಯರಿಂಗ್ ಕಾಲೇಜಿಗೆ ವಹಿಸಿಕೊಡಲು ಈಗಾಗಲೇ ಪ್ರಸ್ತಾವನೆ ಸಲ್ಲಿಸಿದ್ದು, ಸದರಿ ಪ್ರಸ್ತಾವನೆಯು ಈಗ ಯಾವ ಹಂತದಲ್ಲಿದೆ? (ಸಂಪೂರ್ಣ ಮಾಹಿತಿ ನೀಡುವುದು) | ಹೊಸದಾಗಿ ನಿರ್ಮಿಸಲಾಗುತ್ತಿರುವ ಸರ್ಕಾರಿ ಇಂಜಿನಿಯರಿಂಗ್ ಕಾಲೇಜಿನ ಕಟ್ಟಡ ನಿರ್ಮಾಣ ಕಾಮಗಾರಿಯು ಅಂದಾಜು ಮೊತ್ತ ರೂ 5800.00 ಲಕ್ಷಗಳಿಗೆ ಸರ್ಕಾರಿ ಆದೇಶ ಸಂಖ್ಯೆ: ಇಡಿ 31 ಹೆಚ್.ಪಿ.ಟಿ 2018 ಬೆಂಗಳೂರು, ದಿನಾಂಕ: 23.11.2018ರಂತೆ ಲೆಕ್ಕ ಶೀರ್ಷಿಕೆ :4202-01-203-1-01-132 ತಾಂತ್ರಿಕ ಶಿಕ್ಷಣ ಅಡಿಯಲ್ಲಿ ಆಡಳಿತಾತ್ಮಕ ಮಂಜೂರಾತಿಯಾಗಿರುತ್ತದೆ. ಕಾಮಗಾರಿಯ ಅಂದಾಜು ಪಟ್ಟಿಗೆ ಲೋಕೋಪಯೋಗಿ ಇಲಾಖೆಯ ಮುಖ್ಯ ಇಂಜಿನಿಯರ್, ಸಂಪರ್ಕ ಮತ್ತು ಕಟ್ಟಡ(ದ) ಬೆಂಗಳೂರು ರವರಿಂದ ತಾಂತ್ರಿಕ ಮಂಜೂರಾತಿಗೊಂಡು ಈ ಕಾಮಗಾರಿಯನ್ನು ಗುತ್ತಿಗೆ ಮೊತ್ತಕ್ಕೆ ನಿರ್ವಹಿಸಲು ವಹಿಸಿಕೊಡಲಾಗಿರುತ್ತದೆ. ಸದರಿ ಕಾಮಗಾರಿಗೆ ಈವರೆಗೂ ರೂ.3074.00 ಲಕ್ಷಗಳಷ್ಟು ಅನುದಾನವನ್ನು ಬಿಡುಗಡೆ ಮಾಡಲಾಗಿದ್ದು ಲೋಕೋಪಯೋಗಿ ಇಲಾಖೆಯ ವರದಿಯಂತೆ ಪ್ರಸ್ತುತ ಕಾಮಗಾರಿಯು ಶೇ.70 ರಷ್ಟು ಭೌತಿಕ ಪ್ರಗತಿ ಹೊಂದಿರುತ್ತದೆ. |

ಕಡತ ಸಂಖ್ಯೆ: ಇಡಿ 34 ಹೆಚ್‌ಪಿಟಿ 2021

(ಡಾ: ಅಶ್ವಥ್ ನಾರಾಯಣ ಸಿ.ಎನ್)
ಉಪ ಮುಖ್ಯಮಂತ್ರಿಗಳು ಹಾಗೂ ಉನ್ನತ ಶಿಕ್ಷಣ,
ಮಾಹಿತಿ ತಂತ್ರಜ್ಞಾನ, ಜೈವಿಕ ತಂತ್ರಜ್ಞಾನ ಹಾಗೂ ವಿಜ್ಞಾನ ಮತ್ತು
ತಂತ್ರಜ್ಞಾನ, ಕೌಶಲ್ಯಾಭಿವೃದ್ಧಿ ಉದ್ಯಮಶೀಲತೆ ಮತ್ತು
ಜೀವನೋಪಾಯ ಸಚಿವರು

# ಕರ್ನಾಟಕ ವಿಧಾನ ಸಭೆ

| | |
|---|---|
| ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ | 1571 |
| ಸದಸ್ಯರ ಹೆಸರು | ಶ್ರೀ ಬಸವನಗೌಡ ದದ್ದಲ (ರಾಯಚೂರು ಗ್ರಾಮಾಂತರ) |
| ಉತ್ತರಿಸುವ ದಿನಾಂಕ | 18/03/2021. |
| ಉತ್ತರಿಸುವ ಸಚಿವರು | ಉಪ ಮುಖ್ಯಮಂತ್ರಿಗಳು (ಉನ್ನತ ಶಿಕ್ಷಣ, ಮಾಹಿತಿ ತಂತ್ರಜ್ಞಾನ, ಜೈವಿಕ ತಂತ್ರಜ್ಞಾನ ಹಾಗೂ ವಿಜ್ಞಾನ ಮತ್ತು ತಂತ್ರಜ್ಞಾನ ಮತ್ತು ಕೌಶಲ್ಯಾಭಿವೃದ್ಧಿ, ಉದ್ಯಮಶೀಲತೆ ಮತ್ತು ಜೀವನೋಪಾಯ) |

| ಕ್ರ.ಸಂ. | ಪ್ರಶ್ನೆ | ಉತ್ತರ |
|---|---|---|
| ಅ) | ಹೊಸದಾಗಿ ಪ್ರಾರಂಭಿಸಿರುವ ರಾಯಚೂರು ವಿಶ್ವವಿದ್ಯಾಲಯಕ್ಕೆ ಮೂಲಭೂತ ಸೌಕರ್ಯ ಒದಗಿಸಲು 2020–21ನೇ ಸಾಲಿನಲ್ಲಿ ಎಷ್ಟು ಅನುದಾನ ಹಂಚಿಕೆ ಮಾಡಲಾಗಿದೆ; | 2020–21ನೇ ಸಾಲಿನ ಆಯ-ವ್ಯಯದಲ್ಲಿ ರಾಯಚೂರು ವಿಶ್ವವಿದ್ಯಾಲಯಕ್ಕೆ ಯಾವುದೇ ಅನುದಾನ ಹಂಚಿಕೆಯಾಗಿರುವುದಿಲ್ಲ.<br><br>ಆದರೆ, ರಾಯಚೂರು ವಿಶ್ವವಿದ್ಯಾಲಯ ಸ್ಥಾಪನೆಯ ಉದ್ದೇಶಕ್ಕಾಗಿ ರೂ.220 ಲಕ್ಷಗಳನ್ನು ಸರ್ಕಾರದ ಆದೇಶ ಸಂಖ್ಯೆ: ಇಡಿ 236 ಯುಜಿವಿ 2016 (ಭಾಗ–2), ದಿನಾಂಕ 6/3/2019 ಅನ್ವಯ ಗುಲ್ಬರ್ಗಾ ವಿಶ್ವವಿದ್ಯಾಲಯದ ಮೂಲಕ ಬಿಡುಗಡೆಗೊಳಿಸಲಾಗಿದೆ. ಮುಂದುವರೆದು ಗುಲ್ಬರ್ಗಾ ವಿಶ್ವವಿದ್ಯಾಲಯವು ರೂ.200 ಲಕ್ಷ 2021ರ ಜನವರಿ ಮಾಹೆಯಲ್ಲಿ ರಾಯಚೂರು ವಿಶ್ವವಿದ್ಯಾಲಯಕ್ಕೆ ವರ್ಗಾವಣೆ ಮಾಡಿರುತ್ತದೆ. |
| ಆ) | ಹಂಚಿಕೆ ಮಾಡಲಾದ ಅನುದಾನದಲ್ಲಿ ಯಾವ ಯಾವ ಅಭಿವೃದ್ಧಿ ಕಾಮಗಾರಿಗಳನ್ನು ಕೈಗೆತ್ತಿಕೊಳ್ಳಲಾಗಿದೆ (ಸಂಪೂರ್ಣ ವಿವರ ನೀಡುವುದು); | ಇದರಲ್ಲಿ ರಾಯಚೂರು ವಿಶ್ವವಿದ್ಯಾಲಯದ ದಿನನಿತ್ಯದ ವೆಚ್ಚವನ್ನ ಭರಿಸಲಾಗುತ್ತಿರುವುದರಿಂದ, ಅಭಿವೃದ್ಧಿ ಕಾಮಗಾರಿಗಳನ್ನು ಕೈಗೆತ್ತಿಕೊಳ್ಳಲು ಸಾಧ್ಯವಾಗಿರುವುದಿಲ್ಲ. |

| ಇ) | ಸದರಿ ವಿಶ್ವವಿದ್ಯಾಲಯಕ್ಕೆ ಹೆಚ್ಚಿನ ಅನುದಾನ ನೀಡುವುದರ ಮೂಲಕ ಅಗತ್ಯ ಮೂಲಭೂತ ಸೌಕರ್ಯ ಒದಗಿಸಲು ಸರ್ಕಾರವು ಯಾವ ಕ್ರಮ ಕೈಗೊಳ್ಳಲಿದೆ (ಸಂಪೂರ್ಣ ವಿವರ ನೀಡುವುದು); | ಅನುದಾನ ಲಭ್ಯತೆಗೆ ಒಳಪಟ್ಟು ಕ್ರಮವಹಿಸಲಾಗುವುದು. |
|---|---|---|
| ಈ) | ವಿಶ್ವವಿದ್ಯಾಲಯಕ್ಕೆ ಸಂಪೂರ್ಣ ಮೂಲಭೂತ ಸೌಕರ್ಯವನ್ನು ಒದಗಿಸಲು ಯಾವ ಕಾಲಮಿತಿಯೊಳಗೆ ಕ್ರಮಕೈಗೊಳ್ಳಲಾಗುವುದು (ವಿವರ ನೀಡುವುದು)? | |

ಸಂಖ್ಯೆ: ಇಡಿ 41 ಹೆಚ್‌ಪಿಯು 2021)

(ಡಾ: ಅಶ್ವತ್ಥ್ ನಾರಾಯಣ ಸಿ.ಎನ್)

ಉಪ ಮುಖ್ಯಮಂತ್ರಿಗಳು

(ಉನ್ನತ ಶಿಕ್ಷಣ, ಮಾಹಿತಿ ತಂತ್ರಜ್ಞಾನ, ಜೈವಿಕ ತಂತ್ರಜ್ಞಾನ ಹಾಗೂ ವಿಜ್ಞಾನ ಮತ್ತು ತಂತ್ರಜ್ಞಾನ ಮತ್ತು ಕೌಶಲ್ಯಾಭಿವೃದ್ಧಿ, ಉದ್ಯಮಶೀಲತೆ ಮತ್ತು ಜೀವನೋಪಾಯ)

# ಕರ್ನಾಟಕ ವಿಧಾನ ಸಭೆ

ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 2610

ಸದಸ್ಯರ ಹೆಸರು : ಶ್ರೀ. ಭೀಮಾನಾಯ್ಕ ಎಸ್.(ಹಗರಿಬೊಮ್ಮನಹಳ್ಳಿ)

ಉತ್ತರಿಸುವ ದಿನಾಂಕ : 18.03.2021

ಉತ್ತರಿಸುವ ಸಚಿವರು : ಮಾನ್ಯ ಉಪ ಮುಖ್ಯಮಂತ್ರಿಗಳು ಹಾಗೂ ಉನ್ನತ ಶಿಕ್ಷಣ, ಮಾಹಿತಿ ತಂತ್ರಜ್ಞಾನ, ಜೈವಿಕ ತಂತ್ರಜ್ಞಾನ ಹಾಗೂ ವಿಜ್ಞಾನ ಮತ್ತು ತಂತ್ರಜ್ಞಾನ, ಕೌಶಲ್ಯಾಭಿವೃದ್ಧಿ ಉದ್ಯಮಶೀಲತೆ ಮತ್ತು ಜೀವನೋಪಾಯ ಸಚಿವರು

| ಕ್ರ. ಸಂ | ಪ್ರಶ್ನೆ | ಉತ್ತರ |
|---|---|---|
| (ಅ) | ಹಗರಿಬೊಮ್ಮನಹಳ್ಳಿ ವಿಧಾನಸಭಾ ಕ್ಷೇತ್ರದ ತಂಬ್ರಹಳ್ಳಿ ಮತ್ತು ಕೊಟ್ಟೂರುಗಳಲ್ಲಿ ಸರ್ಕಾರಿ ಪದವಿ ಕಾಲೇಜು ಇಲ್ಲದೆ ವಿದ್ಯಾರ್ಥಿಗಳಿಗೆ ತೊಂದರೆ ಉಂಟಾಗಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; | ಬಂದಿದೆ |
| (ಆ) | ಬಂದಿದ್ದಲ್ಲಿ, ಯಾವಾಗ ಕಾಲೇಜುಗಳನ್ನು ಸ್ಥಾಪಿಸಲಾಗುವುದು; | ತಂಬ್ರಹಳ್ಳಿಯ ಸುತ್ತುಮುತ್ತ ಸರ್ಕಾರಿ ಮತ್ತು ಖಾಸಗಿ ಅನುದಾನಿತ ಕಾಲೇಜುಗಳ ಮತ್ತು ಸದರಿ ಕಾಲೇಜುಗಳಲ್ಲಿ ಲಭ್ಯವಿರುವ ಕೋರ್ಸುಗಳು ಮತ್ತು ವಿದ್ರಾರ್ಥಿಗಳ ಸಂಖ್ಯೆಯ ವಿವರ ಈ ಕೆಳಕಂಡಂತಿದೆ. |

| ಕಾಲೇಜಿನ ಹೆಸರು | ಸರ್ಕಾರಿ/ ಅನುದಾನಿತ | ಅಂತರ ಕಿ.ಮೀ | ಪ್ರವೇಶ ಪಡೆದಿರುವ ವಿದ್ಯಾರ್ಥಿಗಳ ಸಂಖ್ಯೆ | ಲಭ್ಯವಿ ಕೋಸು |
|---|---|---|---|---|
| ಸ.ಪ್ರ.ದ.ಕಾಲೇಜು ಹಗರಿಬೊಮ್ಮನಹಳ್ಳಿ | ಸರ್ಕಾರಿ | 17 ಕಿ.ಮೀ | 2484 | ಬಿ.ಎ., ಬಿ.ಕಾಂ |
| ಸ.ಪ್ರ.ದ.ಕಾ ಹೂವಿನಹಡಗಲಿ | ಸರ್ಕಾರಿ | 30 ಕಿ.ಮೀ | 1750 | ಬಿ.ಎ., ಬಿ.ಕಾಂ |
| ಸ.ಪ್ರ.ದ.ಕಾ ಹೊಸಪೇಟೆ | ಸರ್ಕಾರಿ | 58 ಕಿ.ಮೀ | 2308 | ಬಿ.ಎ., ಬಿ.ಕಾಂ |
| ವಿಜಯನಗರ ಕಾಲೇಜು, ಹೊಸಪೇಟೆ | ಅನುದಾನಿತ | 58 ಕಿ.ಮೀ | 2900 | ಬಿ.ಎ., ಬಿ.ಕಾಂ |
| ಜಿಬಿಆರ್ ಕಾಲೇಜು ಹೂವಿನಡಗಲಿ | | 30 ಕಿ.ಮೀ | 492 | ಬಿ.ಎ., ಬಿ.ಕಾಂ |

ಕೊಟ್ಟೂರಿನ ಸುತ್ತಮುತ್ತದ ಸುತ್ತುಮುತ್ತ ಸರ್ಕಾರಿ ಮತ್ತು ಖಾಸಗಿ ಅನುದಾನಿತ ಕಾಲೇಜುಗಳ ಮತ್ತು ಸದರಿ ಕಾಲೇಜುಗಳಲ್ಲಿ ಲಭ್ಯವಿರುವ ಕೋರ್ಸುಗಳು ಮತ್ತು ವಿದ್ರಾರ್ಥಿಗಳ ಸಂಖ್ಯೆಯ ವಿವರ ಈ ಕೆಳಕಂಡಂತಿದೆ

| ಕಾಲೇಜಿನ ಹೆಸರು | ಸರ್ಕಾರಿ/ ಅನುದಾನಿತ | ಅಂತರ ಕಿ.ಮೀ | ಪ್ರವೇಶ ಪಡೆದಿರುವ ವಿದ್ಯಾರ್ಥಿಗಳ ಸಂಖ್ಯೆ | ಲಭ್ಯವಿ ಕೋರ್ಸು |
|---|---|---|---|---|
| ಸ.ಪ್ರ.ದ.ಕಾಲೇಜು,ಕೂಡ್ಲಿಗಿ | ಸರ್ಕಾರಿ | 21 ಕಿ.ಮೀ | 1077 | ಬಿ.ಎ., ಬಿ. ಬಿ.ಕಾಂ |
| ಸ.ಪ್ರ.ದ.ಕಾಲೇಜು ಹರಪ್ಪನಹಳ್ಳಿ | ಸರ್ಕಾರಿ | 27 ಕಿ.ಮೀ | 1554 | ಬಿ.ಎ., ಬಿ. ಬಿ.ಕಾಂ. ಬಿಬಿಎಂ |
| ಸ.ಪ್ರ.ದ.ಕಾಲೇಜು ಹಗರಿಬೊಮ್ಮನ ಹಳ್ಳಿ | ಸರ್ಕಾರಿ | 29 ಕಿ.ಮೀ | 2484 | ಬಿ.ಎ., ಬಿ. ಬಿ.ಕಾಂ. ಬಿಬಿಎಂ |
| ಕೊಟ್ಟೂರೇಶ್ವರ ಪದವಿ ಮಹಾವಿದ್ಯಾಲಯ ಕೊಟ್ಟೂರು | ಅನುದಾನಿತ | – | 1757 | ಬಿ.ಎ., ಬಿ. ಬಿ.ಕಾಂ. |

ಮೇಲಿನ ಅಂಕಣದಲ್ಲಿ ತಿಳಿಸಿರುವಂತೆ ತಂಬ್ರಹಳ್ಳಿ ಮತ್ತು ಕೊಟ್ಟ ಗ್ರಾಮದ ವಿದ್ಯಾರ್ಥಿಗಳು ಆಯಾ ಗ್ರಾಮದ ಸುತ್ತಮುತ್ತಲಿನ ಕಾಲೇಜು ಪ್ರವೇಶಪಡೆಯಬಹುದಾಗಿರುತ್ತದೆ.

| | | |
|---|---|---|
| ಇ) | ಸದರಿ ಸ್ಥಳಗಳಲ್ಲಿ ಸರ್ಕಾರಿ ಪದವಿ ಕಾಲೇಜುಗಳನ್ನು ತೆರೆಯುವಂತೆ ಪ್ರಸ್ತಾವನೆ ಸಲ್ಲಿಸಲಾಗಿದ್ದು, ಪ್ರಸ್ತಾವನೆಯು ಈಗ ಯಾವ ಹಂತದಲ್ಲಿವೆ (ವಿವರ ನೀಡುವುದು) ? | ಕೋವಿಡ್-19 ಪ್ರಯುಕ್ತ ಆರ್ಥಿಕ ನಿರ್ಬಂಧ ಜಾರಿಯಲ್ಲಿರುವುದರಿಂದ ಹೊಸ ಕಾಲೇಜು ಪ್ರಾರಂಭಿಸುವ ಪ್ರಸ್ತಾವನೆ ಇರುವುದಿಲ್ಲ. |

ಕಡತ ಸಂಖ್ಯೆ: ಇಡಿ 38 ಹೆಚ್‌ಪಿಸಿ 2021

(ಡಾ: ಅಶ್ವಥ್ ನಾರಾಯಣ ಸಿ.ಎನ್)
ಉಪ ಮುಖ್ಯಮಂತ್ರಿಗಳು ಹಾಗೂ ಉನ್ನತ ಶಿಕ್ಷಣ,
ಮಾಹಿತಿ ತಂತ್ರಜ್ಞಾನ, ಜೈವಿಕ ತಂತ್ರಜ್ಞಾನ ಹಾಗೂ ವಿಜ್ಞಾನ ಮತ್ತು
ತಂತ್ರಜ್ಞಾನ, ಕೌಶಲ್ಯಾಭಿವೃದ್ಧಿ ಉದ್ಯಮಶೀಲತೆ ಮತ್ತು
ಜೀವನೋಪಾಯ ಸಚಿವರು

# ಕರ್ನಾಟಕ ವಿಧಾನ ಸಭೆ

ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 2068
ಸದಸ್ಯರ ಹೆಸರು : ಶ್ರೀ ಸಂಜೀವ್ ಮಠಂದೂರ್ (ಪುತ್ತೂರು)
ಉತ್ತರಿಸುವ ದಿನಾಂಕ : 18.03.2021
ಉತ್ತರಿಸುವ ಸಚಿವರು : ಮಾನ್ಯ ಉಪ ಮುಖ್ಯಮಂತ್ರಿಗಳು ಹಾಗೂ ಉನ್ನತ ಶಿಕ್ಷಣ. ಮಾಹಿತಿ ತಂತ್ರಜ್ಞಾನ. ಜೈವಿಕ ತಂತ್ರಜ್ಞಾನ ಹಾಗೂ ವಿಜ್ಞಾನ ಮತ್ತು ತಂತ್ರಜ್ಞಾನ. ಕೌಶಲ್ಯಾಭಿವೃದ್ಧಿ ಉದ್ಯಮಶೀಲತೆ ಮತ್ತು ಜೀವನೋಪಾಯ ಸಚಿವರು

| ಕ್ರ. ಸಂ | ಪ್ರಶ್ನೆ | ಉತ್ತರ |
|---|---|---|
| (ಅ) | ಪುತ್ತೂರಿನಲ್ಲಿರುವ ಮಹಿಳಾ ಪ್ರಥಮ ದರ್ಜೆ ಕಾಲೇಜಿಗೆ ಸ್ವಂತ ನಿವೇಶನ ಕಾಯ್ದಿರಿಸಲಾಗಿದೆಯೇ; | ಪುತ್ತೂರಿನಲ್ಲಿರುವ ಮಹಿಳಾ ಪ್ರಥಮ ದರ್ಜೆ ಕಾಲೇಜಿಗೆ ಜಿಲ್ಲಾಧಿಕಾರಿಗಳು, ದಕ್ಷಿಣ ಕನ್ನಡ ಜಿಲ್ಲೆ ಇವರ ಆದೇಶದಂತೆ ಪುತ್ತೂರು ತಾಲ್ಲೂಕು ನಗರ ಸಭೆಯ ವ್ಯಾಪ್ತಿಯ ಬನ್ನೂರು ಗ್ರಾಮದ ಸರ್ವೆ ನಂ.73/1ರಲ್ಲಿ 4.70ಎಕರೆ ವಿಸ್ತೀರ್ಣ ಜಮೀನನ್ನು ಕಾಲೇಜು ಶಿಕ್ಷಣ ಇಲಾಖೆ ಬೆಂಗಳೂರು ಇವರ ಹೆಸರಿನಲ್ಲಿ ಕಾಯ್ದಿರಿಸಲಾಗಿರುತ್ತದೆ. |
| (ಆ) | ನಿವೇಶನ ಕಾಯ್ದಿರಿಸಿದ್ದಲ್ಲಿ ಕಟ್ಟಡ ನಿರ್ಮಾಣಕ್ಕೆ ಅನುದಾನ ಲಭ್ಯವಿದೆಯೇ; | ಸದರಿ ಕಾಲೇಜು ಕಟ್ಟಡ ನಿರ್ಮಾಣಕ್ಕೆ 2018-19ನೇ ಸಾಲಿನಲ್ಲಿ ರೂ.430.00ಲಕ್ಷಗಳ ಅಂದಾಜು ಪಟ್ಟಿಗೆ ಆಡಳಿತಾತ್ಮಕ ಅನುಮೋದನೆ ನೀಡಿ ರೂ.235.00ಲಕ್ಷಗಳ ಅನುದಾನವನ್ನು ಬಿಡುಗಡೆ ಮಾಡಲಾಗಿರುತ್ತದೆ ಹಾಗೂ 2020-21ನೇ ಸಾಲಿನಲ್ಲಿ ಸದರಿ ಕಾಲೇಜಿಗೆ ರೂ.100.00ಲಕ್ಷಗಳ ಮೂಲಭೂತ ಸೌಕರ್ಯಗಳ ಕಾಮಗಾರಿಗೆ ಅನುಮೋದನೆ ನೀಡಲಾಗಿದೆ. |
| ಇ) | ಇದ್ದಲ್ಲಿ, ಸ್ವಂತ ಕಟ್ಟಡ ನಿರ್ಮಾಣ ಮಾಡಲು ಯಾವಾಗ ಕ್ರಮಕೈಗೊಳ್ಳಲಾಗುವುದು? (ಸಂಪೂರ್ಣ ಮಾಹಿತಿ ಒದಗಿಸುವುದು) | ಜಿಲ್ಲಾಧಿಕಾರಿಗಳು ಮಂಜೂರು ಮಾಡಿದ ನಿವೇಶನದಲ್ಲಿ ಯಾವುದೇ ಕಟ್ಟಡ ನಿರ್ಮಾಣ ಮಾಡದಂತೆ ಕರ್ನಾಟಕ ಮೇಲ್ಮನವಿ ಪ್ರಾಧಿಕಾರವು ತಡೆಯಾಜ್ಞೆ ನೀಡಿದ್ದು, ಸದರಿ ಪ್ರಕರಣದ ಕುರಿತು ನ್ಯಾಯಾಲಯದ ತೀರ್ಪು ಬಾಕಿ ಇರುವುದರಿಂದ ನ್ಯಾಯಾಲಯದಿಂದ ಬರುವ ತೀರ್ಪಿನ ಅನುಸಾರ ಮುಂದಿನ ಅಗತ್ಯ ಕ್ರಮ ಕೈಗೊಳ್ಳಲಾಗುವುದು. |

ಕಡತ ಸಂಖ್ಯೆ: ಇಡಿ 34 ಹೆಚ್‌ಪಿಸಿ 2021

(ಡಾ: ಅಶ್ವಥ್ ನಾರಾಯಣ ಸಿ.ಎನ್)
ಉಪ ಮುಖ್ಯಮಂತ್ರಿಗಳು ಹಾಗೂ ಉನ್ನತ ಶಿಕ್ಷಣ.
ಮಾಹಿತಿ ತಂತ್ರಜ್ಞಾನ, ಜೈವಿಕ ತಂತ್ರಜ್ಞಾನ ಹಾಗೂ ವಿಜ್ಞಾನ
ಮತ್ತು ತಂತ್ರಜ್ಞಾನ, ಕೌಶಲ್ಯಾಭಿವೃದ್ಧಿ ಉದ್ಯಮಶೀಲತೆ ಮತ್ತು
ಜೀವನೋಪಾಯ ಸಚಿವರು

36

# ಕರ್ನಾಟಕ ವಿಧಾನಸಭೆ

**ಚುಕ್ಕೆ ಗುರುತ್ತಿಲ್ಲದ ಪ್ರಶ್ನೆಸಂಖ್ಯೆ** : 2645

**ಮಾನ್ಯ ಸದಸ್ಯರ ಹೆಸರು** : ಡಾ: ಅಜಯ್ ಧರ್ಮ ಸಿಂಗ್ (ಜೇವರ್ಗಿ)

**ಉತ್ತರಿಸುವ ಸಚಿವರು** : ಪ್ರವಾಸೋದ್ಯಮ, ಪರಿಸರ ಮತ್ತು ಜೀವಿಶಾಸ್ತ್ರ, ಸಚಿವರು.

**ಉತ್ತರಿಸುವ ದಿನಾಂಕ** : 18-03-2021.

*******

| ಕ್ರ. ಸಂ. | ಪ್ರಶ್ನೆ | ಉತ್ತರ |
|---|---|---|
| ಅ) | ರಾಜ್ಯದಲ್ಲಿ ಕಳೆದ ಮೂರು ವರ್ಷಗಳಿಂದ ಪ್ರವಾಸೋದ್ಯಮವನ್ನು ಉತ್ತೇಜಿಸಲು ಯಾವ ಸಂಸ್ಥೆಗಳನ್ನು ಟೆಂಡರ್ ಮೂಲಕ ಆಯ್ಕೆ ಮಾಡಲಾಗಿದೆ; ಟೆಂಡರ್ ಅವಧಿ ಎಷ್ಟು ವರ್ಷಗಳಿಗೆ ನಿಗದಿಪಡಿಸಲಾಗಿದೆ; (ಪೂರ್ಣ ವಿವರ ನೀಡುವುದು) | ಕಳೆದ ಮೂರು ವರ್ಷಗಳಿಂದ ಪ್ರವಾಸೋದ್ಯಮವನ್ನು ಉತ್ತೇಜಿಸಲು ಇಲಾಖೆಯಿಂದ ಹಾಗೂ ಇಲಾಖೆಯ ಅಂಗ ಸಂಸ್ಥೆಗಳಾದ ಕರ್ನಾಟಕ ರಾಜ್ಯ ಪ್ರವಾಸೋದ್ಯಮ ಅಭಿವೃದ್ಧಿ ನಿಗಮ ಹಾಗೂ ಅರಣ್ಯ ವಸತಿ ಮತ್ತು ವಿಹಾರಧಾಮಗಳ ಸಂಸ್ಥೆಗಳಿಂದ ಕೈಗೊಂಡಿರುವ ಟೆಂಡರ್ ಪ್ರಕ್ರಿಯೆ ಮೂಲಕ ಆಯ್ಕೆ ಮಾಡಿರುವ ಸಂಸ್ಥೆಗಳ ಮಾಹಿತಿ, ಟೆಂಡರ್‌ನ ಅವಧಿಯನ್ನು ಅನುಕ್ರಮವಾಗಿ ಅನುಬಂಧ-1, 2 ಮತ್ತು 3ರಲ್ಲಿ ಒದಗಿಸಿದೆ. |
| ಆ) | ಟೆಂಡರ್‌ನಲ್ಲಿ ಆಯ್ಕೆಯಾದ ಸಂಸ್ಥೆಗಳ ಅವಧಿಯು ಅಂತ್ಯಗೊಂಡಿದೆಯೇ; ಹಾಗಿದ್ದಲ್ಲಿ, ಆ ಸಂಸ್ಥೆಗಳನ್ನು ಎಷ್ಟು ವರ್ಷಗಳ ಅವಧಿಗೆ ಮುಂದುವರೆಸಲಾಗಿದೆ; | |
| ಇ) | ಯಾವ ನಿಯಮದಡಿ ಮುಂದುವರೆಸಲಾಗಿದೆ? (ವಿವರ ನೀಡುವುದು) | |

ಕಡತ ಸಂಖ್ಯೆ: ಟಿಓಆರ್ 53 ಟಿಡಿವಿ 2021

(ಸಿ. ಪಿ. ಯೋಗೇಶ್ವರ)
ಪ್ರವಾಸೋದ್ಯಮ, ಪರಿಸರ ಮತ್ತು
ಜೀವಿಶಾಸ್ತ್ರ, ಸಚಿವರು

## ಅನುಬಂಧ-1

ಪ್ರವಾಸೋದ್ಯಮ ಇಲಾಖೆಯು ಕೈಗೊಂಡಿರುವ ಟೆಂಡರ್ ಪ್ರಕ್ರಿಯೆ ವಿವರ:-

1. ರಾಷ್ಟ್ರೀಯ ಮಟ್ಟದಲ್ಲಿ ನಡೆಯುವ ಪ್ರವಾಸಿ ಮೇಳಗಳಲ್ಲಿ ಇಲಾಖೆಯ ಪರವಾಗಿ ಮಳಿಗೆ ತೆರೆದು ಸಜ್ಜುಗೊಳಿಸಿ ಭಾಗವಹಿಸಲು ಮೇಳ ನಿರ್ವಹಣಾ ಏಜೆನ್ಸಿಯಾಗಿ ಮೆ: ಸ್ಕೀಯರ್ ಟ್ರಾವೆಲ್ ಮೀಡಿಯಾ & ಎಕ್ಷಿಬಿಷನ್ ಪ್ರೈ.ಲಿ ಸಂಸ್ಥೆಯನ್ನು ದಿ:12-05-2015 ರಿಂದ ಮುಂದಿನ (3) ವರ್ಷಗಳ ಅವಧಿಗೆ ಆಯ್ಕೆ ಮಾಡಲಾಗಿದೆ. ಈ ಸಂಸ್ಥೆಯನ್ನು ದಿ:12-02-2020 ರವರೆಗೆ (2) ವರ್ಷಗಳ ಕಾಲ ಗುತ್ತಿಗೆ ಕರಾರಿನ ಷರತ್ತಿನನ್ವಯ ಹಾಗೂ ಸರ್ಕಾರದ ಅನುಮತಿ ಪಡೆದು ಮುಂದುವರೆಸಲಾಗಿದೆ. ಪ್ರಸ್ತುತ ಟೆಂಡರ್ ಅವಧಿ ಮುಕ್ತಾಯಗೊಂಡಿರುತ್ತದೆ.
2. ಅಂತರಾಷ್ಟ್ರೀಯ ಮಟ್ಟದಲ್ಲಿ ನಡೆಯುವ ಪ್ರವಾಸಿ ಮೇಳಗಳಲ್ಲಿ ಇಲಾಖೆಯ ಪರವಾಗಿ ಮಳಿಗೆ ತೆರೆದು ಸಜ್ಜುಗೊಳಿಸಿ ಭಾಗವಹಿಸಲು ಮೇಳ ನಿರ್ವಹಣಾ ಏಜೆನ್ಸಿಯಾಗಿ (4) ಸಂಸ್ಥೆಗಳನ್ನು ದಿ:08-12-2016 ರಿಂದ ಮುಂದಿನ (2) ವರ್ಷಗಳ ಅವಧಿಗೆ ಆಯ್ಕೆ ಮಾಡಿಕೊಳ್ಳಲಾಗಿದೆ. ಸದರಿ ಏಜೆನ್ಸಿಗಳನ್ನು ದಿ:19-12-2019 ರವರೆಗೆ ಒಂದು ವರ್ಷಗಳ ಕಾಲ ಸರ್ಕಾರದ ಅನುಮತಿ ಪಡೆದು ಮುಂದುವರಿಸಲಾಗಿದೆ. ಪ್ರಸ್ತುತ ಈ ಟೆಂಡರ್ ಅವಧಿ ಮುಕ್ತಾಯಗೊಂಡಿರುತ್ತದೆ. ಸದರಿ (4) ಸಂಸ್ಥೆಗಳೆಂದರ:- 1)ಮೆ:ಗೋಲ್ಡ್ ಮೈನ್ ಅಡ್ವರ್ಟೈಸಿಂಗ್, 2) ಫೇಸ್ 1 ಇವೆಂಟ್ & ಎಂಟರ್ ಟೈನ್ ಮೆಂಟ್ ಪ್ರೈ.ಲಿ., 3) ಮೆ: ಸ್ಟಾರ್ಕ್ ಕಮ್ಯೂನಿಕೇಷನ್ಸ್ ಪ್ರೈ.ಲಿ., 4) ವಿನ್ಸನ್ ಗ್ರಾಫಿಕ್ಸ್.
3. ಪ್ರವಾಸೋದ್ಯಮ ಉತ್ತೇಜನ ಹಾಗೂ ಕ್ರಿಯೇಟಿವ್, ಮೀಡಿಯಾ ಬ್ರಾಂಡಿಂಗ್ ಏಜೆನ್ಸಿಯಾಗಿ ಮೆ: ಸ್ಟಾರ್ಕ್ ಕಮ್ಯೂನಿಕೇಷನ್ಸ್ ಪ್ರೈ.ಲಿ.,ಸಂಸ್ಥೆಯನ್ನು ದಿ:14-12-2016 ರಿಂದ ಮುಂದಿನ (2) ವರ್ಷಗಳ ಅವಧಿಗೆ ಆಯ್ಕೆಮಾಡಲಾಗಿದೆ. ಸದರಿ ಏಜೆನ್ಸಿಯನ್ನು ದಿ:11-05-2020ರವರೆಗೆ (2)ವರ್ಷಗಳ ಕಾಲ ಗುತ್ತಿಗೆ ಕರಾರಿನ ಷರತ್ತಿನನ್ವಯ ಹಾಗೂ ಸರ್ಕಾರದ ಅನುಮತಿ ಪಡೆದು ಮುಂದುವರೆಸಲಾಗಿದೆ. ಪ್ರಸ್ತುತ ಟೆಂಡರ್ ಅವಧಿ ಮುಕ್ತಾಯಗೊಂಡಿರುತ್ತದೆ.

## ಅನುಬಂಧ-2

ಕರ್ನಾಟಕ ರಾಜ್ಯ ಪ್ರವಾಸೋದ್ಯಮ ಅಭಿವೃದ್ಧಿ ನಿಗಮ ನಿಯಮಿತದಿಂದ ಕೈಗೊಂಡಿರುವ ಟೆಂಡರ್ ಪ್ರಕ್ರಿಯೆ ವಿವರ:-

1. ಪ್ರವಾಸೋದ್ಯಮವನ್ನು ಉತ್ತೇಜಿಸಲು ವಿಶ್ವವಿಖ್ಯಾತ ಹಂಪಿ ಹಾಗೂ ಶ್ರೀರಂಗಪಟ್ಟಣದ ಕೋಟೆ ಆವರಣದಲ್ಲಿ ಧ್ವನಿ ಮತ್ತು ಬೆಳಕು ಕಾರ್ಯಕ್ರಮವನ್ನು ಆಯೋಜನೆ ಸಂಬಂಧ ಇ-ಪ್ರೊಕ್ಯೂರ್‌ಮೆಂಟ್ ಟೆಂಡರ್ ಮೂಲಕ ಮೆ|| ಇನ್ನೋವೇಟಿವ್ ಲೈಟಿಂಗ್ ಸಿಸ್ಟಮ್ಸ್ ರವರನ್ನು ಆಯ್ಕೆ ಮಾಡಿ ದಿನಾಂಕ:28.02.2019 ರಂದು 5 ವರ್ಷಗಳ ಅವಧಿಯವರೆಗೆ ಕಾರ್ಯಕ್ರಮವನ್ನು ಆಯೋಜಿಸಲು ಕಾರ್ಯಾದೇಶವನ್ನು ನೀಡಲಾಗಿರುತ್ತದೆ. ಟೆಂಡರ್ ಅವಧಿಯು ಚಾಲ್ತಿಯಲ್ಲಿರುತ್ತದೆ.
2. ಅ. 24X7 ಕಾಲ್ ಸೆಂಟರ್ ಸೇವೆಯನ್ನು ಪ್ರವಾಸಿಗರ ಅನುಕೂಲಕ್ಕಾಗಿ ಒದಗಿಸಲು ಇ-ಪ್ರೊಕ್ಯೂರ್‌ಮೆಂಟ್ ಮೂಲಕ ಟೆಂಡರ್ ಆಹ್ವಾನಿಸಲಾಗಿದ್ದು, ಸದರಿ ಟೆಂಡರ್ ನಲ್ಲಿ ಆಯ್ಕೆಯಾದ ಮೆ: ದೀಪಿಜಾ ಟೆಲಿಕಾಂ ಪ್ರೈ.ಲಿ ರವರಿಂದ ಕಾಲ್ ಸೆಂಟರ್ ಸೇವೆಯನ್ನು ಪಡೆಯಲು ದಿನಾಂಕ: 09.08.2019 ರಿಂದ 02 ವರ್ಷಗಳ ಅವಧಿಗೆ ಕರಾರು ಒಪ್ಪಂದ ಮಾಡಿಕೊಳ್ಳಲಾಗಿರುತ್ತದೆ. ಟೆಂಡರ್ ಅವಧಿ ಚಾಲ್ತಿಯಲ್ಲಿದೆ.

   ಆ. ಪ್ರವಾಸಿಗರಿಗೆ ಪ್ರವಾಸೋದ್ಯಮದ ಕುರಿತಾಗಿ ಪ್ರವಾಸ ಪ್ಯಾಕೇಜ್‌ಗಳ ಸೇವೆಯನ್ನು ಒದಗಿಸಲು ನಿಗಮಕ್ಕೆ ಟ್ಯಾಕ್ಸಿ ಆಪರೇಟರ್ ಗಳನ್ನು ಎಂಪ್ಯಾನೆಲ್ ಮಾಡಿಕೊಳ್ಳಲು ಟೆಂಡರ್ ಆಹ್ವಾನಿಸಲಾಗಿದ್ದು, ಮೆ: ಅರ್ಜುನ್ ಟೂರ್ಸ್ ಅಂಡ್ ಟ್ರಾವೆಲ್ಸ್ ಹಾಗೂ ಮೆ: ಸ್ಕೈವೇ ಟೂರ್ಸ್ ಅಂಡ್ ಟ್ರಾವೆಲ್ಸ್ ಸಂಸ್ಥೆಗಳಿಂದ ಸೇವೆಯನ್ನು ದಿನಾಂಕ: 01.03.2019 ರಿಂದ 02 ವರ್ಷಗಳ ಅವಧಿಗೆ ಒಡಂಬಡಿಕೆ ಮಾಡಿಕೊಳ್ಳಲಾಗಿತ್ತು. ಪ್ರಸ್ತುತ ಸದರಿ ಗುತ್ತಿಗೆ ಅವಧಿ ಮುಕ್ತಾಯಗೊಂಡಿದೆ. ಹೊಸದಾಗಿ ಟೆಂಡರ್ ಆಹ್ವಾನಿಸಿದ್ದು, ಟೆಂಡರ್ ಪ್ರಕ್ರಿಯೆ ಚಾಲ್ತಿಯಲ್ಲಿದೆ.
3. ಮೇಳ ಹಾಗೂ ರೋಡ್ ಷೋಗಳಿಗೆ ಸಂಬಂಧಿಸಿದಂತೆ ಟೆಂಡರ್ ವಿವರ:-

| ಕ್ರ ಸಂ | ಸಂಸ್ಥೆ | ಯೋಜನ | ಗುತ್ತಿಗ ಅವಧಿ |
|---|---|---|---|
| 1 | ಮೆ: ಸ್ಕೇಯರ್ ಟ್ರಾವೆಲ್ ಮೀಡಿಯಾ & ಎಕ್ಷಿಬಿಷನ್ ಪ್ರೈಲಿ | ದೇಶೀಯ ರೋಡ್ ಷೋ ಆಯೋಜನೆ-2018-19 & 2019-20 | 28.02.2019 ರಿಂದ ಎರಡು ತಿಂಗಳವರಗೆ ಹಾಗೂ ಆಗಸ್ಟ್-2019 ರವರಗೆ ವಿಸ್ತರಿಸಲಾಗಿದೆ. |
| 2 | ಮೆ: ಸ್ಪಾರ್ಕ್ ಕಮ್ಯುನಿಕೇಷನ್ಸ್ ಪ್ರೈ.ಲಿ | ದೇಶೀಯ ರೋಡ್ ಷೋ ಆಯೋಜನೆ-2019-20 | 21.10.2019 ರಿಂದ 8 ತಿಂಗಳವರಗೆ |
| | | ಅಂತರಾಷ್ಟ್ರೀಯ ಮೇಳದಲ್ಲಿ ಭಾಗವಹಿಸುವಿಕೆ 2019-20 | 31.12.2019 ರಿಂದ 4 ತಿಂಗಳವರಗೆ |
| | | ಅಂತರಾಷ್ಟ್ರೀಯ ರೋಡ್ ಷೋ ಆಯೋಜನೆ 2019-20 | 02.11.2019 ರಿಂದ 06 ತಿಂಗಳ ವರೆಗೆ |
| 3 | ಮೆ: ಪಿ.ಆರ್ ಆನ್ಸೈನ್ ವೆಂಚರ್ಸ್ ಪ್ರೈ.ಲಿ | ಡಿಜಿಟಲ್ ಮಾರುಕಟ್ಟೆ ಸೇವೆ | 06.09.2018 ರಿಂದ 30.09.2020 |
| 4 | ಮೆ: ಸ್ಪಾರ್ಕ್ ಕಮ್ಯುನಿಕೇಷನ್ಸ್ ಪ್ರೈ.ಲಿ | | 01.10.2020 ರಿಂದ 30.09.2022 |

ಟೆಂಡರ್ ನಲ್ಲಿ ಆಯ್ಕೆಯಾದ ಸಂಸ್ಥೆಗಳ ಪೈಕಿ, ಮೆ: ಸ್ಪಾರ್ಕ್ ಕಮ್ಯುನಿಕೇಷನ್ಸ್ ಪ್ರೈ.ಲಿ ರವರೊಂದಿಗೆ ಡಿಜಿಟಲ್ ಮಾರುಕಟ್ಟೆ ಸೇವೆಗಾಗಿ ಮಾಡಿಕೊಂಡಿರುವ ಗುತ್ತಿಗೆ ಒಪ್ಪಂದವು ದಿನಾಂಕ: 30.09.2022. ರವರೆಗೆ ಚಾಲ್ತಿಯಲ್ಲಿರುತ್ತದೆ. ಉಳಿದಂತೆ, ಇತರೆ ಸಂಸ್ಥೆಗಳ ಗುತ್ತಿಗೆ ಅವಧಿಯು ಮುಗಿದಿರುತ್ತದೆ.

4. ರಾಜ್ಯದಲ್ಲಿ ಪ್ರವಾಸೋದ್ಯಮವನ್ನು ಉತ್ತೇಜಿಸುವ ಸಂಬಂಧ ನಿಗಮದ ವತಿಯಿಂದ ಪ್ರವಾಸೋದ್ಯಮ ಇಲಾಖೆ ಮತ್ತು ಇಲಾಖೆಯ ಅಂಗ ಸಂಸ್ಥೆಗಳಾದ ಕರ್ನಾಟಕ ರಾಜ್ಯ ಪ್ರವಾಸೋದ್ಯಮ ಅಭಿವೃದ್ಧಿ ನಿಗಮ, ಜೆ.ಎಲ್.ಆರ್ ಮತ್ತು ಕರ್ನಾಟಕ ವಸ್ತು ಪ್ರದರ್ಶನ ಸಂಸ್ಥೆಗಳಿಗೆ ಸಲಹಾ ಸೇವೆಯನ್ನು ನೀಡಲು ಟೆಂಡರ್ ಮೂಲಕ ಮೆ|| ಕೆ.ಪಿಎಂ.ಜಿ ಅಡ್ವೈಸರಿ ಸಂಸ್ಥೆಯನ್ನು ಆಯ್ಕೆ ಮಾಡಿ, ದಿ:05.11.2016 ರಂದು ಕರಾರು ಒಪ್ಪಂದವನ್ನು ಮಾಡಿಕೊಳ್ಳಲಾಗಿರುತ್ತದೆ. ಸದರಿ ಸಂಸ್ಥೆಯೊಂದಿಗೆ ಮಾಡಿಕೊಂಡ ಒಪ್ಪಂದದ ಅವಧಿಯು (ಟೆಂಡರ್ ಅವಧಿ) ದಿ:28.02.2021 ರಂದು ಮುಕ್ತಾಯಗೊಂಡಿರುತ್ತದೆ.

5. ನಿಗಮದ ವತಿಯಿಂದ ಪ್ರವಾಸೋದ್ಯಮ ಇಲಾಖೆಯ ಜಾಲತಾಣವನ್ನು ವಿನ್ಯಾಸ ಮತ್ತು ಅಭಿವೃದ್ಧಿ ಗೊಳಿಸುವ ಸಂಬಂಧ ಟೆಂಡರ್ ಆಹ್ವಾನಿಸಲಾಗಿದ್ದು ಸದರಿ ಟೆಂಡರ್ನಲ್ಲಿ ಮೆ॥ ಗ್ಲೋಬಲ್ಸ್ ಐ.ಟಿ.ಇ.ಎಸ್ ಸಂಸ್ಥೆಯವರು ಆಯ್ಕೆಯಾಗಿದ್ದು ದಿನಾಂಕ 12.09.2019 ರಿಂದ 3 ವರ್ಷ 6 ತಿಂಗಳ ಅವಧಿಗೆ ಕರಾರು ಒಪ್ಪಂದವನ್ನು ಮಾಡಿಕೊಳ್ಳಲಾಗಿದೆ. ಟೆಂಡರ್ ಅವಧಿ ಚಾಲ್ತಿಯಲ್ಲಿದೆ.

6. ನಿಗಮದ ವತಿಯಿಂದ ಪ್ರವಾಸೋದ್ಯಮ ಇಲಾಖೆಯ ಸೋಷಿಯಲ್ ಮೀಡಿಯಾ ಮತ್ತು ಡಿಜಿಟಲ್ ಮಾರ್ಕೇಟಿಂಗ್ ಸೇವೆಗಳನ್ನು ಒದಗಿಸುವ ಸಂಬಂಧ ಟೆಂಡರ್ ಆಹ್ವಾನಿಸಲಾಗಿದ್ದು ಸದರಿ ಟೆಂಡರ್ನಲ್ಲಿ ಮೆ॥ ಹಿಗಾ ಡಿಜಿಟಲ್ ಪ್ರೈ.ಲಿ. ಸಂಸ್ಥೆಯವರು ಆಯ್ಕೆಯಾಗಿದ್ದು ದಿನಾಂಕ 19.08.2019 ರಂದು 2 ವರ್ಷಗಳ ಅವಧಿಗೆ ಕರಾರು ಒಪ್ಪಂದ ಮಾಡಿಕೊಳ್ಳಲಾಗಿದೆ. ಟೆಂಡರ್ ಅವಧಿ ಚಾಲ್ತಿಯಲ್ಲಿದೆ.

# ಅನುಬಂಧ-3

ಅರಣ್ಯ ವಸತಿ ಮತ್ತು ವಿಹಾರಧಾಮಗಳ ಸಂಸ್ಥೆಯಿಂದ ಕೈಗೊಂಡಿರುವ ಟೆಂಡರ್ ಪ್ರಕ್ರಿಯೆ ವಿವರ:-

ಅಂತರಾಷ್ಟ್ರೀಯ ಮಟ್ಟದಲ್ಲಿ ನಡೆಯುವ ಪ್ರವಾಸಿ ಮೇಳಗಳಲ್ಲಿ ಇಲಾಖೆಯ ಪರವಾಗಿ ಮಳಿಗೆ ತೆರೆದು ಸಜ್ಜುಗೊಳಿಸಿ ಭಾಗವಹಿಸಲು ಮೇಳ ನಿರ್ವಹಣಾ ಏಜೆನ್ಸಿಯಾಗಿ ಕೆಳಕಂಡ ಸಂಸ್ಥೆಗಳನ್ನು ಆಯ್ಕೆ ಮಾಡಲಾಗಿದೆ.

| ನಿರ್ವಹಿಸಿರುವ ಸಂಸ್ಥೆ ಹೆಸರು | ನಡೆದ ಸ್ಥಳ ಹಾಗೂ ಉದ್ದೇಶ | ಟೆಂಡರ್ ಅವಧಿ |
|---|---|---|
| ಮ:ಪೇಸ್-1 ಇವೆಂಟ್ & ಎಂಟರ್ ಪ್ರೈಸಸ್ ಪ್ರೈ.:ಲಿ | ಲಂಡನ್ ದೇಶದ ಪ್ಯಾರೀಸ್ ನಗರದಲ್ಲಿ IFTM Top Resa ಅಂತರಾಷ್ಟ್ರೀಯ ಮೇಳದಲ್ಲಿ ಕರ್ನಾಟಕ ಪ್ರವಾಸೋದ್ಯಮದ ಬಗ್ಗೆ ಪ್ರಚಾರ. | 90 ದಿನಗಳು |
| ಮ. ಸ್ಪಾರ್ಕ್ ಕಮ್ಯೂನಿಕೇಷನ್ ಪ್ರೈ.ಲಿ | ಸ್ಪೇನ್ ದೇಶದ ಮ್ಯಾಡ್ರಿಡ್ ನಗರದಲ್ಲಿ FITUR ಅಂತರಾಷ್ಟ್ರೀಯ ಮೇಳದಲ್ಲಿ ಕರ್ನಾಟಕ ಪ್ರವಾಸೋದ್ಯಮ ಬಗ್ಗೆ ಪ್ರಚಾರ.<br>ಜಪಾನ್ ದೇಶದ ಟೋಕಿಯೋ ನಗರದಲ್ಲಿ JATA Tourism Expo ರ ಅಂತರರಾಷ್ಟ್ರೀಯ ಮೇಳದಲ್ಲಿ ಕರ್ನಾಟಕ ಪ್ರವಾಸೋದ್ಯಮ ಬಗ್ಗೆ ಪ್ರಚಾರ<br>ದುಬೈ ದೇಶದಲ್ಲಿ ATM ಅಂತರಾಷ್ಟ್ರೀಯ ಮೇಳದಲ್ಲಿ ಕರ್ನಾಟಕ ಪ್ರವಾಸೋದ್ಯಮ ಬಗ್ಗೆ ಪ್ರಚಾರ. | 90 ದಿನಗಳು |
| ಮೇ: ವಿನ್ ಸನ್ ಗ್ರಾಫೀಕ್ಸ್ | ಜರ್ಮನ್ ದೇಶದ ಬರ್ಲಿನ್ ನಗರದಲ್ಲಿ ITB Berlin ಅಂತರಾಷ್ಟ್ರೀಯ ಮೇಳದಲ್ಲಿ ಕರ್ನಾಟಕ ಪ್ರವಾಸೋದ್ಯಮ ಬಗ್ಗೆ ಪ್ರಚಾರ.<br>ರಷ್ಯಾ ದೇಶದ ಮಾಸ್ಕೋ ನಗರದಲ್ಲಿ MITT ಅಂತರರಾಷ್ಟ್ರೀಯ ಮೇಳದಲ್ಲಿ ಕರ್ನಾಟಕ ಪ್ರವಾಸೋದ್ಯಮ ಬಗ್ಗೆ ಪ್ರಚಾರ. | 90 ದಿನಗಳು |
| 2019 | | |
| ಮೇ: ವಿನ್ ಸನ್ ಗ್ರಾಫೀಕ್ಸ್ | ದುಬೈ ದೇಶದಲ್ಲಿ ATM ಅಂತರಾಷ್ಟ್ರೀಯ ಮೇಳದಲ್ಲಿ ಕರ್ನಾಟಕ ಪ್ರವಾಸೋದ್ಯಮ ಬಗ್ಗೆ ಪ್ರಚಾರ. | 90 ದಿನಗಳು |
| ಮ:ಪೇಸ್-1 ಇವೆಂಟ್ & ಎಂಟರ್ ಪ್ರೈಸಸ್ ಪ್ರೈ.:ಲಿ | ಲಂಡನ್ ದೇಶದ ಪ್ಯಾರೀಸ್ ನಗರದಲ್ಲಿ IFTM Top Resa ಅಂತರಾಷ್ಟ್ರೀಯ ಮೇಳದಲ್ಲಿ ಕರ್ನಾಟಕ ಪ್ರವಾಸೋದ್ಯಮದ ಬಗ್ಗೆ ಪ್ರಚಾರ | 90 ದಿನಗಳು |
| ಮ. ಸ್ಪಾರ್ಕ್ ಕಮ್ಯೂನಿಕೇಷನ್ ಪ್ರೈ.ಲಿ | ಲಂಡನ್ ನಗರದಲ್ಲಿ WTM London ಅಂತರಾಷ್ಟ್ರೀಯ ಮೇಳದಲ್ಲಿ ಕರ್ನಾಟಕ ಪ್ರವಾಸೋದ್ಯಮದ ಬಗ್ಗೆ ಪ್ರಚಾರ | 90 ದಿನಗಳು |
| 2020-21 ನೇ ಸಾಲಿನಲ್ಲಿ ಜೆ.ಎಲ್.ಆರ್ ಸಂಸ್ಥೆಯ ಯಾವುದೇ ಅಂತರಾಷ್ಟ್ರೀಯ ಮೇಳವನ್ನು ಆಯೋಜಿಸಿರುವುದಿಲ್ಲ. | | |

ಮೇಲ್ಕಂಡ ಸಂಸ್ಥೆಗಳ ಟೆಂಡರ್ ಅವಧಿಯು ಮುಕ್ತಾಯಗೊಂಡಿರುತ್ತದೆ.

## ಕರ್ನಾಟಕ ವಿಧಾನಸಭೆ

| | |
|---|---|
| ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ | : 2652 |
| ಮಾನ್ಯ ಸದಸ್ಯರ ಹೆಸರು | : ಶ್ರೀ ಪುಟ್ಟರಂಗಶೆಟ್ಟಿ ಸಿ (ಚಾಮರಾಜನಗರ) |
| ಉತ್ತರಿಸಬೇಕಾದ ದಿನಾಂಕ | : 18-03-2021 |
| ಉತ್ತರಿಸುವ ಸಚಿವರು | : ಮಾನ್ಯ ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಹಾಗೂ ವೈದ್ಯಕೀಯ ಶಿಕ್ಷಣ ಸಚಿವರು |

| ಕ್ರ.ಸಂ. | ಪ್ರಶ್ನೆ | ಉತ್ತರ |
|---|---|---|
| ಅ | ಚಾಮರಾಜನಗರ ವಿಧಾನಸಭಾ ಕ್ಷೇತ್ರ ವ್ಯಾಪ್ತಿಯಲ್ಲಿ ಬರುವ ವಿವಿಧ ಬಗೆಯ ಸರ್ಕಾರಿ ಆಸ್ಪತ್ರೆಗಳು ಯಾವುವು; ಸದರಿ ಆಸ್ಪತ್ರೆಗಳು ಯಾವ ಯಾವ ಸೌಲಭ್ಯಗಳನ್ನು ಹೊಂದಿವೆ; | ಚಾಮರಾಜನಗರ ವಿಧಾನಸಭಾ ಕ್ಷೇತ್ರ ವ್ಯಾಪ್ತಿಯಲ್ಲಿ ಬರುವ ವಿವಿಧ ಬಗೆಯ ಸರ್ಕಾರಿ ಆಸ್ಪತ್ರೆಗಳು ಈ ಕೆಳಕಂಡಂತಿವೆ:<br>ಪ್ರಾಥಮಿಕ ಆರೋಗ್ಯ ಕೇಂದ್ರಗಳು = 16<br>ಸಮುದಾಯ ಆರೋಗ್ಯ ಕೇಂದ್ರಗಳು = 1<br>ಸಂಚಾರಿ ಆರೋಗ್ಯ ಘಟಕಗಳು = 1<br>ತಾಯಿ ಮತ್ತು ಮಕ್ಕಳ ಆಸ್ಪತ್ರೆ = 1<br>ಜಿಲ್ಲಾ ಆಸ್ಪತ್ರೆ = 1<br>ಸದರಿ ಆಸ್ಪತ್ರೆಗಳಲ್ಲಿ ದೊರೆಯುವ ಸೌಲಭ್ಯಗಳ ವಿವರವನ್ನು **ಅನುಬಂಧ -1**ರಲ್ಲಿ ನೀಡಲಾಗಿದೆ. |
| ಆ | ಅಲ್ಲಿ ಕಾರ್ಯನಿರ್ವಹಿಸುತ್ತಿರುವ ಸಿಬ್ಬಂದಿಗಳ ಸಂಖ್ಯೆ ಎಷ್ಟು; ಸಿಬ್ಬಂದಿಗಳ ಕೊರತೆ ನೀಗಿಸಲು ಸರ್ಕಾರವು ಕೈಗೊಂಡಿರುವ ಕ್ರಮಗಳೇನು; (ಸಂಪೂರ್ಣ ವಿವರ ನೀಡುವುದು) | ಚಾಮರಾಜನಗರ ವಿಧಾನಸಭಾ ಕ್ಷೇತ್ರ ವ್ಯಾಪ್ತಿಯಲ್ಲಿ ಕಾರ್ಯನಿರ್ವಹಿಸುತ್ತಿರುವ ಹಾಗೂ ಕೊರತೆ ಇರುವ ಸಿಬ್ಬಂದಿಗಳ ವಿವರಗಳನ್ನು **ಅನುಬಂಧ-2**ರಲ್ಲಿ ನೀಡಲಾಗಿದೆ. |
| ಇ | ಚಾಮರಾಜನಗರ ಕ್ಷೇತ್ರದ ವ್ಯಾಪ್ತಿಯಲ್ಲಿ ಶಿಥಿಲಾವಸ್ಥೆಯಲ್ಲಿರುವ ಆಸ್ಪತ್ರೆಗಳು ಯಾವುವು; ಅವುಗಳ ಪುನರುಜ್ಜೀವನಕ್ಕೆ / ದುರಸ್ಥಿಗಾಗಿ ಕೈಗೊಂಡಿರುವ ಕ್ರಮಗಳೇನು; (ವಿವರ ನೀಡುವುದು) | ಚಾಮರಾಜನಗರ ಜಿಲ್ಲಾ ವ್ಯಾಪ್ತಿಯಲ್ಲಿರುವ ಶಿಥಿಲಾವಸ್ಥೆಯ ಆಸ್ಪತ್ರೆಗಳು ಯಾವುದು ಇರುವುದಿಲ್ಲ, ಹಾಲಿ ಕಟ್ಟಡ ನಿರ್ವಹಣೆಗಾಗಿ ಜಿಲ್ಲಾ ಪಂಚಾಯತ್‌ನ ಲೆಕ್ಕ ಶೀರ್ಷಿಕೆ:2210-00-101-0-36 ಅಡಿಯಲ್ಲಿ ಆರೋಗ್ಯ ಇಲಾಖೆಯ ಕಟ್ಟಡಗಳ ಹಾಗೂ ಉಪಕೇಂದ್ರಗಳ ದುರಸ್ಥಿಯನ್ನು ಮಾಡಲಾಗುತ್ತದೆ. |
| ಈ | ಇತ್ತೀಚಿನ ದಿನಗಳಲ್ಲಿ ಯುವ ಜನತೆ ಮಾರಣಾಂತಿಕ ಖಾಯಿಲೆಗಳಾದ ಹೃದಯ ಸಂಬಂಧಿ ಖಾಯಿಲೆ, ಕಿಡ್ನಿ ವೈಫಲ್ಯ, ಲೀವರ್ ಸಂಬಂಧಿ ಖಾಯಿಲೆ ಸಹಿತ ವಿವಿಧ ರೀತಿಯ ಕ್ಯಾನ್ಸರ್ ಖಾಯಿಲೆಗಳಿಗೆ ಬಲಿಯಾಗುತ್ತಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; | ಬಂದಿದೆ.<br>ಈ ಎಲ್ಲಾ ಅಸಾಂಕ್ರಾಮಿಕ ರೋಗಗಳನ್ನು ಸಮುದಾಯ ಮಟ್ಟದಲ್ಲಿ ಹೆಚ್ಚವಾಗುತ್ತಿರುವುದನ್ನು ಗಮನಿಸಿ. ರಾಷ್ಟ್ರ ಮಟ್ಟದ ಸಮೀಕ್ಷೆಗಳನ್ನು ಕೈಗೊಂಡು ಎನ್.ಸಿ.ಡಿ ಕಾರ್ಯಕ್ರಮದ ಭಾಗವಾಗಿ ಇವುಗಳನ್ನು ಪರಿಗಣಿಸಿದೆ. ಇತ್ತೀಚಿಗೆ ಲಿವರ್ ಸಂಬಂಧಿ ಕಾಯಿಲೆ (AFLD- Acute Fatty Liver Disease) ಕೂಡ ಎನ್.ಪಿ.ಸಿ.ಡಿ.ಸಿ.ಎಸ್ ಕಾರ್ಯಕ್ರಮದ ಭಾಗವಾಗಿದೆ. |

| ಉ | ಈ ರೀತಿಯ ಖಾಯಿಲೆಗಳಿಗೆ ಬಲಿಯಾಗುತ್ತಿರುವುದಕ್ಕೆ ಕಾರಣವನ್ನು ತಿಳಿದುಕೊಳ್ಳುವುದಕ್ಕಾಗಿ ತಜ್ಞರ ಸಮಿತಿಗಳನ್ನು ಸರ್ಕಾರವು ರಚಿಸಿದೆಯೇ? | ಈ ಕೆಳಗೆ ಉಲ್ಲೇಖಿಸಿದ ಸಮೀಕ್ಷೆಗಳು ಮತ್ತು ವರದಿಗಳನ್ನು ಆಧರಿಸಿ ರಾಷ್ಟ್ರೀಯ ಕಾರ್ಯಕ್ರಮವನ್ನು ರೂಪಿಸಲಾಗಿದೆ. ಮಾಡಲಾಗಿದೆ.<br><br>1. ಅಸಾಂಕ್ರಾಮಿಕ ರೋಗಗಳ ಜಾಗತಿಕ ವಸ್ತುಸ್ಥಿತಿ 2010 (Global Status Report on NCD 2010)<br>2. ವಿಶ್ವ ಆರೋಗ್ಯ ಸಂಸ್ಥೆಯ– ರಾಷ್ಟ್ರೀಯ ವರದಿ 2011. (World Health Organisation NCD 2011)<br>3. ಭಾರತೀಯ ವೈದ್ಯಕೀಯ ಕೌನ್ಸಿಲ್ ಸಂಶೋಧನಾವರದಿ 2006. (Indian Council of Medical Research 2006)<br>4. ಜಾಗತಿಕ ಆರೋಗ್ಯ ಮೌಲ್ಯಮಾಪನ ವರದಿ 2016. (Global Health Observatory Data 2016)<br><br>ಮುಂದುವರೆದು, ರಾಜ್ಯ ಮಟ್ಟದಲ್ಲಿ ತಜ್ಞರ ಸಮಿತಿಯೊಂದನ್ನು ರಚಿಸಿ ಕರ್ನಾಟಕ ರಾಜ್ಯದ ಭೌಗೋಳಿಕ ಅಂಶಗಳು ಮತ್ತು ಜನರ ಜೀವನ ಶೈಲಿ ಮತ್ತು ಹವ್ಯಾಸಗಳ ಅಧ್ಯಯನ ಕೈಗೊಂಡು ಯೋಜಿಸಲು ಈಗಾಗಲೇ ಕ್ರಮವಹಿಸಲಾಗುತ್ತಿದೆ. |

ಆಕುಕ 52 ಎಸ್‌ಬಿವಿ 2021.

(ಡಾ॥ ಕೆ. ಸುಧಾಕರ್)
ಆರೋಗ್ಯ ಮತ್ತು ಕುಟುಂಬ ಕಲ್ಯಾಣ
ಹಾಗೂ ವೈದ್ಯಕೀಯ ಶಿಕ್ಷಣ ಸಚಿವರು

## ಪ್ರಶ್ನೆ ಸಂಖ್ಯೆ:-2652 ಅನುಬಂಧ-1

ಪ್ರಾಥಮಿಕ ಆರೋಗ್ಯ ಕೇಂದ್ರಗಳಲ್ಲಿ ಹೊರರೋಗಿಗಳ ತಪಾಸಣೆ ಹಾಗೂ ಚಿಕಿತ್ಸೆ, ಸಾಮಾನ್ಯ ರೋಗಗಳಿಗೆ ಒಳರೋಗಿ ಚಿಕಿತ್ಸೆ, ಸಾಮಾನ್ಯ ಹೆರಿಗೆ ಹಾಗೂ ಪ್ರಯೋಗಶಾಲಾ ಪರೀಕ್ಷೆಗಳು, ಆರೋಗ್ಯ ಶಿಕ್ಷಣ/ಸಲಹೆ, ರೆಫರಲ್ ಸೇವೆಗಳು ಮುಂತಾದ ಸೌಲಭ್ಯಗಳು ಲಭ್ಯವಿರುತ್ತದೆ. ಇದಲ್ಲದೆ ಎಲ್ಲಾ ರಾಷ್ಟ್ರೀಯ ಆರೋಗ್ಯ ಕಾರ್ಯಕ್ರಮಗಳ ಅನುಷ್ಠಾನವಾಗುತ್ತದೆ.

ಸಮುದಾಯ ಆರೋಗ್ಯ ಕೇಂದ್ರದಲ್ಲಿ ಮೇಲಿನ ಎಲ್ಲಾ ಸೌಲಭ್ಯಗಳ ಜೊತೆಗೆ ತಜ್ಞ ವೈದ್ಯರ ಸೇವೆಗಳು ಸಹ ಲಭ್ಯವಿರುತ್ತದೆ.

ತಾಯಿ ಮತ್ತು ಮಕ್ಕಳ ಆಸ್ಪತ್ರೆಯಲ್ಲಿ ಗರ್ಭಿಣಿಯರ ತಪಾಸಣೆ ಹೆರಿಗೆ ಹಾಗೂ ಹೆರಿಗೆ ನಂತರದ ಚಿಕಿತ್ಸಾ ಸೇವೆ, ನವಜಾತ ಶಿಶುಗಳ ಆರೈಕೆ, ಸಿಝೇರಿಯನ್ ಶಸ್ತ್ರಚಿಕಿತ್ಸೆ ಮತ್ತು ಕುಟುಂಬ ಕಲ್ಯಾಣ ಯೋಜನೆಯ ಕಾರ್ಯಕ್ರಮಗಳ ಅನುಷ್ಠಾನ.

ಸಂಚಾರಿ ಆರೋಗ್ಯ ಘಟಕವು ಹಳ್ಳಿಗಳಿಗೆ ಭೇಟಿ ನೀಡಿ ಹೊರರೋಗಿಗಳ ತಪಾಸಣೆ, ಚಿಕಿತ್ಸೆ ಹಾಗೂ ಸಾಮಾನ್ಯ ಪ್ರಯೋಗಶಾಲಾ ಪರೀಕ್ಷಾ ಸೌಲಭ್ಯಗಳನ್ನು ಹೊಂದಿರುತ್ತದೆ.

ತಾಲ್ಲೂಕು ಆಸ್ಪತ್ರೆಯು ಮೊದಲನೇ ಹಂತದ ರೆಫರಲ್ ಘಟಕವಾಗಿ ಕಾರ್ಯನಿರ್ವಹಿಸುತ್ತಿದ್ದು, ಇಲ್ಲಿ ಹೊರರೋಗಿಗಳ ತಪಾಸಣೆ ಹಾಗೂ ಚಿಕಿತ್ಸೆ, ಸಾಮಾನ್ಯ ರೋಗಗಳಿಗೆ ಒಳರೋಗಿ ಚಿಕಿತ್ಸೆ, ಹೆರಿಗೆ ಸೌಲಭ್ಯ, ಶಸ್ತ್ರಚಿಕಿತ್ಸೆಗಳು ಹಾಗೂ ಪ್ರಯೋಗಶಾಲಾ ಪರೀಕ್ಷೆಗಳು, ಆರೋಗ್ಯ ಶಿಕ್ಷಣ/ಸಲಹೆ, ರೆಫರಲ್ ಸೇವೆಗಳು. ಇದಲ್ಲದೆ ಎಲ್ಲಾ ರಾಷ್ಟ್ರೀಯ ಆರೋಗ್ಯ ಕಾರ್ಯಕ್ರಮಗಳ ಅನುಷ್ಠಾನವಾಗುತ್ತದೆ.

ಜಿಲ್ಲಾ ಆಸ್ಪತ್ರೆಯಲ್ಲಿ ಹೊರರೋಗಿಗಳ ತಪಾಸಣೆ ಹಾಗೂ ಚಿಕಿತ್ಸೆ, ಒಳರೋಗಿ ಚಿಕಿತ್ಸೆ, ಹೆರಿಗೆ ಹಾಗೂ ಪ್ರಯೋಗಶಾಲಾ ಪರೀಕ್ಷೆಗಳು, ಆರೋಗ್ಯ ಶಿಕ್ಷಣ/ಸಲಹೆ, ರೆಫರಲ್ ಸೇವೆಗಳು, ದಂತ ವೈದ್ಯಕೀಯ ಸೌಲಭ್ಯಗಳು, ಪ್ರಯೋಗಾಲಯ ಸೌಲಭ್ಯ, ಎಕ್ಸರೇ, ಇಸಿಜಿ, ಆಂಬುಲೆನ್ಸ್ ಸೌಲಭ್ಯ, ಹಾಗೂ ಎನ್.ಸಿ.ಡಿ. ಕ್ಲಿನಿಕ್ ಮತ್ತು ಎಲ್ಲಾ ರಾಷ್ಟ್ರೀಯ ಆರೋಗ್ಯ ಕಾರ್ಯಕ್ರಮಗಳ ಸೌಲಭ್ಯಗಳನ್ನು ಮಾರ್ಗಸೂಚಿಗಳನ್ವಯ ನೀಡಲಾಗುವುದು.

ಜಿಲ್ಲಾ ಆರೋಗ್ಯ ಮತ್ತು ಕುಟುಂಬ ಕಲ್ಯಾಣಾಧಿಕಾರಿಗಳ ಕಛೇರಿ, ಚಾಮರಾಜನಗರ ಜಿಲ್ಲೆ, ಚಾಮರಾಜನಗರ ಇಲ್ಲಿನ ಮಂಜೂರು ಕಾರ್ಯನಿರತ ಖಾಲಿ ಹುದ್ದೆಗಳ ಮಾಹಿತಿ

(ಗ್ರೂಪ್ ಎ.ಬಿ.ಸಿ ಮತ್ತು ಡಿ ವೃಂದ)

| ಕ್ರ.ಸಂ | ಹುದ್ದೆಯ ಹೆಸರು | ಮಂಜೂರಾದ ಹುದ್ದೆ | ಭರ್ತಿಯಾದ ಹುದ್ದೆ | ಖಾಲಿ ಹುದ್ದೆ | ಷರಾ |
|---|---|---|---|---|---|
| 1 | ಜಿಲ್ಲಾ ಆರೋಗ್ಯ ಮತ್ತು ಕುಟುಂಬ ಕಲ್ಯಾಣಾಧಿಕಾರಿಗಳು | 1 | 1 | 0 | |
| 2 | ಜಿಲ್ಲಾ ಕಾರ್ಯಕ್ರಮ ಅಧಿಕಾರಿಗಳು | 6 | 6 | 0 | |
| 3 | ತಾಲ್ಲೂಕು ಆರೋಗ್ಯಾಧಿಕಾರಿ | 4 | 4 | 0 | |
| 4 | ಸಾಮಾನ್ಯ ಕರ್ತವ್ಯ ವೈದ್ಯಾಧಿಕಾರಿಗಳು | 64 | 61 | 3 | |
| 5 | ತಜ್ಞ ವೈದ್ಯರು | 47 | 35 | 12 | |
| 6 | ದಂತ ಆರೋಗ್ಯಧಿಕಾರಿಗಳು | 6 | 4 | 2 | |
| 7 | ಸಹಾಯಕ ಆಡಳಿತಾಧಿಕಾರಿ | 4 | 4 | 0 | |
| 8 | ಜಿಲ್ಲಾ ಆರೋಗ್ಯ ಶಿಕ್ಷಣಾಧಿಕಾರಿ | 1 | 0 | 1 | |
| 9 | ಜಿಲ್ಲಾ ಶುಶ್ರೂಷಣಾ ಅಧಿಕಾರಿ | 1 | 0 | 1 | |
| 10 | ಸಹಾಯಕ ಎಂಟಮೊಲಜಿಸ್ಟ್ | 2 | 0 | 2 | |
| 11 | ಸರ್ವೀಸ್ ಇಂಜಿನಿಯರ್ | 1 | 0 | 1 | |
| 12 | ಶುಶ್ರೂಷಕ ಅಧಿಕ್ಷಕರು ಗ್ರೇಡ್ –1 | 1 | 0 | 1 | |
| | | 138 | 115 | 23 | |
| 1 | ಉಪ ಆರೋಗ್ಯ ಶಿಕ್ಷಣಾಧಿಕಾರಿ | 1 | 0 | 1 | |
| 2 | ಸಹಾಯಕ ಸಾಂಖ್ಯಿಕ ಅಧಿಕಾರಿ | 2 | 1 | 1 | |
| 3 | ಕಛೇರಿ ಅಧೀಕ್ಷಕರು | 7 | 7 | 0 | |
| 4 | ಶುಶ್ರೂಷಕರು ಗ್ರೇಡ್ –2 | 3 | 0 | 3 | |
| 5 | ಹಿರಿಯ ಶುಶ್ರೂಷಕರು | 3 | 2 | 1 | |
| 6 | ಶುಶ್ರೂಷಕರು | 123 | 116 | 7 | |
| 7 | ಆರೋಗ್ಯ ಮೇಲ್ವಿಚಾರಕರು | 2 | 1 | 1 | |
| 8 | ಪ್ರಥಮ ದರ್ಜೆ ಸಹಾಯಕರು | 59 | 12 | 47 | |
| 9 | ದ್ವಿತೀಯ ದರ್ಜೆ ಸಹಾಯಕರು | 37 | 17 | 20 | |
| 10 | ಸಹಾಯಕ ಹಾಗೂ ಬೆರಳಚ್ಚುಗಾರರು | 2 | 0 | 2 | |
| 11 | ಕ್ಷೇತ್ರ ಆರೋಗ್ಯ ಶಿಕ್ಷಕ | 18 | 1 | 17 | |
| 12 | ಹಿರಿಯ ಪುರುಷ ಆರೋಗ್ಯ ಸಹಾಯಕ | 34 | 13 | 21 | |
| 13 | ಹಿರಿಯ ಮಹಿಳಾ ಆರೋಗ್ಯ ಸಹಾಯಕಿ | 33 | 7 | 26 | |
| 14 | ಕಿರಿಯ ಪುರುಷ ಆರೋಗ್ಯ ಸಹಾಯಕ | 103 | 16 | 87 | |
| 15 | ಕಿರಿಯ ಮಹಿಳಾ ಆರೋಗ್ಯ ಸಹಾಯಕಿ | 262 | 100 | 162 | |
| 16 | ಹಿರಿಯ ಫಾರ್ಮಾಸಿಸ್ಟ್ | 6 | 0 | 6 | |
| 17 | ಕಿರಿಯ ಫಾರ್ಮಾಸಿಸ್ಟ್ | 70 | 18 | 52 | |
| 18 | ಹಿರಿಯ ಪ್ರಯೋಗ ಶಾಲಾ ತಂತ್ರಜ್ಞರು | 8 | 5 | 3 | |
| 19 | ಕಿರಿಯ ಪ್ರಯೋಗ ಶಾಲಾ ತಂತ್ರಜ್ಞರು | 60 | 21 | 39 | |
| 20 | ಕಿರಿಯ ವೈದ್ಯೇತರ ಕಾರ್ಯಕರ್ತರು | 6 | 0 | 6 | |
| 21 | ಫಿಜಿಯೋಥೆರಪಿಸ್ಟ್ ( ಸಾಮಾನ್ಯ ) | 1 | 1 | 0 | |
| 22 | ಲೆಪ್ರೋಸಿ ಫಿಜಿಯೋಥೆರಪಿಸ್ಟ್ | 1 | 0 | 1 | |
| 23 | ಹಿರಿಯ ವೈದ್ಯೇತರ ಮೇಲ್ವಿಚಾರಕರು | 2 | 0 | 2 | |
| 24 | ಬೆರಳಚ್ಚುಗಾರರು | 4 | 1 | 3 | |
| 25 | ಶೀಘ್ರಲಿಪಿಗಾರರು | 1 | 0 | 1 | |
| 26 | ನೇತ್ರ ಸಹಾಯಕರು | 11 | 9 | 2 | |

| | | | | | |
|---|---|---|---|---|---|
| 27 | ಕ್ಷ-ಕಿರಣ ತಂತ್ರಜ್ಞ | 12 | 12 | 0 | |
| 28 | ವಾಹನ ಚಾಲಕರು | 41 | 14 | 27 | |
| 29 | ಸಾಮಾಜಿಕ ಕಾರ್ಯಕರ್ತರು | 1 | 0 | 1 | |
| 30 | ಡೆಂಟಲ್ ಮೆಕಾನಿಕ್ | 1 | 0 | 1 | |
| | | 914 | 374 | 540 | |
| 31 | ಗ್ರೂಪ್.ಡಿ | 301 | 52 | 249 | |
| | | 301 | 52 | 249 | |
| | ಒಟ್ಟು | 1353 | 541 | 812 | |

ಸಹಾಯಕ ಆಡಳಿತಾಧಿಕಾರಿ
ಜಿಲ್ಲಾ ಆರೋಗ್ಯ ಮತ್ತು ಕುಟುಂಬ
ಕಲ್ಯಾಣ ಕಛೇರಿ, ಚಾಮರಾಜನಗರ

# ಕರ್ನಾಟಕ ವಿಧಾನ ಸಭೆ

ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 2790
ಸದಸ್ಯರ ಹೆಸರು : ಶ್ರೀ ಶಿವಾನಂದ ಎಸ್.ಪಾಟೀಲ್ (ಬಸವನಬಾಗೇವಾಡಿ)
ಉತ್ತರಿಸಬೇಕಾದ ದಿನಾಂಕ : 18.03.2021
ಉತ್ತರಿಸುವ ಸಚಿವರು : ಪ್ರಾಥಮಿಕ ಮತ್ತು ಪ್ರೌಢ ಶಿಕ್ಷಣ ಸಚಿವರು

| ಕ್ರ.ಸ | ಪ್ರಶ್ನೆ | ಉತ್ತರ |
|---|---|---|
| ಅ) | ಬಸವನಬಾಗೇವಾಡಿ ವಿಧಾನಸಭಾ ಮತಕ್ಷೇತ್ರದಲ್ಲಿ ಅಪಾಯ ಸ್ಥಿತಿಯಲ್ಲಿರುವ/ ಶಿಥಿಲಾವಸ್ಥೆಯಲ್ಲಿರುವ ಸರ್ಕಾರಿ ಪ್ರಾಥಮಿಕ ಶಾಲೆಗಳ ಕೊಠಡಿಗಳ ಸಂಖ್ಯೆ ಎಷ್ಟು; (ಶಾಲಾವಾರು ವಿವರ ನೀಡುವುದು) | ಬಸವನಬಾಗೇವಾಡಿ ವಿಧಾನ ಸಭಾ ಮತಕ್ಷೇತ್ರದಲ್ಲಿ 54 ಶಾಲೆಗಳ 84 ಕೊಠಡಿಗಳು ಶಿಥಿಲಾವಸ್ಥೆಯಲ್ಲಿರುತ್ತವೆ. (ವಿವರವನ್ನು ಅನುಬಂಧ-1 ರಲ್ಲಿ ಒದಗಿಸಲಾಗಿದೆ) |
| ಆ) | ಅವುಗಳನ್ನು ತೆರವುಗೊಳಿಸಿ ಆ ಸ್ಥಳಗಳಲ್ಲಿ ಹೊಸ ಕೊಠಡಿಗಳನ್ನು ನಿರ್ಮಿಸಲು ಸರ್ಕಾರದಿಂದ ಯಾವ ಕ್ರಮ ಕೈಗೊಳ್ಳಲಾಗಿದೆ; | ಮಕ್ಕಳ ಸಂಖ್ಯೆಗೆ ಮತ್ತು ಅಗತ್ಯತೆಗನುಗುಣವಾಗಿ ಹೊಸ ಕೊಠಡಿಗಳನ್ನು ನಿರ್ಮಿಸಲು ಅಗತ್ಯ ಕ್ರಮ ಕೈಗೊಳ್ಳಲಾಗುವುದು. |
| ಇ) | ಸರ್ಕಾರದಿಂದ ಪ್ರತಿ ವರ್ಷ ಎಷ್ಟು ಕೊಠಡಿಗಳನ್ನು ತೆರವುಗೊಳಿಸಿ, ಆ ಸ್ಥಳದಲ್ಲಿ ಹೊಸ ಕೊಠಡಿಗಳನ್ನು ನಿರ್ಮಿಸುವ ಗುರಿ ಹೊಂದಲಾಗಿದೆ? (ವಿವರ ನೀಡುವುದು) | ರಾಜ್ಯದಲ್ಲಿ ನೂತನ ಶಾಲಾ ಕಟ್ಟಡಗಳನ್ನು ನಿರ್ಮಾಣ ಮಾಡಲು ಸರ್ಕಾರಿ ಪ್ರಾಥಮಿಕ ಮತ್ತು ಪ್ರೌಢ ಶಾಲೆಗಳಿಗೆ ಕಳೆದ ಮೂರು ವರ್ಷಗಳಲ್ಲಿ ಬಿಡುಗಡೆಯಾದ ಅನುದಾನದ ವಿವರ ಈ ಕೆಳಕಂಡತಿದೆ. (ರೂ.ಲಕ್ಷಗಳಲ್ಲಿ) |

| ವರ್ಷ | ಶಾಲೆಗಳ ಸಂಖ್ಯೆ | ಕೊಠಡಿಗಳ ಸಂಖ್ಯೆ | ಬಿಡುಗಡೆಂ ಮಾದಅನುದಾನ |
|---|---|---|---|
| 2017-18 | 1021 | 1299 | 13038.72 |
| 2018-19 | 1909 | 2966 | 17445.68 |
| 2019-20 | 632 | 973 | 21982.67 |
| 2020-21 | 1006 | 1484 | 18000.00 |
| **ಒಟ್ಟು** | **4568** | **6722** | **70467.07** |

2021-22ನೇ ಸಾಲಿನ ಆಯವ್ಯಯದಲ್ಲಿ ಸರ್ಕಾರಿ ಶಾಲೆಗಳ ಮೂಲಭೂತ ಸೌಕರ್ಯಗಳಿಗೆ ಒದಗಿಸಲಾಗುವ ಅನುದಾನದ ಮಿತಿಯಲ್ಲಿ ಅಗತ್ಯತೆಗನುಗುಣವಾಗಿ ಹಂತಹಂತವಾಗಿ ಶಾಲಾ ಕಟ್ಟಡ ನಿರ್ಮಾಣಕ್ಕೆ ಅಗತ್ಯ ಕ್ರಮ ಕೈಗೊಳ್ಳಲಾಗುತ್ತದೆ.

ಇಪಿ: 67 ಯೋಸಕ 2021

(ಎಸ್.ಸುರೇಶ್ ಕುಮಾರ್)
ಪ್ರಾಥಮಿಕ ಮತ್ತು ಪ್ರೌಢ ಶಿಕ್ಷಣ ಸಚಿವರು

ಅನುಬಂಧ-1

# ಅಪರ ಆಯುಕ್ತರ ಕಚೇರಿ ಸಾರ್ವಜನಿಕ ಶಿಕ್ಷಣ ಇಲಾಖೆ ಧಾರವಾಡ

## ಅಪಾಯ ಸ್ಥಿತಿಯಲ್ಲಿರುವ/ ಶಿಥಿಲಗೊಂಡಿರುವ ಕೊಠಡಿಗಳ ಶಾಲೆಗಳ ಮಾಹಿತಿ

| ಅನು | ತಾಲೂಕಾ ಹೆಸರು | ಕ್ಲಸ್ಟರ ಹೆಸರು | ಶಾಲೆಯ ಹೆಸರು | ಡೈಸ್ ಕೋಡ್ | ಮಕ್ಕಳ ಸಂಖ್ಯೆ | ಅಪಾಯ ಸ್ಥಿತಿಯಲ್ಲಿರುವ/ಶಿಥಿಲಗೊಂಡಿರುವ/ಕೊಠಡಿಗಳು |
|---|---|---|---|---|---|---|
| 3 | BASAVAN BAGEWADI (290303) | BASAVANA BAGEWADI (2903030340) | GOVT KBHPS B BAGEWADI LT NO.4 (29030323901) | (29030323901) | 189 | 1 |
| 4 | BASAVAN BAGEWADI (290303) | BASAVANA BAGEWADI (2903030340) | GOVT KGMPS B BAGEWADI (29030324704) | (29030324704) | 422 | 3 |
| 5 | BASAVAN BAGEWADI (290303) | BASAVANA BAGI WADI NO. 1 (2903030346) | GOVT K.B.H.P.S BASAVANAHATTI (29030324301) | (29030324301) | 171 | 1 |
| 6 | BASAVAN BAGEWADI (290303) | BASAVANA BAGI WADI NO. 1 (2903030346) | GOVT KBHPS JALHAL LT (29030323902) | (29030323902) | 76 | 1 |
| 7 | BASAVAN BAGEWADI (290303) | BASAVANA BAGI WADI NO. 1 (2903030346) | GOVT KBHPS BALLAVUR (29030305114) | (29030305114) | 44 | 1 |
| 8 | BASAVAN BAGEWADI (290303) | BASAVANA BAGEWADI URDU (2903030042) | GOVT URDU HPS GURUJIKATTI BAGEWADI (29030324703) | (29030324703) | 83 | 3 |
| 9 | BASAVAN BAGEWADI (290303) | BASAVANA BAGEWADI URDU (2903030042) | GOVT URDU HPS TAKKALAKI (29030311402) | (29030311402) | 62 | 1 |
| 10 | BASAVAN BAGEWADI (290303) | DONUR (2903030067) | GOVT KBHPS BISANAL (29030302001) | (29030302001) | 204 | 2 |
| 11 | BASAVAN BAGEWADI (290303) | DONUR (2903030067) | GOVT KBHPS BOMMANAHALLI (29030302101) | (29030302101) | 183 | 1 |
| 12 | BASAVAN BAGEWADI (290303) | DONUR (2903030067) | GOVT KBHPS DONUR (29030303101) | (29030303101) | 189 | 3 |
| 13 | BASAVAN BAGEWADI (290303) | DONUR (2903030067) | GOVT KBHPS MARKABBINAHALLI (29030307803) | (29030307803) | 262 | 3 |
| 14 | BASAVAN BAGEWADI (290303) | DONUR (2903030067) | GOVT KBMPS YAMBTANAL (29030312401) | (29030312401) | 257 | 2 |
| 15 | BASAVAN BAGEWADI (290303) | GOLASANGI (2903030075) | GOVT KBHPS KUDAGI LT (29030306904) | (29030306904) | 159 | 2 |
| 18 | BASAVAN BAGEWADI (290303) | INGALESHWAR (2903030119) | GOVT MPS INGALESHWAR (29030305101) | (29030305101) | 161 | 5 |
| 22 | BASAVAN BAGEWADI (290303) | KOLHAR (2903030195) | GOVT HPS NAGARADINNI (29030308801) | (29030308801) | 77 | 3 |
| 23 | BASAVAN BAGEWADI (290303) | KOLHAR URDU (2903030041) | GOVT URDU HPS KUDAGI (29030306902) | (29030306902) | 151 | 3 |
| 24 | BASAVAN BAGEWADI (290303) | MANAGULI (2903030217) | GOVT HPS BHIMNAGAR MANAGULI (29030307507) | (29030307507) | 83 | 2 |
| 25 | BASAVAN BAGEWADI (290303) | MANAGULI (2903030217) | GOVT MPS NANDIHAL PU (29030309301) | (29030309301) | 308 | 5 |
| 26 | BASAVAN BAGEWADI (290303) | MANAGULI NO. 2 (2903030353) | GOVT KBHPS UKKALI LT (29030311704) | (29030311704) | 236 | 1 |
| 27 | BASAVAN BAGEWADI (290303) | MANAGULI URDU (2903030341) | GOVT URDU HPS DONUR (29030303102) | (29030303102) | 61 | 2 |
| 28 | BASAVAN BAGEWADI (290303) | MULAWAD (2903030240) | GOVT LPS JANATA COLONY MULAWAD (29030308406) | (29030308406) | 66 | 1 |
| 29 | BASAVAN BAGEWADI (290303) | NIDAGUNDI URDU (2903030352) | GOVT URDU LPS WANDAL (29030312204) | (29030312204) | 5 | 2 |
| 30 | BASAVAN BAGEWADI (290303) | RONIHAL (2903030347) | GOVT HIGH SCHOOL RMSA KUPAKADDI (29030307001) | (29030307001) | 340 | 1 |

| | | | | | | |
|---|---|---|---|---|---|---|
| 31 | BASAVAN BAGEWADI (290303) | RONIHAL (2903030347) | GOVT KBHPS CHIKKA ASANGI (29030301002) | (29030301002) | 286 | 4 |
| 32 | BASAVAN BAGEWADI (290303) | RONIHAL (2903030347) | GOVT KBHPS GARASANGI BK (29030303301) | (29030303301) | 125 | 3 |
| 33 | BASAVAN BAGEWADI (290303) | RONIHAL (2903030347) | GOVT KBHPS HALLADAGENNUR (29030304101) | (29030304101) | 223 | 2 |
| 34 | BASAVAN BAGEWADI (290303) | RONIHAL (2903030347) | GOVT KBHPS MALAGHAN (29030322702) | (29030322702) | 350 | 4 |
| 35 | BASAVAN BAGEWADI (290303) | TELAGI (2903030295) | GOVT KBHPS KURUBARDINNI (29030307101) | (29030307101) | 50 | 1 |
| 36 | BASAVAN BAGEWADI (290303) | TELAGI (2903030295) | GOVT KBHPS MASUTI (29030308001) | (29030308001) | 151 | 3 |
| 37 | BASAVAN BAGEWADI (290303) | TELAGI (2903030295) | GOVT KBHPS TADALGI (29030311301) | (29030311301) | 135 | 2 |
| 38 | BASAVAN BAGEWADI (290303) | TELAGI (2903030295) | GOVT KBHPS TELAGI (29030311601) | (29030311601) | 512 | 2 |
| 39 | BASAVAN BAGEWADI (290303) | TELAGI (2903030295) | GOVT KBLPS CHIRALADINNI (29030302601) | (29030302601) | 72 | 1 |
| 40 | BASAVAN BAGEWADI (290303) | TELAGI (2903030295) | GOVT KBLPS SULAKHOD (29030311201) | (29030311201) | 59 | 1 |
| 41 | BASAVAN BAGEWADI (290303) | TELAGI (2903030295) | GOVT KGHPS MASUTI (29030308005) | (29030308005) | 172 | 2 |
| 45 | BASAVAN BAGEWADI (290303) | WANDAL (2903030349) | GOVT KBHPS WANDAL (29030312201) | (29030312201) | 245 | 3 |
| 49 | BASAVAN BAGEWADI | MUTTAG | GOVT KBHPS NAGUR (29030309201) | (29030309201) | 219 | 2 |
| 50 | BASAVAN BAGEWADI | MUTTAG | GOVT KBHPS UPPALADINNI LT (29030311901) | (29030311901) | 216 | 1 |
| 51 | BASAVAN BAGEWADI | MUTTAG | GOVT KGS MUTTAGI (29030308602) | (29030308602) | 145 | 1 |
| 52 | BASAVAN BAGEWADI | MUTTAG | GOVT L.P.S BINGEPPANAHALLI (29030309208) | (29030309208) | 65 | 1 |
| 53 | BASAVAN BAGEWADI | MUTTAG | GOVT LPS UPPALADINNI (29030311902) | (29030311902) | 61 | 1 |
| 54 | BASAVAN BAGEWADI | MUTTAG | GOVT MPS MUTTAGI (29030308601) | (29030308601) | 107 | 1 |
| | TOTAL | | | | 6982 | 84 |

ಅಪರ ಆಯುಕ್ತರು
ಸಾರ್ವಜನಿಕ ಶಿಕ್ಷಣ ಇಲಾಖೆ
ಧಾರವಾಡ

# ಕರ್ನಾಟಕ ವಿಧಾನ ಸಭೆ

| | | |
|---|---|---|
| ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ | : | 2633 |
| ಸದಸ್ಯರ ಹೆಸರು | : | ಶ್ರೀ ಸುರೇಶ್ ಗೌಡ (ನಾಗಮಂಗಲ) |
| ಉತ್ತರಿಸಬೇಕಾದ ದಿನಾಂಕ | : | 18.03.2021 |
| ಉತ್ತರಿಸುವ ಸಚಿವರು | : | ಪ್ರಾಥಮಿಕ ಮತ್ತು ಪ್ರೌಢ ಶಿಕ್ಷಣ ಸಚಿವರು |

| ಕ್ರಸ | ಪ್ರಶ್ನೆ | ಉತ್ತರ |
|---|---|---|
| ಅ) | ನಾಗಮಂಗಲದಲ್ಲಿರುವ ಗುರುಭವನ ಹಾಗೂ ಅದರ ಆಸ್ತಿ ಸರ್ಕಾರಿ ಸ್ವಾಮ್ಯಕ್ಕೆ ಅಥವಾ ಖಾಸಗಿ ಸಂಘ-ಸಂಸ್ಥೆಗಳ ಒಡೆತನಕ್ಕೆ ಸೇರಿದೆಯೇ; (ವಿವರ ನೀಡುವುದು) | ನಾಗಮಂಗಲ ತಾಲ್ಲೂಕು ಗುರುಭವನವು ಖಾಸಗಿ ಸ್ವಾಮ್ಯಕ್ಕೆ ಒಳಪಟ್ಟಿಲ್ಲ. ಮೂಲತಃ ನಿವೇಶನವು ಅಂದಿನ ಸಹಾಯಕ ಶಿಕ್ಷಣಾಧಿಕಾರಿಗಳ ಹೆಸರಿಗೆ ಮಂಜೂರಾಗಿದ್ದು, ನಂತರ ಶಿಕ್ಷಕರ ವೇತನದಿಂದ ವಂತಿಗೆ ಸಂಗ್ರಹಿಸಿ ಸಹಾಯಕ ಶಿಕ್ಷಣಾಧಿಕಾರಿಗಳ ನೇತ್ರತ್ವದಲ್ಲಿ ಕಟ್ಟಡ ನಿರ್ಮಿಸಲಾಗಿರುತ್ತದೆ. ಲಭ್ಯವಿರುವ ಇಲಾಖಾ ಸುತ್ತೋಲೆ, ಚಾಲ್ತಿಯಲ್ಲಿರುವ ಸರ್ಕಾರ/ಇಲಾಖಾ ಆದೇಶದಂತೆ ಸರ್ಕಾರಿ ಸ್ವಾಮ್ಯಕ್ಕೆ ಒಳಪಟ್ಟಿದೆ |
| ಆ) | ಈ ಗುರುಭವನದ ಆಸ್ತಿಯನ್ನು ಖಾಸಗಿ ಸಂಸ್ಥೆಯವರು ದುರುಪಯೋಗಪಡಿಸಿಕೊಳ್ಳುತ್ತಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; ಬಂದಿದ್ದಲ್ಲಿ, ಆ ಬಗ್ಗೆ ಕೈಗೊಂಡ ಕ್ರಮಗಳೇನು; | ನಾಗಮಂಗಲ ಪುರಸಭಾ ವ್ಯಾಪ್ತಿಯಲ್ಲಿರುವ 100x120 ವಿಸ್ತೀರ್ಣದ ಭೂಪ್ರದೇಶವನ್ನು ಅಂದಿನ ಸಹಾಯಕ ಶಿಕ್ಷಣಾಧಿಕಾರಿಗಳ ಹೆಸರಿಗೆ ಸ್ಪೆಷಲ್ ಡೆಪ್ಯೂಟಿ ಕಮಿಷನರ್ ಮಂಡ್ಯ ರವರ ಆದೇಶ ಸಂಖ್ಯೆ ;ಎಲ್ಎನ್ ಡಿ 11 ಸಿ ಆರ್ 29/1982-83 ದಿನಾಂಕ 04.08.1983ರಲ್ಲಿ ಮಂಜೂರು ಮಾಡಲಾಗಿರುತ್ತದೆ.<br>ಸದರಿ ನಿವೇಶನವನ್ನು ತಹಶೀಲ್ದಾರ್ ನಾಗಮಂಗಲ ರವರ ಪ.ಸಂಖ್ಯೆ:ಎಲ್ಎನ್ ಡಿ/ಸಿ.ಆರ್4/1992-93 ದಿನಾಂಕ 13.09.1983 ರಲ್ಲಿ ಸಹಾಯಕ ಶಿಕ್ಷಣಾಧಿಕಾರಿಗಳ ಸುಪರ್ದಿಗೆ ನೀಡಿರುತ್ತಾರೆ.<br>"ಅಧ್ಯಕ್ಷರು ಹಾಗು ಶಿಕ್ಷಣಾಧಿಕಾರಿಗಳು ಶಿಕ್ಷಕರ ಭವನ' ಹೆಸರಿಗೆ ನಾಗಮಂಗಲ ಪುರಸಭಾ ವ್ಯಾಪ್ತಿಯ ಸರ್ವೆ ನಂ;278ರಲ್ಲಿನ ಮುನಿಸಿಪಲ್ ಅಸೆಸ್ಮೆಂಟ್ ನಂ;2690/2459 ರಲ್ಲಿ ನಿವೇಶನವು ಸಮಿತಿಗೆ ನೋಂದಣಿಯಾಗಿದೆ. ನಾಗಮಂಗಲ ಪುರಸಭೆಯ ಮುಖ್ಯಾಧಿಕಾರಿಗಳು ನೋಂದಣಿ ವಹಿಯ (ಬುಕ್ ನಂ7, ಪುಟ ಸಂಖ್ಯೆ 72)ರ ದೃಢೀಕೃತ ನಕಲು ನೀಡಿರುತ್ತಾರೆ. ಅದರಂತೆ ಗುರುಭವನದ ಆಸ್ತಿಯು ಸರ್ಕಾರದ ಆಸ್ತಿಯೇ ಆಗಿರುತ್ತದೆ.<br>ಅಂದಿನ ಶಿಕ್ಷಣಾಧಿಕಾರಿಗಳು ಪ್ರಾಥಮಿಕ |

| | | |
|---|---|---|
| | | ಶಾಲಾ ಶಿಕ್ಷಕರ ಪ್ರತಿನಿಧಿಗಳ ಮನವೊಲಿಸಿ, ಆಸಕ್ತ ಪ್ರಾಥಮಿಕ ಶಾಲಾ ಶಿಕ್ಷಕರಿಂದ ವೇತನದಲ್ಲಿ ದೇಣಿಗೆಯನ್ನು ಕಟಾಯಿಸಿ, ಶಿಕ್ಷಣಾಧಿಕಾರಿಗಳ ನೇತೃತ್ವದಲ್ಲಿ ಗುರುಭವನ ನಿರ್ಮಿಸಿರುತ್ತಾರೆ.<br>ಆರಂಭದಿಂದಲೂ ಅಧ್ಯಕ್ಷರು ಹಾಗೂ ಶಿಕ್ಷಣಾಧಿಕಾರಿಗಳು ಶಿಕ್ಷಕರ ಭವನ ರವರು ತಮ್ಮ ವ್ಯಾಪ್ತಿಯಲ್ಲಿ ಬರುವ ಶಿಕ್ಷಕರ ಸಹಕಾರದೊಂದಿಗೆ ಗುರುಭವನ ನಿರ್ವಹಣೆಗೆ ಕ್ಷೇತ್ರ ಶಿಕ್ಷಣಾಧಿಕಾರಿಗಳ ಅಧ್ಯಕ್ಷತೆಯಲ್ಲಿ ಪ್ರಾಥಮಿಕ ಶಾಲಾ ಶಿಕ್ಷಕರ ಸಂಘದ ಪದಾಧಿಕಾರಿಗಳನ್ನೊಳಗೊಂಡಂತೆ ಸಮಿತಿಯೊಂದನ್ನು ರಚಿಸಿಕೊಂಡು ಗುರುಭವನ ನಿರ್ವಹಣೆ ಮಾಡಿಕೊಂಡು ಬರಲಾಗುತಿತ್ತು.<br>ದಿನಾಂಕ 11.09.2014 ರಂದು ಶಿಕ್ಷಣ ಇಲಾಖೆಯ ಮಾರ್ಗಸೂಚಿಯಂತೆ ಪ್ರೌಢಶಾಲಾ ಹಾಗೂ ಪ್ರಾಥಮಿಕ ಶಾಲಾ ಶಿಕ್ಷಕರನ್ನೊಳಗೊಂಡಂತೆ ತಾಲ್ಲೂಕು ಗುರುಭವನ ಸಮಿತಿಯನ್ನು ಪುನಃ ರಚಿಸಲು ಸಭೆ ನಡೆಸಿದಾಗ, ಪ್ರೌಢಶಾಲಾ ಶಿಕ್ಷಕರನ್ನು ಸಮಿತಿಯ ಸದಸ್ಯರನ್ನಾಗಿ ಸೇರ್ಪಡೆಗೊಳಿಸಲು ಪ್ರಾಥಮಿಕ ಶಾಲಾ ಸಂಘದವರು ನಿರಾಕರಿಸಿರುತ್ತಾರೆ ಹಾಗೂ ಗುರುಭವನವು ಪ್ರಾಥಮಿಕ ಶಾಲಾ ಶಿಕ್ಷಕರ ಸಂಘದ ಆಸ್ತಿಯೆಂದು ಪ್ರತಿಪಾದಿಸಿರುತ್ತಾರೆ. ಈ ಕ್ರಮವನ್ನು ಕ್ಷೇತ್ರಶಿಕ್ಷಣಾಧಿಕಾರಿಗಳು ಆಕ್ಷೇಪಿಸಿ, ಇಲಾಖೆಗೆ ವರದಿ ಮಾಡಿರುತ್ತಾರೆ.<br>ಮುಂದುವರೆದು ನಾಗಮಂಗಲ ತಾಲ್ಲೂಕು ಸರ್ಕಾರಿ ಪ್ರಾಥಮಿಕ ಶಾಲಾ ಶಿಕ್ಷಕರ ಭವನ ಸಮಿತಿ" ಎಂಬ ಹೊಸ ಸಮಿತಿಯನ್ನು ರಚಿಸಿಕೊಂಡು ಗುರುಭವನದ ನಿವೇಶನವನ್ನು ಸಮಿತಿಯ ಹೆಸರಿಗೆ ಅಕ್ರಮವಾಗಿ ವರ್ಗಾಯಿಸಿಕೊಂಡಿರುತ್ತಾರೆ. ಇಲಾಖಾ ವತಿಯಿಂದ ಇದನ್ನು ಆಕ್ಷೇಪಿಸಲಾಗಿ ಈ ಸಂಬಂಧ ಮುಖ್ಯಾಧಿಕಾರಿಗಳು ಪುರಸಭೆರವರು ಖಾತೆ ವರ್ಗಾಯಿಸಿಕೊಂಡಿರುವುದು ಸಕ್ರಮವಾಗಿಲ್ಲ ಎಂದು ದೃಢೀಕರಿಸಿರುತ್ತಾರೆ.<br>ಈ ಬಗ್ಗೆ ಅಕ್ರಮವಾಗಿ ಸಮಿತಿಯ ಹೆಸರಿಗೆ ಗುರುಭವನ ನಿವೇಶನವನ್ನು ವರ್ಗಾಯಿಸಿಕೊಂಡಿರುವುದನ್ನು ಆಕ್ಷೇಪಿಸಿ ನಾಗಮಂಗಲ ತಾಲ್ಲೂಕು ಪ್ರಾಥಮಿಕ ಶಾಲಾ ಶಿಕ್ಷಕರ ಭವನ ಸಮಿತಿಯ ಅಧ್ಯಕ್ಷರು ಮತ್ತು ಕಾರ್ಯದರ್ಶಿಯ ವಿರುದ್ಧ ಇಲಾಖೆ ಕಾನೂನು ಕ್ರಮ ಕೈಗೊಳ್ಳಲು ಮುಂದಾದಾಗ ಇದನ್ನು ಪ್ರಶ್ನಿಸಿ ನಾಗಮಂಗಲ ತಾಲ್ಲೂಕು ಸರ್ಕಾರಿ ಪ್ರಾಥಮಿಕ |

| | | |
|---|---|---|
| | | ಶಾಲಾ ಶಿಕ್ಷಕರ ಭವನ ಸಮಿತಿ ಅಧ್ಯಕ್ಷರು/ಕಾರ್ಯದರ್ಶಿಯವರು ಘನ ಉಚ್ಚನ್ಯಾಯಾಲಯ ಬೆಂಗಳೂರು ಇಲ್ಲಿ ದಾವೆ ಸಂಖ್ಯೆ: WP 57867-57871/2015 ರಂತೆ ಮತ್ತು IA57867-57871/2015ರಂತೆ ದಾವೆ ಹೂಡಿರುತ್ತಾರೆ.<br>ಪ್ರಕರಣವು ನ್ಯಾಯಾಲಯದ ಹಂತದಲ್ಲಿದೆ. |
| ಇ) | ಗುರುಭವನದ ಆಸ್ತಿ ವಿಚಾರದಲ್ಲಿ ವ್ಯಾಜ್ಯವಿದ್ದಲ್ಲಿ, ಅದನ್ನು ಇತ್ಯರ್ಥಪಡಿಸಲು ಸರ್ಕಾರವು ಕೈಗೊಂಡ ಕ್ರಮಗಳೇನು; ಖಾಸಗಿ ಸಂಸ್ಥೆಯವರ ಜೊತೆ ಶಾಮೀಲಾಗಿರುವ ಅಧಿಕಾರಿಗಳ ವಿರುದ್ಧ ಯಾವ ಕ್ರಮ ಜರುಗಿಸಲಾಗುವುದು; | ಘನ ಉಚ್ಚ ನ್ಯಾಯಾಲಯ ಬೆಂಗಳೂರು ಇಲ್ಲಿ ನಾಗಮಂಗಲ ತಾಲ್ಲೂಕು ಪ್ರಾಥಮಿಕ ಶಾಲಾ ಶಿಕ್ಷಕರ ಭವನ ಸಮಿತಿ ಮತ್ತು ಇತರರು ಸರ್ಕಾರದ ವಿರುದ್ಧ ಹೂಡಿರುವ ಪ್ರಕರಣದಲ್ಲಿ ಕಂಡಿಕೆವಾರು ಉತ್ತರ ಹಾಗೂ ಹಾಗೂ ಆಕ್ಷೇಪಣಾ ಹೇಳಿಕೆಗಳನ್ನು ದಿನಾಂಕ29.04.2016 ರಂದು ಘನ ನ್ಯಾಯಾಲಯಕ್ಕೆ ಸಲ್ಲಿಸಲಾಗಿರುತ್ತದೆ.<br>ಸದರಿ ಪ್ರಕರಣಕ್ಕೆ ಸಂಬಂಧಿಸಿದಂತೆ ಘನ ನ್ಯಾಯಾಲಯವು ವಿಚಾರಣೆ ನಡೆಸಿ ದಿನಾಂಕ 11.11.2019 ರಂದು ನೀಡಿದ ಮಧ್ಯಂತರ ತೀರ್ಪಿನಲ್ಲಿ ಈ ಕೆಳಕಂಡಂತೆ ಆದೇಶಿಸಿದೆ. " The primary school Teachers have contributed money to built a Shikshkara bhavana in Nagamangala Taluk, on the land allotted by the Government. Initially the Block Education officer was made as a President to the Society. He withdrew his consent in the view of circular dated 11.09.2014. Now the State Government desires to take over the building.<br>In the view of admitted facts that the building has been constructed by contribution of primary school teachers. It would be appropriate for the government to allow the petitioner-society to have control over the Association subject such conditions which the state may impose.<br>ಅದರಂತೆ ಸರ್ಕಾರವು, ಸರ್ಕಾರದ ಆದೇಶ ಸಂಖ್ಯೆ:ED 07 PMW 2020 ದಿನಾಂಕ:04.02.2020ರ ಮೂಲಕ |

| | | |
|---|---|---|
| | | ರಾಜ್ಯದಾದ್ಯಂತ ಸಾರ್ವಜನಿಕ ಶಿಕ್ಷಣ ಇಲಾಖೆಯ ವ್ಯಾಪ್ತಿಗೆ ಬರುವ ಶಾಲೆಗಳ ಆವರಣ/ನಿವೇಶನಗಳಲ್ಲಿ ನಿರ್ಮಿಸಲಾಗಿರುವ ಗುರುಭವನಗಳ ನಿರ್ವಹಣೆಗೆ ಗುರುಭವನ ಸಮಿತಿಯು ಏಕರೂಪವಾಗಿರುವಂತೆ ನಿರ್ವಹಿಸುವುದು, ಇಲಾಖೆಯ ಆಶಯವಾಗಿದ್ದು ಆಯುಕ್ತರು ಹೊರಡಿಸಿದ ಕೆಳಕಂಡ ಸುತ್ತೋಲೆಗಳನ್ನು ಸ್ಥಿರೀಕರಿಸಿ ಆದೇಶಿಸಲಾಗಿರುತ್ತದೆ. (ಆದೇಶ ಪ್ರತಿಯನ್ನು **ಅನುಬಂಧ-1** ರಲ್ಲಿ ಒದಗಿಸಿದೆ)<br>1. ಆಯುಕ್ತರು, ಸಾರ್ವಜನಿಕ ಶಿಕ್ಷಣ ಇಲಾಖೆ ಹಾಗೂ ಕಾರ್ಯದರ್ಶಿ/ಖಜಾಂಚಿಗಳು, ಕರ್ನಾಟಕ ರಾಜ್ಯ ಶಿಕ್ಷಕರ ಕಲ್ಯಾಣ ನಿಧಿ ಇವರ ಸುತ್ತೋಲೆ ಸಂಖ್ಯೆ: ಶಿ.ಕ.ನಿ.ಗುಭ.ಮಾ.ಸೂ.01/2014-15, ದಿನಾಂಕ:11.09.2014.<br>2. ಆಯುಕ್ತರು, ಸಾರ್ವಜನಿಕ ಶಿಕ್ಷಣ ಇಲಾಖೆ ಹಾಗೂ ಕಾರ್ಯದರ್ಶಿಗಳು/ಖಜಾಂಚಿಗಳು, ಕರ್ನಾಟಕ ರಾಜ್ಯ ಶಿಕ್ಷಕರ ಕಲ್ಯಾಣ ನಿಧಿ ಇವರ ಸುತ್ತೋಲೆ ಸಂಖ್ಯೆ:ಶಿ.ಕ.ನಿ.ಗು.ಭ.ಧ-ಪರಿಷ್ಕರಣೆ/01/2017-18, ದಿನಾಂಕ:03.03.2018<br>3. ಆಯುಕ್ತರು, ಸಾರ್ವಜನಿಕ ಶಿಕ್ಷಣ ಇಲಾಖೆ ಹಾಗೂ ಕಾರ್ಯದರ್ಶಿ/ಖಜಾಂಚಿಗಳು, ಕರ್ನಾಟಕ ರಾಜ್ಯ ಶಿಕ್ಷಕರ ಕಲ್ಯಾಣ ನಿಧಿ ಇವರ ಸುತ್ತೋಲೆ ಸಂಖ್ಯೆ:ಎಫ್.1/ಗು.ಭ.ಅಪೂರ್ಣ.ಕಾ/ಹೆ.ಅ.ಮಂ-01/2009-10, ದಿನಾಂಕ:16.07.2009<br>ಹಾಗಾಗಿ ಗುರುಭವನದ ಆಸ್ತಿಯನ್ನು ಸರ್ಕಾರ/ಇಲಾಖೆಯಲ್ಲಿ ಉಳಿಸಿಕೊಳ್ಳಲು ಪ್ರಾಮಾಣಿಕ ಕೆಲಸ ಮಾಡಲಾಗಿರುತ್ತದೆ.. ಯಾವುದೇ ಖಾಸಗಿಯವರ ಸಂಸ್ಥೆಯವರ ಪರವಾಗಿ ಶಾಮೀಲರಾಗಿರುವುದಿಲ್ಲ. |
| ಈ) | ಗುರುಭವನದ ನಿರ್ವಹಣೆ/ಆಸ್ತಿ ವಿಷಯವು ನ್ಯಾಯಾಲಯದಲ್ಲಿದೆಯೇ; ಹಾಗಿದ್ದಲ್ಲಿ, | ಹೌದು.<br>ಅಧ್ಯಕ್ಷರು /ಕಾರ್ಯದರ್ಶಿಗಳು ನಾಗಮಂಗಲ |

| | ಅದರ ಆಸ್ತಿಯ ದಾಖಲೆಗಳು ಯಾರ ಬಳಿ ಇವೆ; | ತಾಲ್ಲೂಕು ಪ್ರಾಥಮಿಕ ಶಾಲಾ ಶಿಕ್ಷಕರ ಭವನ ಸಮಿತಿ ಇವರ ಬಳಿ ಇರುತ್ತವೆ |
|---|---|---|
| ಉ) | ಈ ಗುರುಭವನದ ಆದಾಯವನ್ನು ಯಾರು ಪಡೆಯುತ್ತಿದ್ದಾರೆ? | ಗುರುಭವನ ನಿರ್ಮಾಣವಾದಾಗಿನಿಂದ ಶಿಕ್ಷಣಾಧಿಕಾರಿಗಳ ಅಧ್ಯಕ್ಷತೆಯಲ್ಲಿ ತಾಲ್ಲೂಕು ಪ್ರಾಥಮಿಕ ಶಾಲಾ ಶಿಕ್ಷಕರ ಸಂಘದ ಪ್ರತಿನಿಧಿಗಳನ್ನೊಳಗೊಂಡಂತೆ ರಚಿಸಿಕೊಂಡು ಆ ಮೂಲಕ ಗುರುಭವನವನ್ನು ನಿರ್ವಹಣೆ ಮಾಡಲಾಗುತಿತ್ತು.<br>ದಿನಾಂಕ 11.09.2014 ರಂದು ಶಿಕ್ಷಣ ಇಲಾಖೆಯ ಮಾರ್ಗಸೂಚಿಯಂತೆ ಪ್ರೌಢಶಾಲಾ ಹಾಗೂ ಪ್ರಾಥಮಿಕ ಶಾಲಾ ಶಿಕ್ಷಕರನ್ನೊಳಗೊಂಡಂತೆ ತಾಲ್ಲೂಕು ಗುರುಭವನ ಸಮಿತಿಯನ್ನು ಪುನಃ ರಚಿಸಲು ಸಭೆ ನಡೆಸಿದಾಗ, ಪ್ರೌಢಶಾಲಾ ಶಿಕ್ಷಕರನ್ನು ಗುರುಭವನದ ನಿರ್ಮಿಸಲು ವಂತಿಗೆ ನೀಡದಿರುವುದರಿಂದ ಪ್ರೌಢಶಾಲಾ ಶಿಕ್ಷಕರನ್ನು ಸಮಿತಿಯ ಸದಸ್ಯರನ್ನಾಗಿ ಸೇರ್ಪಡೆಗೊಳಿಸಲು ನಿರಾಕರಿಸಿರುತ್ತಾರೆ, ಗುರುಭವನವು ಪ್ರಾಥಮಿಕ ಶಾಲಾ ಶಿಕ್ಷಕರ ಸಂಗದ ಆಸ್ತಿಯೇ ಆಗಿರುತ್ತದೆಎಂದು ಪ್ರತಿಪಾದಿಸಿರುತ್ತಾರೆ. ಇದನ್ನು ಆಕ್ಷೇಪಿಸಿ ಅಂದಿನ ಕ್ಷೇತ್ರ ಶಿಕ್ಷಣಧಿಕಾರಿಗಳುರವರು ಇಲಾಖೆಯ ಸುತ್ತೋಲೆಯಂತೆ ಗುರುಭವನ ಸಮಿತಿಯನ್ನು ಪುನರ್‌ರಚಿಸಲು ಸೂಚಿಸಿದ್ದರೂ ಅದನ್ನು ನಿರಾಕರಿಸಿದ್ದರಿಂದ ಸಮಿತಿಯ ಅದ್ಯಕ್ಷತೆಯಿಂದ ಹೊರಬಂದಿರುತ್ತಾರೆ. ಆನಂತರದಲ್ಲಿ ಪ್ರಾ.ಶಾ.ಶಿಕ್ಷಕರ ಅದ್ಯಕ್ಷರು/ಕಾರ್ಯದರ್ಶಿಗಳು ಕ್ಷೇತ್ರ ಶಿಕ್ಷಣಾಧಿಕಾರಿಗಳನ್ನು ಹೊರತುಪಡಿಸಿ ಪ್ರತ್ಯೇಕವಾಗಿ ಅಕ್ರಮವಾಗಿ ಗುರುಭವನ ಸಮಿತಿ ರಚಿಸಿ ಕೊಂಡಿರುತ್ತಾರೆ. ಅಂದಿನಿಂದ ಗುರುಭವನದ ಸಂಪೂರ್ಣ ನಿರ್ವಹಣೆ ಆ ಸಮಿತಿಯವರೇ ಮಾಡಿಕೊಂಡು ಬಂದಿರುತ್ತಾರೆ. ಹಾಗಾಗಿ ಖರ್ಚು–ವೆಚ್ಚದ ವಿವರ ತಿಳಿದು ಬಂದಿರುವುದಿಲ್ಲ. ಸದರಿ ಗುರುಭವನದಲ್ಲಿ 08 ಅಂಗಡಿ ಮಳಿಗೆಗಳಿದ್ದು, ಡಿಸೆಂಬರ್–2017 ರಿಂದ ಅಂಗಡಿ ಮಳಿಗೆಯವರು ಬಾಡಿಗೆ ಕಟ್ಟದಿರುವ ಬಗ್ಗೆ ಅದ್ಯಕ್ಷರು/ಕಾರ್ಯದರ್ಶಿಗಳು<br>ಅಂಗಡಿಮಳಿಗೆಯವರ ವಿರುದ್ದ ಜೆ.ಎಂ.ಎಫ್.ಸಿ ನಾಗಮಂಗಲ ಇಲ್ಲಿ ದಾವೆ ಸಂಖ್ಯೆಓ.ಎಸ್ 271/2019 ರಿಂದ 279/2019 ಹೂಡಿರುತ್ತಾರೆ. ಸದರಿ ದಾವೆಯಲ್ಲಿ ಕ್ಷೇತ ಶಿಕ್ಷಣಾಧಿಕಾರಗಳನ್ನು |

| | | |
|---|---|---|
| | | ಪ್ರತಿವಾದಿಗಳನ್ನಾಗಿ ಮಾಡಿರುವುದಿಲ್ಲ. ಹಾಗಾಗಿ ಗುರುಭವನದ ಆಧಾಯದ/ಖರ್ಚಿನ ವಿವರ ಲಭ್ಯವಿರುವುದಿಲ್ಲ. |

**ಇಪಿ: 66 ಯೋಸಕ 2021**

(ಎಸ್.ಸುರೇಶ್ ಕುಮಾರ್)
ಪ್ರಾಥಮಿಕ ಮತ್ತು ಪ್ರೌಢ ಶಿಕ್ಷಣ ಸಚಿವರು

ಅನುಬಂಧ-1



## ಕರ್ನಾಟಕ ಸರ್ಕಾರದ ನಡವಳಿಗಳು

ವಿಷಯ : ಜಿಲ್ಲಾ ಮತ್ತು ತಾಲ್ಲೂಕು ಹಂತದಲ್ಲಿ ಗುರುಭವನಗಳ ನಿರ್ಮಾಣ ಮತ್ತು ನಿರ್ವಹಣೆಗೆ ಸಂಬಂಧಿಸಿದಂತೆ ಸಮಿತಿ ರಚಿಸುವ ಬಗ್ಗೆ.

ಓದಲಾಗಿದೆ :
1) ಆಯುಕ್ತರು, ಸಾರ್ವಜನಿಕ ಶಿಕ್ಷಣ ಇಲಾಖೆ ಇವರ ಏಕ ಕಡತ ಸಂಖ್ಯೆ: ಎಡಿಯಂ2(4)ಗುರುಭವನ-24/2019-20
2) ಆಯುಕ್ತರು, ಸಾರ್ವಜನಿಕ ಶಿಕ್ಷಣ ಇಲಾಖೆ ಹಾಗೂ ಕಾರ್ಯದರ್ಶಿ/ಖಜಾಂಚಿಗಳು, ಕರ್ನಾಟಕ ರಾಜ್ಯ ಶಿಕ್ಷಕರ ಕಲ್ಯಾಣ ನಿಧಿ ಇವರ ಸುತ್ತೋಲೆ ಸಂಖ್ಯೆ: ಎಫ್.1/ಗು.ಭ.ಅಪೂರ್ಣ.ಕಾ/ಹೆ.ಅ.ಮಂ-01/2009-10, ದಿನಾಂಕ:16.07.2009.
3) ಆಯುಕ್ತರು, ಸಾರ್ವಜನಿಕ ಶಿಕ್ಷಣ ಇಲಾಖೆ ಹಾಗೂ ಕಾರ್ಯದರ್ಶಿ/ಖಜಾಂಚಿಗಳು, ಕರ್ನಾಟಕ ರಾಜ್ಯ ಶಿಕ್ಷಕರ ಕಲ್ಯಾಣ ನಿಧಿ ಇವರ ಸುತ್ತೋಲೆ ಸಂಖ್ಯೆ: ಶಿ.ಕ.ನಿ.ಗು.ಭ.ಮಾ.ಸೂ.01/2014-15. ದಿನಾಂಕ:11.09.2014.
4) ಆಯುಕ್ತರು, ಸಾರ್ವಜನಿಕ ಶಿಕ್ಷಣ ಇಲಾಖೆ ಹಾಗೂ ಕಾರ್ಯದರ್ಶಿ/ಖಜಾಂಚಿಗಳು, ಕರ್ನಾಟಕ ರಾಜ್ಯ ಶಿಕ್ಷಕರ ಕಲ್ಯಾಣ ನಿಧಿ ಇವರ ಸುತ್ತೋಲೆ ಸಂಖ್ಯೆ: ಶಿ.ಕ.ನಿ.ಗು.ಭ.ಧ-ಪರಿಷ್ಕರಣೆ/01/2017-18, ದಿನಾಂಕ:03.03.2018

******

ಪ್ರಸ್ತಾವನೆ:

ಮೇಲೆ ಓದಲಾದ ಕ್ರಮಾಂಕ (1)ರ ಏಕ ಕಡತದಲ್ಲಿ ಆಯುಕ್ತರು, ಸಾರ್ವಜನಿಕ ಶಿಕ್ಷಣ ಇಲಾಖೆ, ಬೆಂಗಳೂರು ಇವರು ಮೇಲೆ ಓದಲಾದ ಕ್ರಮಾಂಕ (2), ಕ್ರಮಾಂಕ (3), ಮತ್ತು ಕ್ರಮಾಂಕ(4)ರ ಸುತ್ತೋಲೆಗಳು "ಗುರುಭವನ ಸಮಿತಿ ರಚನೆ ಮತ್ತು ಮಾರ್ಗಸೂಚಿ" ಸಮರ್ಪಕವಾಗಿರುವುದರಿಂದ ಸೂಕ್ತ ಆದೇಶ ಹೊರಡಿಸುವಂತೆ ಕೋರಿರುತ್ತಾರೆ.

ಮೇಲೆ ಓದಲಾದ ಕ್ರಮಾಂಕ (2), ಕ್ರಮಾಂಕ (3) ಮತ್ತು ಕ್ರಮಾಂಕ (4)ರ ಸುತ್ತೋಲೆಗಳಲ್ಲಿ ಜಿಲ್ಲಾ ಮತ್ತು ತಾಲ್ಲೂಕು ಕೇಂದ್ರಗಳಲ್ಲಿ ಗುರುಭವನ ನಿರ್ಮಾಣ ಮತ್ತು ನಿರ್ವಹಣೆಗೆ ಸಂಬಂಧಿಸಿದಂತೆ ಮಾರ್ಗಸೂಚಿಯನ್ನು ಹಾಗೂ ನಿಧಿಗಳ ಕಛೇರಿಗಳಿಂದ ನೀಡಲಾಗುವ ಅನುದಾನದ ಬಗ್ಗೆ ವಿವರಗಳನ್ನು ನೀಡಲಾಗಿರುತ್ತದೆ.

ಮೇಲ್ಕಂಡ ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿ ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಇಡಿ 7 ಪಿಎಂಡಬ್ಲ್ಯೂ 2020**

**ಬೆಂಗಳೂರು ದಿನಾಂಕ:04-02-2020**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ರಾಜ್ಯದಾದ್ಯಂತ ಸಾರ್ವಜನಿಕ ಶಿಕ್ಷಣ ಇಲಾಖೆಯ ವ್ಯಾಪ್ತಿಗೆ ಬರುವ ಶಾಲೆಗಳ ಆವರಣ/ನಿವೇಶನಗಳಲ್ಲಿ ನಿರ್ಮಿಸಲಾಗಿರುವ ಗುರುಭವನಗಳ

ನಿರ್ವಹಣೆಗೆ, ಗುರುಭವನ ಸಮಿತಿಯು ಏಕರೂಪವಾಗಿರುವಂತೆ ನಿರ್ವಹಿಸುವುದು ಇಲಾಖೆಯ ಆಶಯವಾಗಿದ್ದು, ಮೇಲೆ ಓದಲಾದ ಕ್ರಮಾಂಕ (2), ಕ್ರಮಾಂಕ (3) ಮತ್ತು ಕ್ರಮಾಂಕ (4)ರ ಸುತ್ತೋಲೆಗಳನ್ನು ಸ್ಥಿರೀಕರಿಸಿ ಆದೇಶಿಸಿದೆ.

ರಾಜ್ಯದಾದ್ಯಂತ ಗುರುಭವನದ ಸಮಿತಿಯು ಏಕರೂಪವಾಗಿ ನಿರ್ವಹಿಸುವಂತೆ ಕಾಲಕಾಲಕ್ಕೆ ಆಯುಕ್ತರು, ಸಾರ್ವಜನಿಕ ಶಿಕ್ಷಣ ಇಲಾಖೆ, ಬೆಂಗಳೂರು ಇವರು ಸೂಕ್ತ ಸುತ್ತೋಲೆ ಹೊರಡಿಸತಕ್ಕದ್ದು.

ಈ ಆದೇಶವನ್ನು ಆರ್ಥಿಕ ಇಲಾಖೆಯ ಟಿಪ್ಪಣಿ ಸಂಖ್ಯೆ: ಎಫ್.ಡಿ 01 ಟಿ.ಎಫ್.ಪಿ 2019 ದಿನಾಂಕ:04.07.2019 ರಲ್ಲಿ ಸರ್ಕಾರದ ಪ್ರಧಾನ ಕಾರ್ಯದರ್ಶಿಯವರಿಗೆ ಪ್ರತ್ಯಾಯೋಜಿಸಿರುವ ಅಧಿಕಾರದನ್ವಯ ಹೊರಡಿಸಿದೆ.

ಕರ್ನಾಟಕ ರಾಜ್ಯಪಾಲರ ಅಜ್ಞಾನುಸಾರ
ಮತ್ತು ಅವರ ಹೆಸರಿನಲ್ಲಿ

4/2/2020

(ಎ. ಶರಣಬಸಪ್ಪ)
ಸರ್ಕಾರದ ಅಧೀನ ಕಾರ್ಯದರ್ಶಿ,
ಪ್ರಾಥಮಿಕ ಶಿಕ್ಷಣ (ಶಿಕ್ಷಣ ಇಲಾಖೆ)

**ಇವರಿಗೆ;**

1. ಮಹಾಲೇಖಪಾಲರು, (ಅಡಿಟ್ 1 & 2) ಕರ್ನಾಟಕ, ಬೆಂಗಳೂರು.
2. ಆಯುಕ್ತರು, ಸಾರ್ವಜನಿಕ ಶಿಕ್ಷಣ ಇಲಾಖೆ, ಬೆಂಗಳೂರು.
3. ಅಪರ ಆಯುಕ್ತರು, ಸಾರ್ವಜನಿಕ ಶಿಕ್ಷಣ ಇಲಾಖೆ, ಧಾರವಾಡ/ಕಲಬುರಗಿ.
4. ರಾಜ್ಯದ ಎಲ್ಲಾ ಉಪನಿರ್ದೇಶಕರು, ಸಾರ್ವಜನಿಕ ಶಿಕ್ಷಣ ಇಲಾಖೆ, (ಆಯುಕ್ತರ ಮುಖಾಂತರ)
5. ರಾಜ್ಯದ ಎಲ್ಲಾ ಕ್ಷೇತ್ರ ಶಿಕ್ಷಣಾಧಿಕಾರಿಗಳು, ಸಾರ್ವಜನಿಕ ಶಿಕ್ಷಣ ಇಲಾಖೆ (ಆಯುಕ್ತರ ಮುಖಾಂತರ)
6. ಸಹ ನಿರ್ದೇಶಕರು, ಕರ್ನಾಟಕ ರಾಜ್ಯ ಶಿಕ್ಷಕರ ಕಲ್ಯಾಣ ನಿಧಿ ಹಾಗೂ ವಿದ್ಯಾರ್ಥಿಗಳ ಕ್ಷೇಮಾಭಿವೃದ್ಧಿ ನಿಧಿ, ಶಿಕ್ಷಕರ ಸದನ, ಬೆಂಗಳೂರು.
7. ಸಾಪ್ತಾಹಿಕ ರಾಜ್ಯ ಪತ್ರ/ಶಾಖಾರಕ್ಷ ಕಡತ/ಹೆಚ್ಚುವರಿ ಪ್ರತಿಗಳು.

**ಪ್ರತಿ ಮಾಹಿತಿಗಾಗಿ.**

1. ಮಾನ್ಯ ಪ್ರಾಥಮಿಕ ಮತ್ತು ಪ್ರೌಢಶಿಕ್ಷಣ ಸಚಿವರ ಆಪ್ತ ಕಾರ್ಯದರ್ಶಿಗಳು, ವಿಧಾನ ಸೌಧ, ಬೆಂಗಳೂರು.
2. ಸರ್ಕಾರದ ಪ್ರಧಾನ ಕಾರ್ಯದರ್ಶಿಗಳ ಆಪ್ತ ಕಾರ್ಯದರ್ಶಿಗಳು, ಪ್ರಾಥಮಿಕ ಮತ್ತು ಪ್ರೌಢ ಶಿಕ್ಷಣ ಇಲಾಖೆ, ಬೆಂಗಳೂರು

ಕರ್ನಾಟಕ ರಾಜ್ಯ ಶಿಕ್ಷಕರ ಕಲ್ಯಾಣ ನಿಧಿ ಹಾಗೂ ವಿದ್ಯಾರ್ಥಿಗಳ ಕ್ಷೇಮಾಭಿವೃದ್ಧಿ ನಿಧಿ ಮತ್ತು
ರಾಷ್ಟ್ರೀಯ ಶಿಕ್ಷಕರ ಕಲ್ಯಾಣ ಪ್ರತಿಷ್ಠಾನ, ಶಿಕ್ಷಕರ ಸದನ, ಕೆ.ಜಿ.ರಸ್ತೆ, ಬೆಂಗಳೂರು-02
ದೂರವಾಣಿ : 080-22483434 ಫ್ಯಾಕ್ಸ್ : 080-22483860 ಇ-ಮೇಲ್: ksthf63@gmail.com

ಸಂಖ್ಯೆ: ಶಿ.ಕ.ನಿ ಗು.ಭ.ಮಾ.ಸೂ 01/2014-15

ದಿನಾಂಕ: 11-09-2014

## ಸುತ್ತೋಲೆ

ವಿಷಯ: ಜಿಲ್ಲಾ ಮತ್ತು ತಾಲ್ಲೂಕ್ ಕೇಂದ್ರಗಳ ಗುರುಭವನಗಳ ನಿರ್ಮಾಣ ಮತ್ತು ನಿರ್ವಹಣೆಗೆ ಸಂಬಂಧಿಸಿದಂತೆ ಮಾರ್ಗಸೂಚಿ.

ಉಲ್ಲೇಖ:
1. ಈ ಕಛೇರಿಯ ಸುತ್ತೋಲೆ ಸಂಖ್ಯೆ: ಎಫ್.1 ಗು.ಭ.ಅಪೂರ್ಣ ಕಾ.ಪ.ಅ.ಮಂ.01/2009-10/ದಿನಾಂಕ: 16-07-2009.
2. ಈ ಕಛೇರಿಯ ಸುತ್ತೋಲೆ ಸಂಖ್ಯೆ:ಶಿಕನಿ/ಆಡಳಿತ(1)ಗು.ಭ. ಇತರೆ 28(ಪಿ)/2013-14/ದಿನಾಂಕ: 03-10-2013.
3. ಜಿಲ್ಲೆ ಮತ್ತು ತಾಲ್ಲೂಕ್‌ಗಳಿಂದ ಶಿಕ್ಷಕರು ಹಾಗು ಸಾರ್ವಜನಿಕರಿಂದ ಸ್ವೀಕೃತವಾದ ದೂರುಗಳು.
4. ಈ ಕಛೇರಿಯ ಅಧಿಕಾರಿಗಳು ಜಿಲ್ಲೆ/ತಾಲ್ಲೂಕ್‌ಗಳಿಗೆ ಭೇಟಿ ಮಾಡಿದಾಗ ಪರಿಶೀಲನೆಯಿಂದ ಗಮನಕ್ಕೆ ಬಂದ ಅಂಶಗಳು.

***

ಕೇಂದ್ರ ಸರ್ಕಾರದ ಮಾನವ ಸಂಪನ್ಮೂಲ ಇಲಾಖೆಯು 1962 ರಲ್ಲಿ ರಾಷ್ಟ್ರೀಯ ಶಿಕ್ಷಕರ ಕಲ್ಯಾಣ ಪ್ರತಿಷ್ಠಾನವನ್ನು ಅಸ್ತಿತ್ವಕ್ಕೆ ತಂದು, ರಾಜ್ಯಗಳಲ್ಲೂ ಇದರ ಘಟಕಗಳನ್ನು ಸ್ಥಾಪಿಸಲು ರಾಜ್ಯ ಸರ್ಕಾರದ ಶಿಕ್ಷಣ ಇಲಾಖೆಗಳಿಗೆ ನಿರ್ದೇಶನ ನೀಡಿರುತ್ತಾರೆ. ಅದರಂತೆ ಕರ್ನಾಟಕ ರಾಜ್ಯದಲ್ಲೂ ಇದರ ಘಟಕವನ್ನು ಸ್ಥಾಪಿಸಲಾಗಿದೆ. ಇದರ ಜೊತೆಗೆ 1963 ರಲ್ಲಿ ಕರ್ನಾಟಕ ಸರ್ಕಾರವು ಕರ್ನಾಟಕ ರಾಜ್ಯ ಶಿಕ್ಷಕರ ಕಲ್ಯಾಣ ನಿಧಿ ಹಾಗು ಕರ್ನಾಟಕ ರಾಜ್ಯ ವಿದ್ಯಾರ್ಥಿಗಳ ಕ್ಷೇಮಾಭಿವೃದ್ಧಿ ನಿಧಿಗಳನ್ನು ಸ್ಥಾಪಿಸಿ, ರಾಜ್ಯದ ಪ್ರಾಥಮಿಕ ಶಾಲೆಯಿಂದ ವಿಶ್ವವಿದ್ಯಾಲಯದ ವರೆಗಿನ ವಿವಿಧ ಹಂತದ ವಿದ್ಯಾರ್ಥಿಗಳು ಹಾಗು ಶಿಕ್ಷಕರಿಗೆ ಅನುಕೂಲಕರವಾದ ಅನೇಕ ಕಾರ್ಯಕ್ರಮಗಳನ್ನು ಹಮ್ಮಿಕೊಂಡು ಅನುಷ್ಠಾನಗೊಳಿಸಲಾಗುತ್ತಿದೆ.

ಇವುಗಳಲ್ಲಿ ಜಿಲ್ಲಾ ಮತ್ತು ತಾಲ್ಲೂಕು ಕೇಂದ್ರಗಳಲ್ಲಿ ಗುರುಭವನ ನಿರ್ಮಿಸಲು ಅನುದಾನ ನೀಡುವುದರ ಮೂಲಕ ಶಿಕ್ಷಕರ ಮತ್ತು ವಿದ್ಯಾರ್ಥಿಗಳ ಶೈಕ್ಷಣಿಕ ಪ್ರಗತಿಗೆ ಪೂರಕವಾದ ಸ್ಥಳಾವಕಾಶ ನಿರ್ಮಿಸಲಾಗುತ್ತಿದೆ. ಗುರುಭವನಗಳಿಗೆ ಸಾರ್ವಜನಿಕ ಶಿಕ್ಷಣ ಇಲಾಖೆಯ ವ್ಯಾಪ್ತಿಗೆ ಬರುವ ಶಾಲೆಗಳ ಆವರಣದಲ್ಲಿ ಹೆಚ್ಚುವರಿಯಾಗಿರುವ ಖಾಲಿ ಜಾಗವನ್ನು ಇಲಾಖಾ ಮುಖ್ಯಸ್ಥರ ಅನುಮತಿ ಪಡೆದು ಗುರುಭವನ ನಿರ್ಮಾಣ ಸಮಿತಿಗೆ ನೀಡಲಾಗುತ್ತಿದೆ. ಕರ್ನಾಟಕ ರಾಜ್ಯ ಶಿಕ್ಷಕರ ಕಲ್ಯಾಣ ನಿಧಿಯಿಂದ ನೀಡುವ ಅನುದಾನದ ಜೊತೆಗೆ ಉಳಿದ ಮೊತ್ತವನ್ನು ವಿಧಾನಸಭೆ, ವಿಧಾನ ಪರಿಷತ್ ಹಾಗು ಲೋಕಸಭಾ ಸದಸ್ಯರ ಕ್ಷೇತ್ರಾಭಿವೃದ್ಧಿ ನಿಧಿಯಿಂದ ಹಾಗು ಸ್ಥಳೀಯವಾಗಿ ಇತರೆ ಮೂಲಗಳಿಂದ ಹೊಂದಿಸಿಕೊಂಡು, ಇದಕ್ಕೆ ಅಗತ್ಯ ನಿವೇಶನಕ್ಕೆ, ಅಂದಾಜು ವೆಚ್ಚ ಸಿದ್ಧಪಡಿಸಿ, ನಿರ್ಮಾಣಕ್ಕೆ ಸ್ಥಳೀಯ ಪ್ರಾಧಿಕಾರಿಗಳಾದ ಮಹಾನಗರಪಾಲಿಕೆ, ನಗರಸಭೆ, ಪುರಸಭೆ, ಪಟ್ಟಣ ಪಂಚಾಯಿತಿಗಳಿಂದ ಲೈಸನ್ಸ್ ಪಡೆದು ನಿರ್ಮಿಸಲಾಗುತ್ತಿದೆ.

ನಿರ್ಮಾಣ ಪೂರ್ಣಗೊಂಡ ನಂತರ ಇದನ್ನು ವಿದ್ಯಾರ್ಥಿಗಳ ಹಾಗೂ ಶಿಕ್ಷಕರ ಶೈಕ್ಷಣಿಕ ಚಟುವಟಿಕೆಗಳಿಗೆ ಪೂರಕವಾದ ಕಾರ್ಯಕ್ರಮಗಳಿಗಾಗಿ ಬಳಸಲಾಗುತ್ತಿದೆ. ಉಲ್ಲೇಖ(1),(2)ರ ಕಛೇರಿ ಸುತ್ತೋಲೆಗಳು ಹಾಗೂ ಗುರುಭವನ ನಿರ್ಮಾಣಕ್ಕೆ ಆಡಳಿತಾತ್ಮಕ ಅನುಮೋದನೆ ನೀಡುವಾಗ ಕೆಲವು ನಿಬಂಧನೆಗಳನ್ನು ಹಾಕಿ ಅನುಮೋದನೆ ನೀಡಲಾಗುತ್ತಿದೆ.

ಆದರೂ ಗುರುಭವನ ನಿರ್ಮಾಣ, ಗುರುಭವನ ಸಮಿತಿ ರಚನೆ, ನಿರ್ವಹಣೆಗೆ ಸಂಬಂಧಿಸಿದಂತೆ ಶಿಕ್ಷಕರು ಹಾಗು ಸಾರ್ವಜನಿಕರಿಂದ ಹಲವಾರು ದೂರುಗಳು ಬಂದಿರುತ್ತವೆ. ಇಂತಹ ದೂರುಗಳನ್ನು ಈ ಕಛೇರಿಯ ಅಧಿಕಾರಿಗಳು ಜಿಲ್ಲೆ-ತಾಲ್ಲೂಕುಗಳಿಗೆ ಭೇಟಿ ನೀಡಿದಾಗಲೂ ಗಮನಿಸಲಾಗಿದೆ. ಈ ಹಿನ್ನೆಲೆಯಲ್ಲಿ ರಾಜ್ಯದ ಜಿಲ್ಲಾ ಗುರುಭವನ ಹಾಗು ತಾಲೂಕು ಗುರುಭವನ ನಿರ್ಮಾಣ ಹಾಗು ನಿರ್ವಹಣಾ

ಗುರುಭವನ ನಿರ್ಮಾಣ ಮಾಡಲು ಮಾರ್ಗಸೂಚಿ:

1. ಈ ಸಮಿತಿಯು ಪ್ರಾರಂಭದಲ್ಲಿ ಒಂದು [illegible] ಹಣವನ್ನು ಹೊಂದಿಕೊಂಡು, ಅಧ್ಯಕ್ಷರು ಹಾಗು ಖಜಾಂಚಿಗಳ ಹೆಸರಿನಲ್ಲಿ ಜಂಟಿ ಖಾತೆಯನ್ನು ಸ್ಥಳೀಯ ರಾಷ್ಟ್ರೀಕೃತ ಬ್ಯಾಂಕನಲ್ಲಿ ತೆರೆಯಬೇಕು.
2. ಗುರುಭವನ ಇಲ್ಲದ ಜಿಲ್ಲೆ/ತಾಲ್ಲೂಕ್ ರವರು ಗುರುಭವನ ನಿರ್ಮಾಣಕ್ಕೆ ಸಂಬಂಧಿಸಿದಂತೆ ಸಮಿತಿಯು ಸಭೆ ನಡೆಸಿ ತೀರ್ಮಾನ ತೆಗೆದುಕೊಳ್ಳಬೇಕು ಹಾಗು ನಡಾವಳಿ ದಾಖಲಿಸಬೇಕು.
3. ಗುರುಭವನ ನಿರ್ಮಿಸಲು ಸೂಕ್ತವಾದ ಸ್ಥಳ/ನಿವೇಶನ ಗುರ್ತಿಸಿಕೊಳ್ಳಬೇಕು. ಇದು ಶಾಲಾ ಕಾಲೇಜುಗಳಿಗೆ ಸಂಬಂಧಿಸಿದಾದಲ್ಲಿ ಸಂಬಂಧಿಸಿದ ಇಲಾಖಾ ಮುಖ್ಯಸ್ಥರಿಗೆ ಅಗತ್ಯ ದಾಖಲೆಗಳನ್ನು ಲಗತ್ತಿಸಿ ಪ್ರಸ್ತಾವನೆ ಸಲ್ಲಿಸಿ ಗುರುಭವನ ನಿರ್ಮಿಸಲು ಅನುಮತಿ ಪಡೆಯಬೇಕು. ಇದು ಗುರುಭವನ ಸಮಿತಿಗೆ ಹಸ್ತಾಂತರ ಆಗಬೇಕು. ನಿವೇಶನ-ಶಾಲಾ- ಕಾಲೇಜುಗಳಿಗೆ ಸಂಬಂಧಿಸಿಲ್ಲದ ಪ್ರಕರಣಗಳಲ್ಲಿ ಸಂಬಂಧಿಸಿದ ಸರ್ಕಾರದ ಇಲಾಖೆ ಅಥವಾ ಸರ್ಕಾರದಿಂದ ಗುರುಭವನ ನಿರ್ಮಾಣಕ್ಕಾಗಿ ಮಂಜೂರಾತಿ ಪಡೆಯಬೇಕು ಅಥವಾ ಸ್ಥಳೀಯ ಪ್ರಾಧಿಕಾರಿಗಳಾದ ಮಹಾನಗರಪಾಲಿಕೆ, ನಗರಸಭೆ, ಪುರಸಭೆಗಳ ಪಟ್ಟಣ ಪಂಚಾಯಿತಿಗಳ ವ್ಯಾಪ್ತಿಯ ಜಮೀನು ಆದಲ್ಲಿ ಅವರಿಂದ ಮಂಜೂರಾತಿ ಆಗಬೇಕು.
4. ನಂತರ ಲೋಕೋಪಯೋಗಿ ಇಲಾಖೆ, ಪಂಚಾಯತ್ ರಾಜ್ ಇಂಜಿನಿಯರಿಂಗ್ ವಿಭಾಗ, ಕರ್ನಾಟಕ ರಾಜ್ಯ ರೂರಲ್ ಇನ್‌ಫ್ರಾಸ್ಟ್ರಕ್ಚರ್ ಡವಲಪ್‌ಮೆಂಟ್ ಲಿಮಿಟೆಡ್(ಕೆ.ಆರ್.ಐ.ಡಿ.ಎಲ್) ನಿರ್ಮಿತಿ ಕೇಂದ್ರ ಅಥವಾ ಇತರೆ ಅಧಿಕೃತ ತಾಂತ್ರಿಕ ಪರಿಣಿತರನ್ನು ಸಂಪರ್ಕಿಸಿ, ಅವರಿಗೆ ನಿವೇಶನದ ವಿವರ, ನಿರ್ಮಿಸಬೇಕಾದ ಗುರುಭವನದ ಅಳತೆ ವಿವರ ನೀಡಿ, ನೀಲ ನಕ್ಷೆ ಮತ್ತು ಅಂದಾಜು ಪಟ್ಟಿ ತಯಾರಿಸಿಕೊಂಡು ಅದಕ್ಕೆ ಅವರಿಂದ ದೃಢೀಕರಣ ಪಡೆಯಬೇಕು.
5. ಗುರುಭವನ ನಿರ್ಮಾಣಕ್ಕೆ ಸಿದ್ಧಪಡಿಸಿದ ಅಂದಾಜು ಪಟ್ಟಿಯಂತೆ ಒಟ್ಟು ಅಂದಾಜು ಮಾಡಿದ ಮೊತ್ತವನ್ನು ಕರ್ನಾಟಕ ರಾಜ್ಯ ಶಿಕ್ಷಕರ ಕಲ್ಯಾಣ ನಿಧಿಯು ಸೇರಿದಂತೆ ಯಾವ ಯಾವ ಮೂಲಗಳಿಂದ ಎಷ್ಟೆಷ್ಟು ಸಂಗ್ರಹಿಸಲಾಗುತ್ತದೆ ಎಂಬ ವಿವರಗಳನ್ನು ಸಿದ್ಧಪಡಿಸಬೇಕು. ಆ ಮೂಲಗಳಿಗೆ ಪತ್ರ ವ್ಯವಹಾರ ನಡೆಸಿ ಒಪ್ಪಿಗೆ ಪತ್ರ ಪಡೆಯಬೇಕು.

ಉದಾ: ಮಾನ್ಯ ವಿಧಾನ ಸಭಾ ಸದಸ್ಯರು, ವಿಧಾನ ಪರಿಷತ್ ಸದಸ್ಯರು, ಲೋಕಸಭಾ ಸದಸ್ಯರು ಹಾಗು ಕೇಂದ್ರ/ರಾಜ್ಯ ಸರ್ಕಾರಗಳ ಸಚಿವರುಗಳ ಕ್ಷೇತ್ರಾಭಿವೃದ್ಧಿ ನಿಧಿಗಳಿಂದ ಅನುದಾನ ಪಡೆಯುವುದಾದಲ್ಲಿ ಅವರಿಂದ ಲಿಖಿತ ಒಪ್ಪಿಗೆ ಪತ್ರಗಳನ್ನು ಪಡೆಯಬೇಕು.

ಸ್ಥಳೀಯ ದಾನಿಗಳಿಂದ ಅನುದಾನ ಪಡೆದಲ್ಲಿ ಅವರಿಂದ ಒಪ್ಪಿಗೆ ಪತ್ರ ಪಡೆಯಬೇಕು. ಶಿಕ್ಷಕರಿಂದ ವಂತಿಗೆ ಪಡೆಯುವುದಾದಲ್ಲಿ ಈ ಬಗ್ಗೆ ಗುರುಭವನ ಸಮಿತಿ, ಜಿಲ್ಲಾ/ತಾಲ್ಲೂಕ್ ಶಿಕ್ಷಕರ ಸಂಘಗಳ ಕಾರ್ಯಕಾರಿ ಸಮಿತಿಗಳಲ್ಲಿ ನಿರ್ಣಯ ಮಾಡಿ, ಸ್ವಯಿಚ್ಛೆ ವಂತಿಗೆ ನೀಡುವ ಪ್ರತಿ ಶಿಕ್ಷಕರಿಂದ ಲಿಖಿತ ಒಪ್ಪಿಗೆ ಪಡೆದುಕೊಂಡು, ಅವರಿಂದ ವಂತಿಗೆಯನ್ನು ಸಂಗ್ರಹಿಸಬೇಕು. ಇದು [illegible] ಸ್ವಯಿಚ್ಛೆ ಆಗಬೇಕು. ಒತ್ತಾಯ [illegible] ಇರಬಾರದು. ಈ ಎಲ್ಲಾ [illegible] ಅನುದಾನ, ಡಿ.ಡಿ/ಚೆಕ್ [illegible] ಗುರುಭವನ ಸಮಿತಿಯ [illegible] ಖಾತೆಗೆ ಜಮಾ ಆಗಬೇಕು.

[illegible] ನಿವೇಶನದ ದಾಖಲೆ, [illegible] ಅಂದಾಜು [illegible] ಲಗತ್ತಿಸಿ, ಸ್ಥಳೀಯ [illegible] (ಮಹಾನಗರಪಾಲಿಕೆ, ನಗರಸಭೆ, ಪುರಸಭೆ, [illegible] ಪಂಚಾಯಿತಿ) ಗಳಿಗೆ ಸಲ್ಲಿಸಿ [illegible] ಪಡೆಯಬೇಕು.

[illegible] ದಾಖಲೆ, ನೀಲನಕ್ಷೆ, ಅಂದಾಜು ಪಟ್ಟಿ, ಸ್ಥಳೀಯ ಪ್ರಾಧಿಕಾರದಿಂದ ಲೈಸನ್ಸ್ ಪತ್ರಗಳನ್ನು [illegible] ಕರ್ನಾಟಕ ರಾಜ್ಯ ಶಿಕ್ಷಕರ ಕಲ್ಯಾಣ ನಿಧಿಯ ಕಾರ್ಯದರ್ಶಿ/ ಖಜಾಂಚಿಗಳಿಗೆ ಪ್ರಸ್ತಾವನೆ [illegible] ಅನುಮೋದನೆ ಪಡೆಯಬೇಕು.

8. ಆಡಳಿತಾತ್ಮಕ ಅನುಮೋದನೆ ಪಡೆದ ನಂತರ ಕಟ್ಟಡ ನಿರ್ಮಾಣ ತಾಂತ್ರಿಕ ಪರಿಣಿತಿ ಇರುವ ಅಧಿಕೃತ ಸಂಸ್ಥೆ ಅಥವ ಪರಿಣಿತಿ ಹೊಂದಿದ ಅರ್ಹ ವ್ಯಕ್ತಿಯಿಂದ ಸಲಹೆ ಪಡೆದು ರಾಜ್ಯ ಸರ್ಕಾರ ಕಾಲಕಾಲಕ್ಕೆ ನಿಗದಿಪಡಿಸಿದ ಪಾರದರ್ಶಕ ನಿಯಮವನ್ನು ಅನುಸರಿಸಿ ಟೆಂಡರ್ ಕರೆಯಬೇಕು. ಇಲ್ಲವಾದಲ್ಲಿ ಸರ್ಕಾರಿ ಸ್ವಾಮ್ಯದ ನಿರ್ಮಾಣ ಏಜೆನ್ಸಿಗಳಾದ ಪಿ.ಡಬ್ಲ್ಯೂ.ಡಿ, ಪಿ.ಆರ್.ಇ.ಡಿ. ಕೆ.ಆರ್.ಐ.ಡಿ.ಎಲ್ ನಿರ್ಮಿತಿ ಕೇಂದ್ರ, ಮುಂತಾದವರಿಗೆ ಸಮಿತಿಯ ಪೂರ್ಣ ಕೋರಂ ನಿರ್ಣಯದೊಂದಿಗೆ ನಿರ್ಣಯ ತೆಗೆದುಕೊಂಡ ನಂತರವೇ ಒಂದು ಲಿಖಿತ ಆದೇಶದ ರೂಪದಲ್ಲಿ ನಿರ್ಮಾಣ ಕಾರ್ಯವನ್ನು ವಹಿಸತಕ್ಕದ್ದು. ನೇರವಾಗಿ ಶಿಕ್ಷಕರಿಗಾಗಲಿ, ಅನಧಿಕೃತ ಖಾಸಗಿ ವ್ಯಕ್ತಿಗಳಿಗಾಗಲಿ ನಿರ್ಮಾಣ ಕಾರ್ಯ ವಹಿಸುವಂತಿಲ್ಲ.

9. ನಿರ್ಮಾಣ ಕಾರ್ಯ ಪ್ರಾರಂಭಕ್ಕೆ ಮೊದಲು ಈ ಪತ್ರಕ್ಕೆ ಲಗತ್ತಿಸಿದ ನಮೂನೆಯಂತೆ ರೂ. 500/- ಮೌಲ್ಯದ ಛಾಪಾ ಕಾಗದಲ್ಲಿ ಗುರುಭವನ ಸಮಿತಿಯ ಅಧ್ಯಕ್ಷರು ಮತ್ತು ನಿರ್ಮಾಣ ಏಜೆನ್ಸಿಯ ಅಧಿಕೃತ ಪ್ರತಿನಿಧಿಯೊಂದಿಗೆ ಪರಸ್ಪರ ಲಿಖಿತ ಒಪ್ಪಂದ ಮಾಡಿಕೊಳ್ಳಬೇಕು. ಇದರಲ್ಲಿ ನಿರ್ಮಾಣದ ನಿರ್ದಿಷ್ಟಗಳು ಹಾಗು ಕಾಮಗಾರಿ ಮುಗಿಸುವ ಕಾಲಮಿತಿಯನ್ನು ಸ್ಪಷ್ಟಪಡಿಸಬೇಕು.

10. ನಿರ್ಮಾಣ ಏಜೆನ್ಸಿಗೆ ನಿರ್ಮಾಣದ ಕಾರ್ಯವನ್ನು ವಹಿಸುವ ಆದೇಶಕ್ಕೆ ಜಿಲ್ಲಾ ಹಂತದಲ್ಲಿ ಸಾರ್ವಜನಿಕ ಶಿಕ್ಷಣ ಇಲಾಖೆಯ ಉಪನಿರ್ದೇಶಕರು(ಆಡಳಿತ) ಮತ್ತು ತಾಲ್ಲೂಕು ಹಂತದಲ್ಲಿ ಕ್ಷೇತ್ರ ಶಿಕ್ಷಣಾಧಿಕಾರಿಗಳ ಸಹಿ ಮಾಡಬೇಕು.

11. ಈ ಆದೇಶದಲ್ಲಿ ಗುರುಭವನ ನಿರ್ಮಾಣಕ್ಕೆ ಅಧಿಕೃತವಾಗಿ ನಿಗದಿಯಾದ ನಿವೇಶನವನ್ನು ನಿರ್ಮಾಣ ಏಜೆನ್ಸಿಗೆ ನಿರ್ಮಾಣ ಕಾರ್ಯಕ್ಕಾಗಿ ತಾತ್ಕಾಲಿಕವಾಗಿ ಹಸ್ತಾಂತರ ಮಾಡಬೇಕು.

12. ನಿರ್ಮಾಣ ಏಜೆನ್ಸಿಗೆ ಅಂದಾಜು ಮೊತ್ತದ ಶೇ.25 ರಷ್ಟನ್ನು ಮುಂಗಡವಾಗಿ ನೀಡಬಹುದು. ನಂತರ ಹಂತಹಂತವಾಗಿ ಕಾರ್ಯ ಪ್ರಗತಿ ಅನುಸರಿಸಿ ನೀಡಲಾಗುವುದು ಎಂಬುದನ್ನು ಪರಸ್ಪರ ಒಪ್ಪಂದದಲ್ಲಿ ಕಡ್ಡಾಯವಾಗಿ ಪ್ರಸ್ತಾಪಿಸಬೇಕು.

13. ನಿರ್ಮಾಣ ಕಾರ್ಯದ ಪ್ರಾರಂಭ ಹಾಗು ಮುಕ್ತಾಯಕ್ಕೆ ನಿರ್ದಿಷ್ಟವಾದ ಸಮಯ ನಿಗದಿ ಮಾಡಬೇಕು. ಒಟ್ಟಾರೆ ನಿರ್ಮಾಣ ಕಾರ್ಯ ಗರಿಷ್ಠ 1 ವರ್ಷದ ಅವಧಿಯಲ್ಲಿ ಮುಗಿಸಬೇಕು. ನಿರ್ಮಾಣ ಏಜೆನ್ಸಿಯು ನಿಗದಿಪಡಿಸಿದ ಅವದಿಯಲ್ಲಿ ಕೆಲಸ ಪೂರೈಸದಿದ್ದಲ್ಲಿ ವಿಳಂಬಕ್ಕೆ ನಿಯಮಾನುಸಾರ ಇಂತಿಷ್ಟು ದಂಡ ವಿಧಿಸುವ ಹಾಗು ನಿರ್ಮಾಣ ಕಾರ್ಯ ಕಾಲಮಿತಿಯಲ್ಲಿ ಆಗಿ, ಸಮಿತಿಯು ಹಣಪಾವತಿ ವಿಳಂಬ ಮಾಡಿದಲ್ಲಿ, ವಿಳಂಬಕ್ಕೆ ಅನುಗುಣವಾಗಿ ಒಂದಿಷ್ಟು ದಂಡ ವಿಧಿಸುವ ಬಗ್ಗೆ ಪರಸ್ಪರ ಒಪ್ಪಂದದಲ್ಲಿ ನಿರ್ದಿಷ್ಟಪಡಿಸಬೇಕು.

14. ನಿರ್ಮಾಣ ಕಾರ್ಯವನ್ನು ಟೆಂಡರ್ ಮುಖಾಂತರ ಖಾಸಗಿ ವ್ಯಕ್ತಿಗೆ ವಹಿಸಬೇಕಾದ ಸಂದರ್ಭದಲ್ಲಿ ಅವರು ಲೋಕೋಪಯೋಗಿ ಇಲಾಖೆಯಿಂದ ಅಧಿಕೃತ ಪರವಾನಿಗೆ ಪಡೆದಿರುವ ಕ್ಲಾಸ್-1 ಕಂಟ್ರಾಕ್ಟರ್ ಎಂಬುದನ್ನು ದೃಢಪಡಿಸಿಕೊಳ್ಳಬೇಕು. ಅವರಿಗೆ ಕಟ್ಟಡ ನಿರ್ಮಾಣದಲ್ಲಿ ಸಾಕಷ್ಟು ಅನುಭವ ಇದೆ, ಹಾಗು ಉತ್ತಮ ಗುಣಮಟ್ಟದ ಕಟ್ಟಡಗಳನ್ನು ನಿರ್ಮಿಸಿದ್ದಾರೆ ಎಂಬುದನ್ನು ಸಮಿತಿಯ ಸದಸ್ಯರು ಪರಿಶೀಲನೆಯಿಂದ ದೃಢಪಡಿಸಿಕೊಂಡು ಅವರ ನಿರ್ಮಾಣ ಸಾಮರ್ಥ್ಯ, ಆರ್ಥಿಕ ಸಂಪನ್ಮೂಲಗಳನ್ನು ಗಮನದಲ್ಲಿಟ್ಟುಕೊಂಡು ನಿರ್ಮಾಣ ಕಾರ್ಯಕ್ಕೆ ಅಂತಿಮ ಆಯ್ಕೆ ಮಾಡಿ ಆದೇಶ ನೀಡಬೇಕು.

15. ಗುರುಭವನ ನಿರ್ಮಾಣ ನಿರ್ವಹಣೆಗೆ ಸಂಬಂಧಿಸಿದಂತೆ, ಜಿಲ್ಲಾ ಗುರುಭವನ ಇದ್ದಲ್ಲಿ ಉಪನಿರ್ದೇಶಕರು(ಆಡಳಿತ) ಅವರ ಕಛೇರಿಯಲ್ಲಿ ಮತ್ತು ತಾಲ್ಲೂಕು ಗುರುಭವನ ಇದ್ದಲ್ಲಿ ಕ್ಷೇತ್ರ ಶಿಕ್ಷಣಾಧಿಕಾರಿಗಳ ಕಛೇರಿಯಲ್ಲಿ ಕಡತ ತೆರೆದು, ಇದರ ನಿರ್ವಹಣೆಯನ್ನು ಕರ್ನಾಟಕ ರಾಜ್ಯ ಶಿಕ್ಷಕರ ಕಲ್ಯಾಣ ನಿಧಿಯ ಜವಾಬ್ದಾರಿ ಇರುವ ಪ್ರಥಮ ದರ್ಜೆ ಸಹಾಯಕರಿಗೆ ವಹಿಸಬೇಕು. ಈ ಕಡತ ಹಾಗು ಬ್ಯಾಂಕ್ ಖಾತೆ ನಿರ್ವಹಣೆ, ಕಛೇರಿ ಕೈಪಿಡಿ ನಿಯಮದಂತೆ ನಿರ್ವಹಣೆ ಆಗಬೇಕು. ಇದು ಉಪನಿರ್ದೇಶಕರು ಹಾಗು ಕ್ಷೇತ್ರ ಶಿಕ್ಷಣಾಧಿಕಾರಿಗಳ ಜವಾಬ್ದಾರಿಯಾಗಿರುತ್ತದೆ.

16. ಗುರುಭವನ ನಿರ್ಮಾಣ ನಿರ್ವಹಣೆಗೆ ಸಂಬಂಧಿಸಿದಂತೆ, ಒಂದು ನಗದು ಪುಸ್ತಕ ಸರ್ಕಾರಿ ಕಛೇರಿ ನಿಯಮದಂತೆ ನಿರ್ವಹಿಸಬೇಕು. ಇದರಲ್ಲಿ ಪ್ರತಿಯೊಂದು ಜಮಾ-ಖರ್ಚನ್ನು ಆಗಿಂದಾಗ್ಗೆ ದಾಖಲಿಸಿ, ಉಪನಿರ್ದೇಶಕರು/ಕ್ಷೇತ್ರ ಶಿಕ್ಷಣಾಧಿಕಾರಿಗಳು ದೃಢೀಕರಿಸಬೇಕು. ಎಲ್ಲಾ ಕಾಲಕ್ಕೂ ಬ್ಯಾಂಕ್ ಪ್ಯಾಸ್ (ಪಾಸ್ ಪುಸ್ತಕ ಆಧರಿಸಿ) ಹಾಗು ನಗದು ಪುಸ್ತಕದ ದಾಖಲೆಗಳಿಗೆ ತಾಳೆ ಹೊಂದಬೇಕು.
17. ಗುರುಭವನ ನಿರ್ಮಾಣ ಮತ್ತು ನಿರ್ವಹಣೆಗೆ ಸಂಬಂಧಿಸಿದಂತೆ, ಅನಧಿಕೃತವಾಗಿ ಯಾವುದೇ ದಾಖಲೆ ಇಲ್ಲದೆ ವ್ಯವಹಾರ ನಡೆಸಬಾರದು. ಪ್ರತಿಯೊಂದು ವ್ಯವಹಾರಕ್ಕೂ ಸಮಿತಿಯ ಸಭಾ ನಡಾವಳಿ ಆಧರಿಸಿ, ಕಡತದಲ್ಲಿ ದಾಖಲೆ ಆಗಿರತಕ್ಕದ್ದು.
18. ಶಾಲಾ ಕಾಲೇಜುಗಳ ಆವರಣದಲ್ಲಿ ಗುರುಭವನ ನಿರ್ಮಾಣ ಮಾಡುವುದಾದಲ್ಲಿ, ಆಯಾ ಶಾಲಾ ಮುಖ್ಯಸ್ಥರಿಂದ ನಿವೇಶನ ಮಂಜೂರಾತಿ ಅನುಮತಿ ಪಡೆಯುವುದರ ಜೊತೆಗೆ ಆಯಾ ಶಾಲೆಯ ಶಾಲಾಭಿವೃದ್ಧಿ ಮತ್ತು ಮೇಲುಸ್ತುವಾರಿ ಸಮಿತಿಯ ಒಪ್ಪಿಗೆ ನಿರ್ಣಯವನ್ನು ಪಡೆಯಬೇಕು.
19. ನಿರ್ಮಾಣ ಕಾರ್ಯ ಮುಗಿದ ನಂತರ-ನಿರ್ಮಾಣ ಕಾರ್ಯವು ಪೂರ್ವ ನಿಗದಿಪಡಿಸಿದ ನೀಲನಕ್ಷೆ, ಅಂದಾಜು, ಗುಣಮಟ್ಟದಂತೆ ಎಲ್ಲಾ ಕೆಲಸಗಳೂ ಆಗಿರುವುದನ್ನು ಹಾಗು ಟೆಂಡರ್/ಪರಸ್ಪರ ಒಪ್ಪಂದದಲ್ಲಿ ಪ್ರಸ್ತಾಪಿಸಿದ ಎಲ್ಲಾ ನಿಬಂಧನೆಗಳು ಪೂರೈಸಿರುವುದನ್ನು ಪಿ.ಡಬ್ಲ್ಯೂ.ಡಿ, ಕೆ.ಆರ್.ಐ.ಡಿ.ಎಲ್ ಅಥವಾ ನಿರ್ಮಿತಿ ಕೇಂದ್ರದ ಒಬ್ಬರು ಅಭಿಯಂತರರಿಂದ ದೃಢೀಕರಿಸಿಕೊಳ್ಳಬೇಕು. ಆನಂತರವೇ ಕಟ್ಟಡವನ್ನು ಹಸ್ತಾಂತರ ಮಾಡಿಕೊಳ್ಳಬೇಕು.
20. ನಿಗದಿಪಡಿಸಿದ ನಿರ್ದಿಷ್ಟಗಳು ಹಾಗು ಗುಣಮಟ್ಟದಲ್ಲಿ ನಿರ್ಮಾಣ ಕಾರ್ಯ ಆಗುತ್ತಿರುವುದನ್ನು ಸೂಕ್ತವಾದ ತಾಂತ್ರಿಕ ಸಲಹೆ ಪಡೆದುಕೊಂಡು ಪ್ರತಿ ಹಂತದಲ್ಲೂ (ಪಾಯ, ಕಾಲಂ, ಲಿಂಟಲ್, ಗೋಡೆ, ಕಿಟಕಿ, ಬಾಗಿಲು, ರೂಫಿಂಗ್, ಪ್ಲಾಸ್ಟರಿಂಗ್, ನೀರು ಮತ್ತು ಸ್ಯಾನಿಟರಿ ಲೈನ್ ಅಳವಡಿಕೆ, ಫ್ಲೋರಿಂಗ್, ಪೈಂಟಿಂಗ್ ಇತ್ಯಾದಿ) ಆಗಿಂದಾಗ್ಗೆ ಮೇಲ್ವಿಚಾರಣೆ ಮಾಡಿ ಕಾಮಗಾರಿಯು ಗುಣಮಟ್ಟದಲ್ಲಿ ಆಗುತ್ತಿರುವುದನ್ನು ಖಾತರಿಪಡಿಸಿಕೊಳ್ಳಬೇಕು. ಇದು ಗುರುಭವನ ಸಮಿತಿಯ ಜವಾಬ್ದಾರಿ.

## ಗುರುಭವನ ನಿರ್ಮಾಣವಾದ ನಂತರ ನಿರ್ವಹಣೆಗೆ ಮಾರ್ಗಸೂಚಿ:

1. ಗುರುಭವನ ನಿರ್ಮಾಣ, ನಿರ್ವಹಣೆ, ಸಂರಕ್ಷಣೆಯ ಪೂರ್ಣ ಜವಾಬ್ದಾರಿ ಗುರುಭವನ ಸಮಿತಿಯದ್ದು.
2. ಗುರುಭವನವು ಶಿಕ್ಷಕರು-ವಿದ್ಯಾರ್ಥಿಗಳ ಶೈಕ್ಷಣಿಕ ಚಟುವಟಿಕೆಗಳಿಗೆ ಮಾತ್ರ ಸೀಮಿತವಾಗಿರತಕ್ಕದ್ದು.
3. ಯಾವುದೇ ಶೈಕ್ಷಣಿಕ ಚಟುವಟಿಕೆಗಳು ಇಲ್ಲದ ಸಂದರ್ಭದಲ್ಲಿ ಮಾತ್ರ ಇತರೆ ಬಾಬುಗಳಿಗೆ ಬಾಡಿಗೆಗೆ ನೀಡಬೇಕು.
4. ಬಾಡಿಗೆಗೆ ನೀಡುವಾಗ ಸಮಿತಿ ನಿರ್ಣಯಿಸಿ, ನಿರ್ವಹಣಾ ವೆಚ್ಚ ನಿಗದಿಪಡಿಸಿ ನೀಡತಕ್ಕದ್ದು.
5. ಪ್ರತಿ ಬಾರಿ ನೀಡುವಾಗಲು, ಸಂಬಂಧಿಸಿದವರಿಂದ ಮುಂಗಡವಾಗಿ ಹಣ ಪಡೆದು ಕಾಯ್ದಿರಿಸಬೇಕು. ಅಧಿಕೃತವಾಗಿ ರಶೀದಿ / ಸ್ವೀಕೃತಿ ನೀಡಬೇಕು.
6. ವಿವಾದಾತ್ಮಕ ಸಭೆ ಸಮಾರಂಭಗಳಿಗೆ ಗುರುಭವನ ಬಾಡಿಗೆಗೆ ನೀಡಬಾರದು.
7. ಶಾಲೆ/ಕಾಲೇಜಿಗೆ ರಜೆ ಇರುವಾಗ ಮಾತ್ರ ಇತರೆ ಸಭೆ ಸಮಾರಂಭಗಳಿಗೆ ನೀಡತಕ್ಕದ್ದು.
8. ಗುರುಭವನ ನಿರ್ವಹಣೆಯಿಂದ ಆವರಣದಲ್ಲಿಯ ಶಾಲೆಗಳ ದೈನಂದಿನ ಕೆಲಸ ಕಾರ್ಯಗಳಿಗೆ ಯಾವುದೇ ರೀತಿಯ ಅಡಚಣೆ ಆಗಬಾರದು. ಈ ಬಗ್ಗೆ ಸಮಿತಿ ಬಹಳ ಎಚ್ಚರ ವಹಿಸಬೇಕು.
9. ಗುರುಭವನ ಸಮಿತಿಯು ಕನಿಷ್ಠ ತಿಂಗಳಿಗೆ ಒಮ್ಮೆಯಾದರೂ ಕಡ್ಡಾಯವಾಗಿ ಉಪನಿರ್ದೇಶಕರು/ಕ್ಷೇತ್ರ ಶಿಕ್ಷಣಾಧಿಕಾರಿಗಳ ಅಧ್ಯಕ್ಷತೆಯಲ್ಲಿ ಸಭೆ ನಡೆಸಿ, ಗುರುಭವನದ ಆಗು-ಹೋಗುಗಳಿಗೆ ತಿಂಗಳಲ್ಲಿ ಬಾಡಿಗೆ ಮುಖಾಂತರ ಸಂಗ್ರಹವಾದ ಮೊತ್ತದಿಂದ ವಿದ್ಯುತ್ ಬಿಲ್ಲು, ನೀರಿನ ಬಿಲ್ಲು, ಸ್ಥಳೀಯ ತೆರಿಗೆಗಳು ಇತ್ಯಾದಿಗಳನ್ನು ಪಾವತಿಸಿದ ಬಗ್ಗೆ ಹಾಗು ಇತರೆ ವಿಷಯಗಳ ಬಗೆ ಚರ್ಚಿಸಬೇಕು. [illegible] ಪುಸ್ತಕದಲ್ಲಿ ನಡಾವಳಿ ದಾಖಲಿಸಿ ಹಾಜರಿದ್ದ ಸದಸ್ಯರ ಸಹಿ ಪಡೆಯಬೇಕು.

10. ಗುರುಭವನಕ್ಕೆ ಸಂಬಂಧಿಸಿದ ದಾಖಲೆ/ಕಡತಗಳನ್ನು ಉಪನಿರ್ದೇಶಕರ ಕಛೇರಿ/ ಕ್ಷೇತ್ರ ಶಿಕ್ಷಣಾಧಿಕಾರಿಗಳ ಕಛೇರಿಯಲ್ಲಿ ಶಿಕ್ಷಕರ ಕಲ್ಯಾಣ ನಿಧಿ ಜವಾಬ್ದಾರಿ ನಿರ್ವಹಿಸುವ ವಿಷಯ ನಿರ್ವಾಹಕರಿಗೆ ನೀಡಬೇಕು. ಇವರು ಇದನ್ನು ಗುರುಭವನದಲ್ಲಿ ಒಂದು ಕೊಠಡಿಯಲ್ಲಿ ಸಮಿತಿ ಒದಗಿಸುವ ಅಲ್ಮೇರಾದಲ್ಲಿ ಇಟ್ಟುಕೊಳ್ಳಬೇಕು. ಕಾಲಕಾಲಕ್ಕೆ ಕಡತ-ಕಾಗದ ಪತ್ರಗಳನ್ನು ಕಛೇರಿ ಕೈಪಿಡಿ ನಿಯಮದಂತೆ ನಿರ್ವಹಿಸಬೇಕು. ಇವರು ಸಮಿತಿಯ ಸಭೆಯಲ್ಲಿ ಹಾಜರಿದ್ದು ನಡಾವಳಿ ಬರೆದುಕೊಳ್ಳಬೇಕು.

11. ಪ್ರತಿ ಸಾರಿ ಬಾಡಿಗೆಗೆ ನೀಡಬೇಕಾದರೂ, ಸಂಬಂದಿಸಿದವರಿಂದ ಮುಂಗಡ ಪಡೆದು ಅಧಿಕೃತವಾಗಿ ರಸೀದಿ/ಸ್ವೀಕೃತಿ ನೀಡಿ, ಸಮಿತಿಯ ಬ್ಯಾಂಕ್ ಖಾತೆಗೆ ಜಮಾ ಮಾಡಬೇಕು.

12. ಸಮಿತಿಯ ಬ್ಯಾಂಕ್ ಖಾತೆ ನಿರ್ವಹಣೆಗೆ ಸಂಬಂಧಿಸಿದಂತೆ ಪ್ರತಿ ಜಮಾ-ಖರ್ಚು ದಾಖಲಿಸಲು ಒಂದು ಉತ್ತಮವಾದ ನಗದು ಪುಸ್ತಕ ನಿರ್ವಹಣೆ ಆಗಬೇಕು. ಇದರಲ್ಲಿನ ಪ್ರತಿ ವ್ಯವಹಾರವನ್ನು (ಖರ್ಚು-ಜಮಾ) ಉಪನಿರ್ದೇಶಕರು/ ಕ್ಷೇತ್ರ ಶಿಕ್ಷಣಾಧಿಕಾರಿಗಳು ಸಹಿ ಮಾಡಿ ದೃಢೀಕರಿಸಬೇಕು. - ಪ್ರತಿ ಬಾರಿ ಹಣ ಸೆಳೆಯುವಾಗ ಯಾರಿಗೆ ಎಷ್ಟು ಮೊತ್ತ, ಪಿಕೆ. ಚೆಕ್ ನಂಬರ್, ದಿನಾಂಕಗಳನ್ನು ನಮೂದಿಸಿ, ವಿಷಯ ನಿರ್ವಾಹಕರು, ಸಮಿತಿಯ ಕಾರ್ಯದರ್ಶಿಗಳಿಗೆ ಮಂಡಿಸಿ, ಕಾರ್ಯದರ್ಶಿಗಳು ಖಜಾಂಚಿಗಳಿಗೆ ಮಂಡಿಸಿ, ಖಜಾಂಚಿಗಳು ಕಡತದಲ್ಲಿ ಟಿಪ್ಪಣಿ ಬರೆದು ಚೆಕ್‌ಗೆ ಸಹಿ ಮಾಡಿ ಉಪನಿರ್ದೇಶಕರು/ಕ್ಷೇತ್ರ ಶಿಕ್ಷಣಾಧಿಕಾರಿಗಳಿಗೆ ಮಂಡಿಸಿ, ಸಹಿ ಮಾಡಲು ಟಿಪ್ಪಣಿಯಲ್ಲಿ ಷರಾ ದಾಖಲಿಸಿದ ನಂತರ ಸಹಿ ಮಾಡಬೇಕು.

13. ಈ ರೀತಿ ಚೆಕ್ ಹಾಳೆ ಖರ್ಚಾದ ಬಗ್ಗೆ ಉಳಿಕೆ ಚೆಕ್‌ಗಳ ವಿವರ-ಪ್ರತ್ಯೇಕ ವಹಿಯಲ್ಲಿ ದಾಖಲಿಸಬೇಕು. (ಚೆಕ್ ಬುಕ್ ಅಕೌಂಟ್) ಇದನ್ನು ಅಧ್ಯಕ್ಷರು ದೃಢೀಕರಿಸಬೇಕು.

14. ಗುರುಭವನದಲ್ಲಿ ಕಾಗದ ಪತ್ರಗಳ ರವಾನೆ / ಸ್ವೀಕೃತಿಗೆ ಗೆ ಮತ್ತು ಇಂದ ಟಪಾಲು ಪುಸ್ತಕ ನಿರ್ವಹಿಸಬೇಕು.

15. ಚೆಕ್ ವಿತರಿಸಿದ / ರವಾನಿಸಿದ ಬಗ್ಗೆ ಸೂಕ್ತ ದಾಖಲೆಗಳು ಸ್ವೀಕೃತಿಗಳನ್ನು ಅಧಿಕೃತವಾಗಿ ನಿರ್ವಹಿಸಬೇಕು.

16. ಗುರುಭವನ ಕಛೇರಿ ನಿರ್ವಹಣೆಯ ಜವಾಬ್ದಾರಿ ವಹಿಸಿದ ಉಪನಿರ್ದೇಶಕರ ಕಛೇರಿ/ಕ್ಷೇತ್ರ ಶಿಕ್ಷಣಾಧಿಕಾರಿಗಳ ಕಛೇರಿ ವಿಷಯ ನಿರ್ವಾಹಕರಿಗೆ ಗುರುಭವನ ಬಾಡಿಗೆಯಿಂದ ಬಂದ ಆದಾಯದಲ್ಲಿ, ಮಾಹೆಯಾನ ಒಂದಿಷ್ಟು ಸಂಭಾವನೆ ನಿಗದಿಪಡಿಸಿ ನೀಡಬೇಕು.

17. ಗುರುಭವನ ಸ್ವಚ್ಛತೆ, ಬಾಗಿಲು ತೆರೆಯುವುದು-ಹಾಕುವುದು-- ಮುಂತಾದ ಕೆಲಸಗಳನ್ನು ಉಪನಿರ್ದೇಶಕರು/ಕ್ಷೇತ್ರ ಶಿಕ್ಷಣಾಧಿಕಾರಿಗಳ ಕಛೇರಿಯ ಒಬ್ಬರು ಗ್ರೂಪ್ "ಡಿ" ನೌಕರರಿಗೆ ವಹಿಸಬೇಕು. ಇವರಿಗೂ ಗುರುಭವನ ಆದಾಯದಲ್ಲಿ ಒಂದಿಷ್ಟು ಮಾಹೆಯಾನ ಸಂಭಾವನೆ ನಿಗದಿಪಡಿಸಿ ನೀಡಬೇಕು.

18. ಸಭೆ/ಸಮಾರಂಭಗಳಿದ್ದು, ಹೆಚ್ಚುವರಿ ಸ್ವಚ್ಛತೆ ನಿರ್ವಹಣೆ ಇದ್ದಲ್ಲಿ ದಿನಗೂಲಿ ರೂಪದಲ್ಲಿ ನೇಮಿಸಿಕೊಂಡು ನಿರ್ವಹಿಸುವುದು.

19. ಶಿಕ್ಷಣ ಇಲಾಖೆಯ ಕಾರ್ಯಕ್ರಮ ಸಭೆ-ಸಮಾರಂಭಗಳಿಗೆ ಉಚಿತವಾಗಿ ನೀಡಬೇಕು. ಯಾವುದೇ ಬಾಡಿಗೆ ತೆಗೆದುಕೊಳ್ಳಬಾರದು. ಆದರೆ ಅವಕಾಶವಿದ್ದಲ್ಲಿ ವಿದ್ಯುತ್ ಶುಲ್ಕ, ನೀರು, ಸ್ವಚ್ಛತಾ ಶುಲ್ಕ ಪಡೆದುಕೊಳ್ಳಬಹುದು.

20. ಪ್ರತಿ ವರ್ಷ ಮಾರ್ಚ್ 31 ರಲ್ಲಿದ್ದಂತೆ ಗುರುಭವನದ ವಾರ್ಷಿಕ ಆದಾಯ, ಖರ್ಚಿನ ವಿವರಗಳನ್ನು ರಿಜಿಸ್ಟರ್ಡ್ ಚಾರ್ಟೆಡ್ ಅಕೌಂಟೆಂಟ್ ರವರಿಂದ ಆಡಿಟ್ ಮಾಡಿಸಿ, ಆಡಿಟ್ ವರದಿಗೆ ಕ್ಷೇತ್ರ ಶಿಕ್ಷಣಾಧಿಕಾರಿಗಳು ಹಾಗು ಆಡಿಟರ್ ರವರು ದೃಢೀಕರಿಸಿ, ಅದರ ಒಂದು ಪ್ರತಿಯನ್ನು ಕಾರ್ಯದರ್ಶಿ/ಖಜಾಂಚಿಗಳು ಕರ್ನಾಟಕ ರಾಜ್ಯ ಶಿಕ್ಷಕರ ಕಲ್ಯಾಣ ನಿಧಿ, ಬೆಂಗಳೂರು ರವರಿಗೆ ಏಪ್ರಿಲ್ 30 ರೊಳಗೆ ತಪ್ಪದೆ ಸಲ್ಲಿಸಬೇಕು.

206

3/51

21. ಸಮಿತಿಗಳು ತಮ್ಮ ಆದಾಯದ ಹಣದಲ್ಲಿ ಗುರುಭವನಕ್ಕೆ ಬೇಕಾಗುವ ಪೀಠೋಪಕರಣ, ಸಭೆಗಳಿಗೆ ಕುರ್ಚಿಗಳು, ದೀಪಾಲಂಕಾರ ಧ್ವನಿವರ್ಧಕಗಳನ್ನು, ಕಂಪ್ಯೂಟರ್, ಜನರೇಟರ್ ಮುಂತಾದ ಸಲಕರಣೆಗಳನ್ನು ಖರೀದಿಸಿ, ಇವುಗಳಿಗೂ ಸೂಕ್ತ ಬಾಡಿಗೆ ಪಡೆಯಬಹುದು.

22. ವರ್ಷಕ್ಕೆ ಒಂದು ಬಾರಿ ಸುಣ್ಣ-ಬಣ್ಣ, ಮೈನರ್ ದುರಸ್ತಿ ನಿರ್ವಹಣೆ ಮಾಡಿಸಬೇಕು. ಇದಕ್ಕೆ ಅಧಿಕೃತವಾಗಿ ನಡಾವಳಿ ದಾಖಲಿಸಿ ಖರ್ಚು ಭರಿಸಬೇಕು.

23. ಸಭೆ-ಸಮಾರಂಭಗಳಿಗೆ ಬಾಡಿಗೆಗೆ ನೀಡಿದಾಗ ಹೆಚ್ಚು ಜನರ ಬಳಕೆ ಆದಾಗ ಶೌಚಾಲಯಗಳ ನಿರ್ವಹಣೆಗೆ ದಿನಗೂಲಿ ಆಧಾರದಲ್ಲಿ ಒಬ್ಬರು ಸ್ಕ್ಯಾವೆಂಜರ್‌ನ್ನು ನೇಮಿಸಿಕೊಂಡು ಸಕಾಲಿಕ ಸ್ವಚ್ಛತಾ ಕಾರ್ಯ ಕೈಗೊಳ್ಳಬೇಕು.

24. ಗುರುಭವನ ಆವರಣದಲ್ಲಿ ಅನಗತ್ಯ-ಬಾಹ್ಯ-ಖಾಸಗಿ ವಾಹನಗಳ ನಿಲುಗಡೆಯನ್ನು ನಿಷೇಧಿಸಿ, ಆವರಣ ಸ್ವಚ್ಛವಾಗಿ ಆಕರ್ಷಣೀಯವಾಗಿ, ಸಾಧ್ಯವಾದಲ್ಲಿ ಮರ, ಗಿಡ, ಕೈತೋಟ ಹೂವಿನ ಕುಂಡಗಳನ್ನು ನಿರ್ವಹಿಸಬಹುದು.

25. ಒಟ್ಟಾರೆ ಗುರುಭವನಗಳು ಶಿಕ್ಷಣ ಇಲಾಖೆಯ ಶೈಕ್ಷಣಿಕ ಮತ್ತು ಸಾಂಸ್ಕೃತಿಕ ಮಾದರಿ ಕೇಂದ್ರಗಳಾಗಿ ಇಲಾಖೆಯ ಪೂರಕ ಕಾರ್ಯಕ್ರಮಗಳಿಗೆ ಬಳಕೆಯಾಗಬೇಕು.

26. ಸಾರ್ವಜನಿಕ ಶಿಕ್ಷಣ ಇಲಾಖೆಯ ಹಿರಿಯ ಅಧಿಕಾರಿಗಳು ತಮ್ಮ ಇಲಾಖೆಯ ತಪಾಸಣೆ ಮತ್ತು ಇತರೆ ಕಾರ್ಯ ನಿಮಿತ್ತ ಜಿಲ್ಲೆಗಳಿಗೆ ಭೇಟಿ ನೀಡಿದಾಗ ಮತ್ತು ಜಿಲ್ಲಾ ಪಂಚಾಯತ ಅಧಿಕಾರಿಗಳು ತಾಲ್ಲೂಕುಗಳಿಗೆ ಭೇಟಿ ನೀಡಿದಾಗ ಗುರುಭವನಗಳಿಗೆ ಭೇಟಿ ನೀಡಿ, ಅಲ್ಲಿನ ಸ್ವಚ್ಛತೆ, ನಿಯಮಿತ ಬಳಕೆ, ಕಡತ, ನಗದು ಪುಸ್ತಕ, ರಸೀದಿ ಪುಸ್ತಕ ಮತ್ತು ಇತರೆ ದಾಖಲೆಗಳನ್ನು ಪರಿಶೀಲಿಸಿ Visitors ಪುಸ್ತಕದಲ್ಲಿ ಪರಿಶೀಲನಾ ವರದಿ ಅಭಿಪ್ರಾಯಗಳನ್ನು ದಾಖಲಿಸಬೇಕು.

27. ಪ್ರತಿ ವರ್ಷ ಅತ್ಯಂತ ಉತ್ತಮವಾಗಿ ನಿರ್ವಹಣೆ ಮಾಡಿದ ರಾಜ್ಯದ ಒಂದು ಗುರುಭವನಕ್ಕೆ ಕರ್ನಾಟಕ ರಾಜ್ಯ ಶಿಕ್ಷಕರ ಕಲ್ಯಾಣ ನಿಧಿಯಿಂದ ರೂ. 10,000/- ನಗದು ಬಹುಮಾನ ನೀಡಲಾಗುವುದು. ಇದನ್ನು ಗುರುಭವನ ಸುಧಾರಣೆಗಾಗಿ ಮಾತ್ರ ಬಳಸಬೇಕು.

28. ಪ್ರತಿ ವರ್ಷ ಶಿಕ್ಷಕರ ದಿನಾಚರಣೆ ಸಂದರ್ಭದಲ್ಲಿ ಗುರುಭವನಗಳಿಗೆ ದೀಪಾಲಂಕಾರ ಮಾಡಿಸಿ, ಶೋಭೆ ಬರುವಂತೆ ಮಾಡುವುದು. ಹಾಗು ಇದರ ಅಸ್ತಿತ್ವ ಹಾಗು ಉತ್ತಮ ನಿರ್ವಹಣೆಗೆ ಸಾರ್ವಜನಿಕರ ಗಮನ ಸೆಳೆಯುವುದು.

29. ಗುರುಭವನಗಳಲ್ಲಿ ಕರ್ನಾಟಕ ರಾಜ್ಯ ಶಿಕ್ಷಕರ ಕಲ್ಯಾಣ ನಿಧಿ, ಕರ್ನಾಟಕ ರಾಜ್ಯ ವಿದ್ಯಾರ್ಥಿಗಳ ಕ್ಷೇಮಾಭಿವೃದ್ಧಿ ನಿಧಿ. ಹಾಗೂ ರಾಷ್ಟ್ರೀಯ ಶಿಕ್ಷಕರ ಕಲ್ಯಾಣ ಪ್ರತಿಷ್ಠಾನಗಳಿಂದ ಶಿಕ್ಷಕರಿಗೆ ಹಾಗು ವಿದ್ಯಾರ್ಥಿಗಳಿಗೆ ದೊರೆಯುವ ವಿವಿಧ ಸೌಲಭ್ಯಗಳು-ಇವನ್ನು ಪಡೆಯಲು ಅರ್ಜಿ ಸಲ್ಲಿಸಲು ವಿಧಾನ, ಲಗತ್ತಿಸಬೇಕಾದ ದಾಖಲೆಗಳು, ವಿವರಗಳನ್ನಿಟ್ಟು-ಅಗತ್ಯ ಇರುವ ಶಿಕ್ಷಕರು-ವಿದ್ಯಾರ್ಥಿಗಳಿಗೆ ಮಾರ್ಗದರ್ಶನ ನೆರವು ನೀಡಬೇಕು. ಸೌಲಭ್ಯಗಳ ಫಲಕಗಳನ್ನು ಪ್ರದರ್ಶಿಸುವುದು

30. ಗುರುಭವನಗಳಲ್ಲಿ ಕೇವಲ ಸಭೆ-ಸಮಾರಂಭಗಳಲ್ಲದೆ ಶಿಕ್ಷಣ ವ್ಯವಸ್ಥೆ ಸುಧಾರಣೆಗೆ ಸಂಬಂಧಿಸಿದ ವಿವಿಧ ವಿಚಾರಗಳ ಬಗ್ಗೆ ಆಗಿಂದಾಗ್ಗೆ ತಜ್ಞರನ್ನು ಕರೆಸಿ, ವಿಚಾರ ಗೋಷ್ಠಿಗಳನ್ನು ನಡೆಸಬಹುದು. ಯಾವ ಸಂದರ್ಭದಲ್ಲಿ ಯಾರು ಭಾಗವಹಿಸಿದ್ದರು ಎಂಬ ಬಗ್ಗೆ ದಾಖಲೆಗಳನ್ನು ನಿರ್ವಹಿಸುವುದು.

ಈ ಮಾರ್ಗಸೂಚಿಯಲ್ಲಿ ಯಾವುದೇ ಉಲ್ಲಂಘನೆಯಾದಲ್ಲಿ ಜಿಲ್ಲಾ ಗುರುಭವನ ಆದಲ್ಲಿ ಉಪನಿರ್ದೇಶಕರು(ಆಡಳಿತ)ಹಾಗೂ ತಾಲ್ಲೂಕು ಗುರುಭವನ ಆದಲ್ಲಿ ಕ್ಷೇತ್ರ ಶಿಕ್ಷಣಾಧಿಕಾರಿಗಳನ್ನು ಜವಾಬ್ದಾರಿ ಮಾಡಲಾಗುವುದು.

ಮೊಹಮ್ಮದ್ ಮೊಹಸಿನ್, ಭಾ.ಆ.ಸೇ
ಆಯುಕ್ತರು, ಸಾರ್ವಜನಿಕ ಶಿಕ್ಷಣ ಇಲಾಖೆ
ಹಾಗು ಕಾರ್ಯದರ್ಶಿ/ಖಜಾಂಚಿಗಳು, ಕರ್ನಾಟಕ
ರಾಜ್ಯ ಶಿಕ್ಷಕರ ಕಲ್ಯಾಣ ನಿಧಿ

ಪ್ರತಿಯನ್ನು:

1. ಸರ್ಕಾರದ ಕಾರ್ಯದರ್ಶಿಗಳು, ಪ್ರಾಥಮಿಕ ಮತ್ತು ಪ್ರೌಢಶಿಕ್ಷಣ. ಬಹುಮಹಡಿಗಳ ಕಟ್ಟಡ, ಬೆಂಗಳೂರು-1 ಇವರಿಗೆ.
2. ಆಯುಕ್ತರು, ಸಾರ್ವಜನಿಕ ಶಿಕ್ಷಣ ಇಲಾಖೆ, ನೃಪತುಂಗ ರಸ್ತೆ, ಬೆಂಗಳೂರು ಇವರಿಗೆ.
3. ರಾಜ್ಯ ಯೋಜನಾ ನಿರ್ದೇಶಕರು, ಸರ್ವ ಶಿಕ್ಷ ಅಭಿಯಾನ/ ರಾಜ್ಯ ಮಾಹಿತಿ ಶಿಕ್ಷಣ ಆಯೋಗ ಇವರಿಗೆ.
4. ಅಪರ ಆಯುಕ್ತರು, ಸಾರ್ವಜನಿಕ ಶಿಕ್ಷಣ ಇಲಾಖೆ, ಧಾರವಾಡ / ಗುಲ್ಬರ್ಗ ಇವರಿಗೆ.
5. ಸಾರ್ವಜನಿಕ ಶಿಕ್ಷಣ ಇಲಾಖೆಯ ಎಲ್ಲಾ ನಿರ್ದೇಶಕರಿಗೆ.
6. ಸಾರ್ವಜನಿಕ ಶಿಕ್ಷಣ ಇಲಾಖೆಯ ಎಲ್ಲಾ ಸಹ ನಿರ್ದೇಶಕರಿಗೆ.
7. ಸಾರ್ವಜನಿಕ ಶಿಕ್ಷಣ ಇಲಾಖೆಯ ಎಲ್ಲಾ ಉಪ ನಿರ್ದೇಶಕರು(ಆಡಳಿತ) ರವರಿಗೆ.
8. ಸಾರ್ವಜನಿಕ ಶಿಕ್ಷಣ ಇಲಾಖೆಯ ಎಲ್ಲಾ ಕ್ಷೇತ್ರ ಶಿಕ್ಷಣಾಧಿಕಾರಿಗಳಿಗೆ.
9. ಅಧ್ಯಕ್ಷರು/ಕಾರ್ಯದರ್ಶಿಗಳು, ಕರ್ನಾಟಕ ರಾಜ್ಯ ಪ್ರೌಢಶಾಲಾ ಮುಖ್ಯ ಶಿಕ್ಷಕರ ಸಂಘ ಇವರಿಗೆ.
10. ಅಧ್ಯಕ್ಷರು/ಕಾರ್ಯದರ್ಶಿಗಳು, ಕರ್ನಾಟಕ ರಾಜ್ಯ ಪ್ರೌಢಶಾಲಾ ಸಹ ಶಿಕ್ಷಕರ ಸಂಘ ಇವರಿಗೆ.
11. ಅಧ್ಯಕ್ಷರು/ಕಾರ್ಯದರ್ಶಿಗಳು, ಕರ್ನಾಟಕ ರಾಜ್ಯ ಪ್ರಾಥಮಿಕ ಶಾಲಾ ಶಿಕ್ಷಕರ ಸಂಘ ಇವರಿಗೆ.
12. ಅಧ್ಯಕ್ಷರು/ಕಾರ್ಯದರ್ಶಿಗಳು, ಜಿಲ್ಲಾ ಹಂತದ ಪ್ರೌಢಶಾಲಾ ಮುಖ್ಯ ಶಿಕ್ಷಕರ ಸಂಘ ಇವರಿಗೆ.
13. ಅಧ್ಯಕ್ಷರು/ಕಾರ್ಯದರ್ಶಿಗಳು, ಜಿಲ್ಲಾ ಹಂತದ ಪ್ರೌಢಶಾಲಾ ಸಹ ಶಿಕ್ಷಕರ ಸಂಘ ಇವರಿಗೆ.
14. ಅಧ್ಯಕ್ಷರು/ಕಾರ್ಯದರ್ಶಿಗಳು, ಜಿಲ್ಲಾ ಹಂತದ ಪ್ರಾಥಮಿಕ ಶಾಲಾ ಶಿಕ್ಷಕರ ಸಂಘ ಇವರಿಗೆ.
15. ಅಧ್ಯಕ್ಷರು/ಕಾರ್ಯದರ್ಶಿಗಳು, ತಾಲ್ಲೂಕು ಹಂತದ ಪ್ರೌಢಶಾಲಾ ಮುಖ್ಯ ಶಿಕ್ಷಕರ ಸಂಘ ಇವರಿಗೆ.
16. ಅಧ್ಯಕ್ಷರು/ಕಾರ್ಯದರ್ಶಿಗಳು, ತಾಲ್ಲೂಕು ಹಂತದ ಪ್ರೌಢಶಾಲಾ ಸಹ ಶಿಕ್ಷಕರ ಸಂಘ ಇವರಿಗೆ.
17. ಅಧ್ಯಕ್ಷರು/ಕಾರ್ಯದರ್ಶಿಗಳು, ತಾಲ್ಲೂಕು ಹಂತದ ಪ್ರಾಥಮಿಕ ಶಾಲಾ ಶಿಕ್ಷಕರ ಸಂಘ ಇವರಿಗೆ.
18. ಪ್ರಕಟಣೆಗಾಗಿ ಶಿಕ್ಷಣ ವಾರ್ತೆ ವಿಭಾಗ, ಆಯುಕ್ತರ ಕಛೇರಿ, ಸಾರ್ವಜನಿಕ ಶಿಕ್ಷಣ ಇಲಾಖೆ. ಬೆಂಗಳೂರು ಇವರಿಗೆ.
19. ಕಛೇರಿ ಪ್ರತಿ.

ಕರ್ನಾಟಕ ರಾಜ್ಯ ಶಿಕ್ಷಕರ ಕಲ್ಯಾಣ ನಿಧಿ ಹಾಗೂ ವಿದ್ಯಾರ್ಥಿಗಳ ಕ್ಷೇಮಾಭಿವೃದ್ಧಿ ನಿಧಿ ಮತ್ತು
ರಾಷ್ಟ್ರೀಯ ಶಿಕ್ಷಕರ ಕಲ್ಯಾಣ ಪ್ರತಿಷ್ಠಾನ, ಶಿಕ್ಷಕರ ಸದನ, ಕೆ.ಜಿ.ರಸ್ತೆ, ಬೆಂಗಳೂರು-02.
ದೂರವಾಣಿ: 080-22483434 ಫ್ಯಾಕ್ಸ್: 080-22483860 ಇ-ಮೇಲ್: kstbf63@gmail.com

ಸಂಖ್ಯೆ: ಶಿ.ಕ.ನಿ/ಗು.ಭ.ಧ-ಪರಿಷ್ಕರಣೆ/01/2017-18

ದಿನಾಂಕ: 03-03-2018

## ಸುತ್ತೋಲೆ

ವಿಷಯ:- ಜಿಲ್ಲಾ ಮತ್ತು ತಾಲ್ಲೂಕ್ ಹಂತದಲ್ಲಿ ಗುರುಭವನಗಳ ನಿರ್ಮಾಣ ಮಾಡಲು ನಿಧಿಗಳಿಂದ ನೀಡುತ್ತಿರುವ ಧನ ಸಹಾಯವನ್ನು ಪರಿಷ್ಕರಿಸುವ ಬಗ್ಗೆ.

ಉಲ್ಲೇಖ:-
1. ಈ ಕಛೇರಿ ಸುತ್ತೋಲೆ ಸಂಖ್ಯೆ: ಎಫ್.1/ಗು.ಭ.ಅಪೂರ್ಣ.ಕಾ/ ಹೆ.ಅ.ಮಂ-01/2009-10 ದಿನಾಂಕ: 16-07-2009.
2. ಈ ಕಛೇರಿಯ ಸುತ್ತೋಲೆ ಸಂಖ್ಯೆ: ಶಿಕನಿ/ಆಡಳಿತ(1)ಗು.ಭ.ಇತರ 28(ಪಿ)/2013-14/ದಿನಾಂಕ: 03-10-2013.
3. ಈ ಕಛೇರಿಯ ಸುತ್ತೋಲೆ ಸಂಖ್ಯೆ: ಶಿ.ಕ.ನಿ.ಗು.ಭ.ಮಾ.ಸೂ.01/ 2014-15 ದಿನಾಂಕ: 11-09-2014.
4. ದಿನಾಂಕ: 01-02-2018 ರಂದು ನಡೆದ ನಿಧಿಗಳ ರಾಜ್ಯ ಸಮಿತಿ ಸಭೆಯ ನಿರ್ಣಯಗಳು.

** ** **

ವಿಷಯ ಮತ್ತು ಉಲ್ಲೇಖಕ್ಕೆ ಸಂಬಂಧಿಸಿದಂತೆ ಜಿಲ್ಲಾ ಮತ್ತು ತಾಲ್ಲೂಕು ಕೇಂದ್ರಗಳಲ್ಲಿ ಗುರುಭವನ ನಿರ್ಮಿಸಲು ಅನುದಾನ ನೀಡುವುದರ ಮೂಲಕ ಶಿಕ್ಷಕರ ಮತ್ತು ವಿದ್ಯಾರ್ಥಿಗಳ ವಿವಿಧ ಶೈಕ್ಷಣಿಕ ಕಾರ್ಯಕ್ರಮಗಳಿಗೆ ಪ್ರೋತ್ಸಾಹ ನೀಡಲಾಗುತ್ತಿದೆ. ಸಾರ್ವಜನಿಕ ಶಿಕ್ಷಣ ಇಲಾಖೆಯ ವ್ಯಾಪ್ತಿಗೆ ಬರುವ ಶಾಲೆಗಳ ಆವರಣದಲ್ಲಿ ಹೆಚ್ಚುವರಿಯಾಗಿರುವ ಖಾಲಿ ನಿವೇಶನಗಳಲ್ಲಿ ಅಥವಾ ದಾನಿಗಳಿಂದ ಪಡೆದ ನಿವೇಶನಗಳಲ್ಲಿ ಇಲಾಖಾ ಮುಖ್ಯಸ್ಥರ ಅನುಮತಿ ಪಡೆದು ಗುರುಭವನಗಳನ್ನು ನಿರ್ಮಿಸಲಾಗುತ್ತಿರುವುದು ಸರಿಯಷ್ಟೆ. ಕರ್ನಾಟಕ ರಾಜ್ಯ ಶಿಕ್ಷಕರ ಕಲ್ಯಾಣ ನಿಧಿಯಿಂದ ನೀಡುವ ಅನುದಾನದ ಜೊತೆಗೆ ಉಳಿದ ಮೊತ್ತವನ್ನು ವಿಧಾನಸಭೆ, ವಿಧಾನ ಪರಿಷತ್ ಹಾಗೂ ಲೋಕಸಭಾ ಸದಸ್ಯರ ಕ್ಷೇತ್ರಾಭಿವೃದ್ಧಿ ನಿಧಿಯಿಂದ ಹಾಗೂ ಸ್ಥಳೀಯವಾಗಿ ಇತರೆ ಮೂಲಗಳಿಂದ ಹೊಂದಿಸಿಕೊಂಡು, ಇದಕ್ಕೆ ಅಗತ್ಯ ನೀಲಿನಕ್ಷೆ ಮತ್ತು ಅಂದಾಜು ವೆಚ್ಚ ಸಿದ್ಧಪಡಿಸಿ, ನಿರ್ಮಾಣಕ್ಕೆ ಸ್ಥಳೀಯ ಪ್ರಾಧಿಕಾರಿಗಳಾದ ಮಹಾನಗರಪಾಲಿಕೆ, ನಗರಸಭೆ, ಪುರಸಭೆ ಮತ್ತು ಪಟ್ಟಣ ಪಂಚಾಯಿತಿಗಳಿಂದ ನಿಯಮಾನುಸಾರ ಪರವಾನಗಿ ಪಡೆದು ನಿರ್ಮಿಸಲಾಗುತ್ತಿದೆ. ಉಲ್ಲೇಖ-1, 2 ಮತ್ತು 3ರ ಸುತ್ತೋಲೆಗಳಲ್ಲಿ ಗುರುಭವನ ನಿರ್ಮಾಣಕ್ಕೆ ಮತ್ತು ನಿರ್ವಹಣೆಗೆ ಸಂಬಂಧಿಸಿದಂತೆ ಮಾರ್ಗಸೂಚಿಯನ್ನು ಹಾಗೂ ನಿಧಿಗಳ ಕಛೇರಿಯಿಂದ ನೀಡಲಾಗುವ ಅನುದಾನದ ಬಗ್ಗೆ ವಿವರ ನೀಡಲಾಗಿದೆ.

ಉಲ್ಲೇಖ-4ರಂತೆ ದಿನಾಂಕ: 01-02-2018 ರಂದು ನಡೆದ ನಿಧಿಗಳ ರಾಜ್ಯ ಸಮಿತಿ ಸಭೆಯಲ್ಲಿ ರಾಜ್ಯದ ವಿವಿಧ ಜಿಲ್ಲೆ ಹಾಗೂ ತಾಲ್ಲೂಕುಗಳಲ್ಲಿ ಗುರುಭವನ ಕಟ್ಟಡಗಳು ನಿರ್ಮಾಣಗೊಂಡಿಲ್ಲದ ಬಗ್ಗೆ ವಿಸ್ತೃತ ಚರ್ಚೆಯನ್ನು ನಡೆಸಲಾಯಿತು. ಜಿಲ್ಲಾ ಮತ್ತು ತಾಲ್ಲೂಕು ಕೇಂದ್ರಗಳಲ್ಲಿ ಗುರುಭವನ ನಿರ್ಮಾಣಕ್ಕೆ ಪ್ರಸ್ತುತ ನೀಡುತ್ತಿರುವ ಅನುದಾನವನ್ನು ಪರಿಷ್ಕರಿಸಿ, ಜಿಲ್ಲಾ ಕೇಂದ್ರಗಳಲ್ಲಿ ಗುರುಭವನ ನಿರ್ಮಾಣಕ್ಕೆ ಗರಿಷ್ಠ ರೂ.1.00 ಕೋಟಿ ಹಾಗೂ ತಾಲ್ಲೂಕು ಕೇಂದ್ರದಲ್ಲಿ ಗುರುಭವನ ನಿರ್ಮಾಣಕ್ಕೆ ಗರಿಷ್ಠ ರೂ.50.00 ಲಕ್ಷಗಳ ಅನುದಾನವನ್ನು ದಿನಾಂಕ: 01-04-2018 ರಿಂದ ಜಾರಿಗೆ ಬರುವಂತೆ ಮಂಜೂರು ಮಾಡಲು ನಿರ್ಣಯಿಸಲಾಯಿತು.

ಈ ಹಿನ್ನಲೆಯಲ್ಲಿ ಜಿಲ್ಲಾ ಮತ್ತು ತಾಲ್ಲೂಕು ಕೇಂದ್ರದಲ್ಲಿ ಗುರುಭವನ ನಿರ್ಮಾಣಕ್ಕೆ ನಿಧಿಗಳ ವತಿಯಿಂದ ನೀಡಲಾಗುತ್ತಿರುವ ಅನುದಾನವನ್ನು ದಿನಾಂಕ: 01-04-2018ರ ನಂತರ ಹೊಸದಾಗಿ ಸಲ್ಲಿಸಲ್ಪಡುವ ಪ್ರಸ್ತಾವನಗಳಿಗೆ ಅನ್ವಯಿಸುವಂತೆ ಈ ಕೆಳಕಂಡಂತೆ ಪರಿಷ್ಕರಿಸಿದೆ.

# ಕರ್ನಾಟಕ ವಿಧಾನ ಸಭೆ

| | |
|---|---|
| **ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ** | 3029 |
| **ಸದಸ್ಯರ ಹೆಸರು** | ಶ್ರೀ ಅಭಯ್ ಪಾಟೀಲ್<br>(ಬೆಳಗಾವಿ ದಕ್ಷಿಣ) |
| **ಉತ್ತರಿಸಬೇಕಾದ ದಿನಾಂಕ** | 18.03.2021 |
| **ಉತ್ತರಿಸಬೇಕಾದ ಸಚಿವರು** | ಮಾನ್ಯ ವಿದ್ಯುನ್ಮಾನ, ಮಾಹಿತಿ ತಂತ್ರಜ್ಞಾನ, ಜೈವಿಕ ತಂತ್ರಜ್ಞಾನ ಹಾಗೂ ವಿಜ್ಞಾನ ಮತ್ತು ತಂತ್ರಜ್ಞಾನ ಸಚಿವರು |

| ಪ್ರಶ್ನೆ | ಉತ್ತರ |
|---|---|
| ಅ) ಬೆಳಗಾವಿ ನಗರದಲ್ಲಿ ಐಟಿ ಪಾರ್ಕ್ ಸ್ಥಾಪಿಸುವ ಕುರಿತು ಸಲ್ಲಿಕೆಯಾಗಿರುವ ಪ್ರಸ್ತಾವನೆಗಳ ವಿವರ ನೀಡುವುದು;<br><br>ಆ) ಉದ್ದೇಶಿತ ಯೋಜನೆಯನ್ನು ಎಷ್ಟು ಎಕರೆ ಪ್ರದೇಶದಲ್ಲಿ ಕೈಗೊಳ್ಳಲಾಗುವುದು; ಸದರಿ ಪ್ರದೇಶವು ಯಾರ ಒಡೆತನದಲ್ಲಿದೆ;<br><br>ಇ)ಜಮೀನು ಹಸ್ತಾಂತರಿಸಿಕೊಳ್ಳುವ ಪ್ರಕ್ರಿಯೆಯ ವಿವರಗಳನ್ನು ನೀಡುವುದು;<br><br>ಈ) ಐಟಿ ಪಾರ್ಕ್ ಸ್ಥಾಪನೆಗೆ ಪ್ರಾಥಮಿಕ ರೂಪುರೇಷೆಗಳನ್ನು ರೂಪಿಸಲಾಗಿದೆಯೇ; ಇಲ್ಲವಾದಲ್ಲಿ ಯಾವಾಗ ರೂಪಿಸಲಾಗುವುದು; | ಬೆಳಗಾವಿಯಲ್ಲಿ ಐಟಿ ಪಾರ್ಕ್ ಸ್ಥಾಪಿಸಲು ಬೆಳಗಾವಿ ಜಿಲ್ಲೆಯ ಬೆಳಗಾವಿ ತಾಲ್ಲೂಕಿನ ವಾಘೇವಾಡ ಗ್ರಾಮದ ರಿ.ಸ.ನಂ: 152, ಪ್ಲಾಟ್ ನಂ:1ರಲ್ಲಿ 169 ಎಕರೆ 32 ಗುಂಟೆ ಜಮೀನನ್ನು ಕೆ.ಐ.ಎ.ಡಿ.ಬಿ ಮೂಲಕ ಮಾಹಿತಿ ತಂತ್ರಜ್ಞಾನ ಪಾರ್ಕ್ ಸ್ಥಾಪಿಸಲು ಬೆಳಗಾವಿ ಜಿಲ್ಲಾಧಿಕಾರಿಯವರಿಂದ ದಿನಾಂಕ: 18.01.2007ರ ಆದೇಶದಲ್ಲಿ ಮಂಜೂರಾತಿ ನೀಡಲಾಗಿತ್ತು. ಜಮೀನಿನ ಬಗ್ಗೆ ನ್ಯಾಯಾಲಯ ಪ್ರಕರಣವಿದ್ದು, 2017ರಲ್ಲಿ ಪ್ರಕರಣವು ಇತ್ಯರ್ಥವಾಗಿದೆ. ಈ ಉದ್ದೇಶಕ್ಕೆ ಮಂಜೂರಾಗಿದ್ದ ಜಮೀನನ್ನು ಮಾಹಿತಿ ತಂತ್ರಜ್ಞಾನ ಮತ್ತು ಜೈವಿಕ ತಂತ್ರಜ್ಞಾನ ನಿರ್ದೇಶನಾಲಯಕ್ಕೆ ಹಸ್ತಾಂತರ ಮಾಡುವಂತೆ ಕರ್ನಾಟಕ ಕೈಗಾರಿಕಾ ಪ್ರದೇಶಾಭಿವೃದ್ಧಿ ಮಂಡಳಿ (KIADB) ರವರಿಗೆ ದಿನಾಂಕ: 02.07.2018 ಹಾಗೂ ದಿನಾಂಕ: 07.01.2019 ರಂದು ಪತ್ರ ಬರೆದು ಜಮೀನು ಹಸ್ತಾಂತರ ಮಾಡಲು ಕೋರಲಾಗಿದ್ದು, ಇದುವರೆಗೆ ಜಮೀನು ಹಸ್ತಾಂತರವಾಗಿರುವುದಿಲ್ಲ.<br><br>ಮುಂದುವರೆದು, ಬೆಳಗಾವಿ ಜಿಲ್ಲೆಯ ಬೆಳಗಾವಿ ಗ್ರಾಮದ ರಿ.ಸ.ನಂ. 1304 ರಿಂದ 1397ರ ಹುಲ್ಲುಗಾವಲು (ಕುರಣ) ಜಮೀನುಗಳನ್ನು ಸ್ವಾತಂತ್ರ್ಯ ಪೂರ್ವದಲ್ಲಿ ಭಾರತೀಯ ಸೇನೆಯ ಉಪಯೋಗಕ್ಕಾಗಿ ನೀಡಲಾಗಿತ್ತು. ಈ ಜಮೀನುಗಳು ಬೆಳಗಾವಿಯಲ್ಲಿ ನಿರ್ಮಿಸಲಾಗಿರುವ ಸುವರ್ಣಸೌಧದ ಸಮೀಪದಲ್ಲಿ ಇರುತ್ತವೆ. ಈ ಹಿಂದೆ ರಕ್ಷಣಾ ಇಲಾಖೆಯ ಉಪಯೋಗಕ್ಕಾಗಿ ಕಾಯ್ದಿರಿಸಲಾದ ಈ ಜಮೀನನ್ನು ಸರ್ಕಾರದ ವಿವಿಧ ಅಭಿವೃದ್ಧಿ ಕಾರ್ಯಗಳಿಗೆ ಹಾಗೂ ಕೇಂದ್ರ ಸರ್ಕಾರ ಪ್ರಾಯೋಜಿತ "ಸ್ಮಾರ್ಟ್ ಸಿಟಿ" ಯೋಜನೆಗೆ ಅವಶ್ಯಕತೆಯಿರುತ್ತದೆ ಎಂದು - ಸದರಿ ಜಮೀನನ್ನು ಕರ್ನಾಟಕ ಸರ್ಕಾರದ ವಶಕ್ಕೆ ಪಡೆಯಲು ಬೆಳಗಾವಿ ಜಿಲ್ಲಾಧಿಕಾರಿಗಳು |

| | |
|---|---|
| ಉ) ಈ ಕುರಿತು ಕೈಗೊಂಡಿರುವ ಹಾಗೂ ಕೈಗೊಳ್ಳುವ ಕ್ರಮಗಳ ವಿವರಗಳೇನು? | ಕಂದಾಯ ಇಲಾಖೆಗೆ ದಿನಾಂಕ: 03.01.2018ರಂದು ಪ್ರಸ್ತಾವನೆಯನ್ನು ಸಲ್ಲಿಸಿರುತ್ತಾರೆ. ಪ್ರಸ್ತುತ ಸದರಿ ಪ್ರಸ್ತಾವನೆಯು ಕಂದಾಯ ಇಲಾಖೆಯ ಪರಿಶೀಲನೆಯಲ್ಲಿದೆ.<br><br>ಮಾನ್ಯ ಉಪ ಮುಖ್ಯಮಂತ್ರಿಯವರು ಹಾಗೂ ವಿದ್ಯುನ್ಮಾನ, ಮಾಹಿತಿ ತಂತ್ರಜ್ಞಾನ, ಜೈವಿಕ ತಂತ್ರಜ್ಞಾನ ಹಾಗೂ ವಿಜ್ಞಾನ ಮತ್ತು ತಂತ್ರಜ್ಞಾನ ಸಚಿವರು ಭಾರತ ಸರ್ಕಾರದ ಮಾನ್ಯ ರಕ್ಷಣಾ ಸಚಿವರಿಗೆ ದಿನಾಂಕ: 08.01.2021ರಂದು ಪತ್ರ ಬರೆದು, ಬೆಳಗಾವಿ ಗ್ರಾಮದ ರಿ.ಸ.ನಂ. 1304 ರಿಂದ 1397 ರಲ್ಲಿರುವ 750ಕ್ಕಿಂತ ಹೆಚ್ಚಿನ ಎಕರೆ ಜಮೀನು ರಾಷ್ಟ್ರೀಯ ಹೆದ್ದಾರಿಗೆ ಸಮೀಪದಲ್ಲಿದ್ದು, ಐ.ಟಿ ಪಾರ್ಕ್ ಸ್ಥಾಪಿಸಲು ಸೂಕ್ತವಾಗಿರುತ್ತದೆ. ಮುಂದುವರೆದು, ಸ್ವಾತಂತ್ರ್ಯ ಪೂರ್ವದಲ್ಲಿ ಭಾರತೀಯ ಸೇನೆಯ ಉಪಯೋಗಕ್ಕೆ ನೀಡಲಾಗಿದ್ದ, ಸದರಿ ಜಮೀನನ್ನು ಐಟಿ ಪಾರ್ಕ್ ಸ್ಥಾಪಿಸುವ ಸಂಬಂಧವಾಗಿ ರಾಜ್ಯ ಸರ್ಕಾರಕ್ಕೆ ಹಿಂದಿರುಗಿಸುವಂತೆ ಆದೇಶಿಸಲಾಗಿದ್ದು, ಆದರೆ, ರಕ್ಷಣಾ ಇಲಾಖೆಯು ಇದುವರೆಗೂ ಸದರಿ ಜಮೀನನ್ನು ರಾಜ್ಯ ಸರ್ಕಾರಕ್ಕೆ ಹಿಂದಿರುಗಿಸಲು ಕ್ರಮ ಕೈಗೊಂಡಿರುವುದಿಲ್ಲ ಎಂದು ತಿಳಿಸುತ್ತಾ, ಸದರಿ ಜಮೀನನ್ನು ರಾಜ್ಯ ಸರ್ಕಾರಕ್ಕೆ ಹಿಂದಿರುಗಿಸುವ ಬಗ್ಗೆ ಚರ್ಚಿಸಲು ಸೂಕ್ತ ದಿನಾಂಕ ಮತ್ತು ಸಮಯ ನಿಗದಿಪಡಿಸುವಂತೆ ಭಾರತ ಸರ್ಕಾರದ ರಕ್ಷಣಾ ಸಚಿವರನ್ನು ಕೋರಿರುತ್ತಾರೆ.<br><br>ಈ ಮೇಲೆ ಹೇಳಿರುವ ಜಮೀನುಗಳು ಇನ್ನೂ ವಿದ್ಯುನ್ಮಾನ, ಮಾಹಿತಿ ತಂತ್ರಜ್ಞಾನ ಮತ್ತು ಜೈವಿಕ ತಂತ್ರಜ್ಞಾನ ನಿರ್ದೇಶನಾಲಯಕ್ಕೆ ಹಸ್ತಾಂತರಗೊಂಡಿರುವುದಿಲ್ಲ. ಸದರಿ ಜಮೀನು ಇಲಾಖೆಯ ಸುಪರ್ದಿ ಹಸ್ತಾಂತರವಾದ ನಂತರ ಸದರಿ ಜಾಗದಲ್ಲಿ ಮಾದರಿ ಬಹುತಾಂತ್ರಿಕ ಐಟಿ ಪಾರ್ಕ್ ಅನ್ನು ಸ್ಥಾಪಿಸುವ ಬಗ್ಗೆ ಪರಿಶೀಲಿಸಲಾಗುವುದು. |

(ಐಟಿಬಿಟಿ 20 ಎಲ್‌ಸಿಎಂ 2021)

**(ಡಾ|| ಅಶ್ವಥ್ ನಾರಾಯಣ ಸಿ.ಎನ್)**
ಉಪ ಮುಖ್ಯಮಂತ್ರಿಗಳು ಹಾಗೂ
ವಿದ್ಯುನ್ಮಾನ, ಮಾಹಿತಿ ತಂತ್ರಜ್ಞಾನ ಹಾಗೂ ವಿಜ್ಞಾನ
ಮತ್ತು ತಂತ್ರಜ್ಞಾನ ಸಚಿವರು

# ಕರ್ನಾಟಕ ವಿಧಾನ ಸಭೆ

ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 2655

ಸದಸ್ಯರ ಹೆಸರು : ಶ್ರೀ ಯಶವಂತರಾಯಗೌಡ ವಿಠ್ಠಲಗೌಡ ಪಾಟೀಲ್ (ಇಂಡಿ)

ಉತ್ತರಿಸುವ ದಿನಾಂಕ : 18.03.2021

ಉತ್ತರಿಸುವ ಸಚಿವರು : ಪ್ರಾಥಮಿಕ ಮತ್ತು ಪ್ರೌಢ ಶಿಕ್ಷಣ ಸಚಿವರು

| ಕ್ರ.ಸಂ. | ಪ್ರಶ್ನೆ | ಉತ್ತರ |
|---|---|---|
| (ಅ) | ವಿಜಯಪುರ ಜಿಲ್ಲೆಯ ಗಡಿ ಭಾಗದಲ್ಲಿರುವ ಹಾಗೂ ತಾಲ್ಲೂಕು ಕೇಂದ್ರವಾಗಿರುವ ಇಂಡಿ ಪಟ್ಟಣದಲ್ಲಿರುವ ತಾಲ್ಲೂಕು ಸಾರ್ವಜನಿಕ ಗ್ರಂಥಾಲಯವು ಮೂಲಭೂತ ಸೌಕರ್ಯಗಳು ಇಲ್ಲದೇ ಅವ್ಯವಸ್ಥೆಯ ಆಗರವಾಗಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ? | ಬಂದಿದೆ. |
| (ಆ) | ಬಂದಿದ್ದಲ್ಲಿ, ಗಡಿ ಭಾಗದಲ್ಲಿರುವ ಈ ತಾಲ್ಲೂಕು ಸಾರ್ವಜನಿಕ ಗ್ರಂಥಾಲಯಕ್ಕೆ ಸುಸಜ್ಜಿತವಾದ ಕಟ್ಟಡ ಹಾಗೂ ಓದುಗರಿಗೆ ಮೂಲಭೂತ ಸೌಕರ್ಯಗಳನ್ನು ಒದಗಿಸಲು ಸರ್ಕಾರ ಆಸಕ್ತಿ ಹೊಂದಿದೆಯೇ? | ಹೊಂದಿದೆ. |
| (ಇ) | ಹೊಂದಿದ್ದಲ್ಲಿ, ಸುಸಜ್ಜಿತವಾದ ಕಟ್ಟಡ ನಿರ್ಮಾಣ ಮಾಡಲು ಹಾಗೂ ಮೂಲಭೂತ ಸೌಕರ್ಯಗಳನ್ನು ಒದಗಿಸಲು ಯಾವಾಗ ಮತ್ತು ಎಷ್ಟು ಅನುದಾನವನ್ನು ಮಂಜೂರು ಮಾಡಲಾಗುವುದು? ಅದಕ್ಕಾಗಿ ಸರ್ಕಾರ ಕೈಗೊಳ್ಳುವ ಕ್ರಮಗಳೇನು; (ವಿವರ ನೀಡುವುದು) | ಮುಖ್ಯಾಧಿಕಾರಿಗಳು, ಪುರಸಭೆ ಕಾರ್ಯಾಲಯ, ಇಂಡಿ ಇವರಿಗೆ ಈಗಾಗಲೇ ಇಂಡಿ ಪಟ್ಟಣದಲ್ಲಿ ಗ್ರಂಥಾಲಯ ಕಟ್ಟಡ ನಿರ್ಮಾಣ ಮಾಡಲು ನಿವೇಶನ ನೀಡುವಂತೆ ಕೋರಿದ್ದು, ಮುಖ್ಯಾಧಿಕಾರಿ, ಪುರಸಭೆ, ಇಂಡಿ ಇವರು ಸಿಟಿಎಸ್ ಸರ್ವೆ ನಂ: 1249 ಅಳತೆ 380 ಚ.ಮೀ. ಜಾಗದ ನಿವೇಶನದಲ್ಲಿ ಗ್ರಂಥಾಲಯ ಕಟ್ಟಡ ನಿರ್ಮಾಣ ಮಾಡಲು ಪುರಸಭೆಯಿಂದ ಯಾವುದೇ ಅಭ್ಯಂತರ ಇರುವುದಿಲ್ಲ ಎಂದು ತಿಳಿಸಿರುತ್ತಾರೆ. ಉಪ ನಿರ್ದೇಶಕರು(ಪ್ರ), ಜಿಲ್ಲಾ ಕೇಂದ್ರ ಗ್ರಂಥಾಲಯ, ವಿಜಯಪುರ ಕಛೇರಿಯಿಂದ ದಿನಾಂಕ: 22-10-2020 ರಂದು ಮುಖ್ಯಾಧಿಕಾರಿಗಳು ಪುರಸಭೆ ಕಾರ್ಯಾಲಯ, ಇಂಡಿ ಇವರಿಗೆ ಸದರಿ ಸಿಟಿಎಸ್ ಸರ್ವೆ ನಂ: 1249 ಅಳತೆ 380 ಚ.ಮೀ. ನಿವೇಶನವನ್ನು ಗ್ರಂಥಾಲಯ ಇಲಾಖೆಗೆ ನೊಂದಣಿ ಮಾಡಿಕೊಡುವಂತೆ ಪತ್ರ ವ್ಯವಹರಿಸಲಾಗಿದೆ.<br>ಸಹಾಯಕ ಕಾರ್ಯನಿರ್ವಾಹಕ ಅಭಿಯಂತರರು ಇವರಿಗೆ ದಿನಾಂಕ: 14-12-2020 ಮತ್ತು ದಿನಾಂಕ: 05-01-2021 ರ ಪತ್ರಗಳಲ್ಲಿ ಅಂದಾಜು ಪಟ್ಟಿಯನ್ನು ತಯಾರಿಸಿ ಸಲ್ಲಿಸುವಂತೆ ಉಪ ನಿರ್ದೇಶಕರು(ಪ್ರ), ಜಿಲ್ಲಾ ಕೇಂದ್ರ ಗ್ರಂಥಾಲಯ, ವಿಜಯಪುರ ಇವರು ಕೋರಿದ್ದು, ಸಹಾಯಕ ಕಾರ್ಯನಿರ್ವಾಹಕ ಅಭಿಯಂತರರು, ಲೋಕೋಪಯೋಗಿ ಬಂದರು ಮತ್ತು ಒಳನಾಡು ಜಲಸಾರಿಗೆ ಇಲಾಖೆ, ಉಪ ವಿಭಾಗ, ಇಂಡಿ ಇವರು ಅಂದಾಜು ಪಟ್ಟಿಯನ್ನು ತಯಾರಿಸಿ ಸಲ್ಲಿಸಿದ ನಂತರ ಪರಿಶೀಲಿಸಿ ಅನುದಾನದ ಲಭ್ಯತೆ ಮೇಲೆ ಕ್ರಮ ಕೈಗೊಳ್ಳಲಾಗುವುದು. |
| (ಈ) | ಅದಕ್ಕಾಗಿ ಸರ್ಕಾರ ಕೈಗೊಳ್ಳುವ ಕ್ರಮಗಳೇನು ? (ವಿವರ ನೀಡುವುದು) | |

ಸಂಖ್ಯೆ: ಇಡಿ 13 ಎಲ್ಐಬಿ 2021

(ಎಸ್. ಸುರೇಶ್‌ಕುಮಾರ್)
ಪ್ರಾಥಮಿಕ ಮತ್ತು ಪ್ರೌಢ ಶಿಕ್ಷಣ ಸಚಿವರು.



## ಕರ್ನಾಟಕ ವಿಧಾನ ಸಭೆ

| | | |
|---|---|---|
| 1) | ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ: | 3041 |
| 2) | ಮಾನ್ಯ ಸದಸ್ಯರ ಹೆಸರು: | ಶ್ರೀ ಆಚಾರ್ ಹಾಲಪ್ಪ ಬಸಪ್ಪ (ಯಲಬುರ್ಗಾ) |
| 3) | ಉತ್ತರಿಸಬೇಕಾದ ದಿನಾಂಕ: | 18.03.2021 |
| 4) | ಉತ್ತರಿಸುವವರು: | ಮಾನ್ಯ ಉಪ ಮುಖ್ಯಮಂತ್ರಿಗಳು ಮತ್ತು ಉನ್ನತ ಶಿಕ್ಷಣ, ಐಟಿ/ಬಿಟಿ ಹಾಗೂ ಕೌಶಲ್ಯಾಭಿವೃದ್ಧಿ, ಉದ್ಯಮಶೀಲತೆ ಮತ್ತು ಜೀವನೋಪಾಯ ಸಚಿವರು. |

| ಕ್ರ.ಸಂ. | ಪ್ರಶ್ನೆ | ಉತ್ತರ |
|---|---|---|
| (ಅ) | **ಜಿಲ್ಲಾ ಮಟ್ಟದ ಕೌಶಲ್ಯಾಭಿವೃದ್ಧಿ, ಉದ್ಯಮಶೀಲತೆ ಮತ್ತು ಜೀವನೋಪಾಯ ಇಲಾಖೆಯನ್ನು ಮೇಲ್ದರ್ಜೆಗೇರಿಸಲು ಸರ್ಕಾರ ಕೈಗೊಂಡ ಕ್ರಮಗಳೇನು;** | **<u>ಕೌಶಲ್ಯ ಮಿಷನ್:</u>**<br>ಜಿಲ್ಲಾ ಮಟ್ಟದ ಕೌಶಲ್ಯಾಭಿವೃದ್ಧಿ ಕಛೇರಿಗಳಿಗೆ ಅಗತ್ಯ ಮೂಲಭೂತ ಕಟ್ಟಡ ಮತ್ತು ಇತರೆ ಸೌಲಭ್ಯಗಳನ್ನು ಈಗಾಗಲೇ ಒದಗಿಸಲಾಗಿದ್ದು, ಜಿಲ್ಲಾಧಿಕಾರಿಗಳ ನೇತೃತ್ವದಲ್ಲಿ ಜಿಲ್ಲಾ ಕೌಶಲ್ಯಾಭಿವೃದ್ಧಿ ಅಧಿಕಾರಿಗಳನ್ನೊಂಡಂತೆ ಜಿಲ್ಲಾ ಕೌಶಲ್ಯ ಸಮಿತಿಯನ್ನು ರಚಿಸಲಾಗಿದೆ. ಕೌಶಲ್ಯಾಭಿವೃದ್ಧಿ ಉದ್ಯಮಶೀಲತೆ ಮತ್ತು ಜೀವನೋಪಾಯ ಇಲಾಖೆಯಡಿಯಲ್ಲಿ ಕಾರ್ಯನಿರ್ವಹಿಸುತ್ತಿರುವ ಎಲ್ಲಾ ಇಲಾಖೆಗಳನ್ನು ಒಂದೇ ಸೂರಿನಡಿಯಲ್ಲಿ ತಂದು ಇಲಾಖೆಯ ಎಲ್ಲಾ ಮಾಹಿತಿಗಳು, ಒಂದೇ ಕಛೇರಿಯಲ್ಲಿ ದೊರಕಿಸಿಕೊಡುವ ನಿಟ್ಟಿನಲ್ಲಿ ಪ್ರಾರಂಭಿಕ ಹಂತದಲ್ಲಿ (Pilot basis)06 ಜಿಲ್ಲೆಗಳನ್ನು ಗುರುತಿಸಿ ಕಾರ್ಯನಿರ್ವಹಿಸಲು ಆದೇಶ ನೀಡಲಾಗಿದೆ ಮುಂದಿನ ದಿನಗಳಲ್ಲಿ ಸದರಿ ವ್ಯವಸ್ಥೆಯನ್ನು ರಾಜ್ಯದ ಎಲ್ಲಾ ಜಿಲ್ಲೆಗಳಲ್ಲಿ ಅನುಷ್ಠಾನಗೊಳಿಸಲು ಕ್ರಮವಹಿಸಲಾಗಿದೆ.<br><br>**<u>ಸಿಡಾಕ್:</u>**<br>ಕರ್ನಾಟಕ ಉದ್ಯಮಶೀಲತಾಭಿವೃದ್ಧಿ ಕೇಂದ್ರ (ಸಿಡಾಕ್) ದಿಂದ ಪ್ರತಿ ಜಿಲ್ಲೆಯಲ್ಲಿ ಕಛೇರಿಯನ್ನು ಹೊಂದಲಾಗಿರುತ್ತದೆ ಮತ್ತು ಸಂಸ್ಥೆಯ ಜಂಟಿ ನಿರ್ದೇಶಕರುಗಳು ಈ ಕಛೇರಿಗಳ ಉಸ್ತುವಾರಿಯನ್ನು ನೋಡಿಕೊಳ್ಳುತ್ತಾರೆ. |
| (ಆ) | **ಈ ಇಲಾಖೆಯ ವ್ಯಾಪ್ತಿಗೆ ಯಾವ ಯಾವ ಯೋಜನೆ ಹಾಗೂ ಯಾವ ಇಲಾಖೆ ಸಿಬ್ಬಂದಿಗಳನ್ನು ವಿಲೀನಗೊಳಿಸಲಾಗಿದೆ;** | **<u>ಕೌಶಲ್ಯ ಮಿಷನ್:</u>**<br>ಕರ್ನಾಟಕ ಕೌಶಲ್ಯಭಿವೃದ್ಧಿ ಕಛೇರಿ ಹಾಗೂ ಅಧೀನ ಕಾರ್ಯಾಲಯಗಳಲ್ಲಿ ಸರ್ಕಾರದ ಆದೇಶದನ್ವಯ ರಾಜ್ಯದ ವಿವಿಧ ಇಲಾಖೆಗಳಿಂದ ನಿಯೋಜನೆಯ ಆಧಾರ ಮೇರೆಗೆ ಅಧಿಕಾರಿ/ಸಿಬ್ಬಂದಿಗಳನ್ನು ನೇಮಿಸಲಾಗಿರುತ್ತದೆ. ಆದರೆ ಯಾವುದೇ ಇಲಾಖೆಯ ಅಧಿಕಾರಿ/ಸಿಬ್ಬಂದಿಗಳನ್ನು ವಿಲೀನಗೊಳಿಸಿರುವುದಿಲ್ಲ.<br><br>**<u>ಡೇ-ನಲ್ಮ್:</u>**<br>ಡೇ-ನಲ್ಮ್ ಅಭಿಯಾನವನ್ನು ಪೌರಾಡಳಿತ ಇಲಾಖೆಯಿಂದ ಕೌಶಲ್ಯಾಭಿವೃದ್ಧಿ ಉದ್ಯಮಶೀಲತೆ ಮತ್ತು ಜೀವನೋಪಾಯ ಇಲಾಖೆಗೆ ದಿನಾಂಕ:01.01.2018ರಿಂದ ಅನ್ವಯವಾಗುವಂತೆ ಹಸ್ತಾಂತರಿಸಲಾಗಿರುತ್ತದೆ.<br><br>**<u>ಸಿಡಾಕ್:</u>**<br>ಜಿಲ್ಲಾ ಕಛೇರಿಗಳಲ್ಲಿ ಹೊರಗುತ್ತಿಗೆ ಆಧಾರದ ಮೇಲೆ ತರಬೇತುದಾರರ ಸೇವೆಯನ್ನು ಪಡೆದುಕೊಳ್ಳಲಾಗಿದೆ. ಇನ್ನುಳಿದಂತೆ, ಯಾವುದೇ ಇಲಾಖೆಯ ಸಿಬ್ಬಂದಿಗಳನ್ನು ವಿಲೀನಗೊಳಿಸಲಾಗಿರುವುದಿಲ್ಲ |
| ಇ) | **ರಾಷ್ಟ್ರೀಯ ನಗರ ಜೀವನೋಪಾಯ ಯೋಜನೆ ಮತ್ತು ರಾಷ್ಟ್ರೀಯ ಗ್ರಾಮೀಣ ಯೋಜನೆ ಹಾಗೂ ಸಿಬ್ಬಂದಿಗಳನ್ನು ಕೌಶಲ್ಯಾಭಿವೃದ್ಧಿ, ಉದ್ಯಮಶೀಲತೆ ಮತ್ತು ಜೀವನೋಪಾಯ ಇಲಾಖೆಯಲ್ಲಿ ವಿಲೀನಗೊಳಿಸಲು ಸರ್ಕಾರ ಕೈಗೊಂಡಿರುವ ಕ್ರಮಗಳೇನು?** | **<u>ಡೇ-ನಲ್ಮ್:</u>**<br>ರಾಷ್ಟ್ರೀಯ ನಗರ ಜೀವನೋಪಾಯ ಅಭಿಯಾನವನ್ನು ಈಗಾಗಲೇ ಕೌಶಲ್ಯಾಭಿವೃದ್ಧಿ, ಉದ್ಯಮಶೀಲತೆ ಮತ್ತು ಜೀವನೋಪಾಯ ಇಲಾಖೆಗೆ ಹಸ್ತಾಂತರಿಸಲಾಗಿದ್ದು, ಸದರಿ ಅಭಿಯಾನದಡಿ ನಗರ ಸ್ಥಳೀಯ ಸಂಸ್ಥೆಗಳಲ್ಲಿ ಕಾರ್ಯ ನಿರ್ವಹಿಸುತ್ತಿದ್ದ, ಪೌರಾಡಳಿತ ನಿರ್ದೇಶನಾಲಯದ ಸಮುದಾಯ ಸಂಘಟನಾಧಿಕಾರಿ / ಸಮುದಾಯ ಸಂಘಟಕರುಗಳನ್ನು |

|  |  |  |
| --- | --- | --- |
|  |  | ತಾತ್ಕಾಲಿಕವಾಗಿ ನಿಯೋಜನ ಮೇಲೆ ಅಭಿಯಾನದ ಅನುಷ್ಠಾನಕ್ಕೆ ಪಡೆದಿದ್ದು, ಪೂರ್ಣಪ್ರಮಾಣದಲ್ಲಿ ಕೌಶಲ್ಯಾಭಿವೃದ್ಧಿ, ಉದ್ಯಮಶೀಲತೆ ಮತ್ತು ಜೀವನೋಪಾಯ ಇಲಾಖೆಗೆ ಹಸ್ತಾಂತರಿಸಿಕೊಳ್ಳುವ ಸಲುವಾಗಿ ವೃಂದ ಮತ್ತು ನೇಮಕಾತಿ ನಿಯಮವನ್ನು ಸಿದ್ಧಪಡಿಸಿದ್ದು, ಪ್ರಕ್ರಿಯೆಯು ಪರಿಶೀಲನಾ ಹಂತದಲ್ಲಿರುತ್ತದೆ. |

**ಸಂಖ್ಯೆ: ಕೌಉಜೀಇ 11 ಉಜೀಪ್ರ 2021**

**(ಡಾ॥ ಸಿ.ಎನ್. ಅಶ್ವಥ್‌ನಾರಾಯಣ)**
**ಉಪ ಮುಖ್ಯಮಂತ್ರಿಗಳು ಮತ್ತು ಉನ್ನತ ಶಿಕ್ಷಣ,**
**ಐಟಿ/ಬಿಟಿ ಹಾಗೂ ಕೌಶಲ್ಯಾಭಿವೃದ್ಧಿ, ಉದ್ಯಮಶೀಲತೆ**
**ಮತ್ತು ಜೀವನೋಪಾಯ ಸಚಿವರು.**

## ಕರ್ನಾಟಕ ವಿಧಾನ ಸಭೆ

ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 2994

ಮಾನ್ಯ ಸದಸ್ಯರ ಹೆಸರು : ಶ್ರೀ ಶಿವಲಿಂಗೇಗೌಡ ಕೆ.ಎಂ (ಅರಸೀಕೆರೆ)

ಉತ್ತರಿಸಬೇಕಾದ ದಿನಾಂಕ : 18.03.2021

ಉತ್ತರಿಸುವ ಸಚಿವರು : ಮಾನ್ಯ ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಹಾಗೂ ವೈದ್ಯಕೀಯ ಶಿಕ್ಷಣ ಸಚಿವರು

| ಕ್ರ.ಸಂ | ಪ್ರಶ್ನೆ | ಉತ್ತರ |
|---|---|---|
| ಅ) | ಪ್ರಸಕ್ತ ವರ್ಷ ಹೊಸದಾಗಿ ಪ್ರಾಥಮಿಕ ಆರೋಗ್ಯ ಕೇಂದ್ರಗಳನ್ನು ಸಮುದಾಯ ಆರೋಗ್ಯ ಕೇಂದ್ರಗಳನ್ನಾಗಿ ಉನ್ನತೀಕರಿಸುವ ಪ್ರಸ್ತಾವನೆ ಸರ್ಕಾರದಲ್ಲಿದೆಯೇ; | ಆರ್ಥಿಕ ವಿಸ್ತರತೆ ಇಲ್ಲದಿರುವುದರಿಂದ ಪ್ರಾಥಮಿಕ ಆರೋಗ್ಯ ಕೇಂದ್ರಗಳನ್ನು ಸಮುದಾಯ ಆರೋಗ್ಯ ಕೇಂದ್ರಗಳನ್ನಾಗಿ ಮೇಲ್ದರ್ಜೆಗೇರಿಸುವ ಪ್ರಸ್ತಾವನೆಗಳನ್ನು ಸಧ್ಯಕ್ಕೆ ತಡೆಹಿಡಿಯಲಾಗಿದೆ. |
| ಆ) | ಪ್ರಾಥಮಿಕ ಆರೋಗ್ಯ ಕೇಂದ್ರಗಳನ್ನು ಸಮುದಾಯ ಆರೋಗ್ಯ ಕೇಂದ್ರವನ್ನಾಗಿ ಮೇಲ್ದರ್ಜೆಗೇರಿಸಲು ಯಾವ ಮಾನದಂಡಗಳನ್ನು ಅನುಸರಿಸಲಾಗುವುದು? | Indian Public Health Standard (IPHS) ಮಾನದಂಡದ ಪ್ರಕಾರ ಸಮತಟ್ಟು ಪ್ರದೇಶಗಳಲ್ಲಿ 1,20,000 ಜನಸಂಖ್ಯೆಗೆ ಒಂದು ಸಮುದಾಯ ಅರೋಗ್ಯ ಕೇಂದ್ರ ಮತ್ತು ಗುಡ್ಡಗಾಡು ಪ್ರದೇಶ, ಮರುಭೂಮಿ ಅಥವಾ ಆದಿವಾಸಿ ಪ್ರದೇಶದಲ್ಲಿ 80,000 ಜನಸಂಖ್ಯೆಗೆ ಒಂದು ಸಮುದಾಯ ಆರೋಗ್ಯ ಕೇಂದ್ರ ಸ್ಥಾಪಿಸಲು ಅವಕಾಶವಿರುತ್ತದೆ. (ಪ್ರತಿ ನಾಲ್ಕು ಪ್ರಾಥಮಿಕ ಆರೋಗ್ಯ ಕೇಂದ್ರಗಳಲ್ಲಿ ಒಂದನ್ನು ಸಮುದಾಯ ಆರೋಗ್ಯ ಕೇಂದ್ರವನ್ನಾಗಿ ಮೇಲ್ದರ್ಜೆಗೇರಿಸಲು ಅವಕಾಶವಿರುತ್ತದೆ). |

ಆಕುಕ 55 ಎಸ್‌ಬಿವಿ 2021.

(ಡಾ॥ ಕೆ. ಸುಧಾಕರ್)
ಆರೋಗ್ಯ ಮತ್ತು ಕುಟುಂಬ ಕಲ್ಯಾಣ
ಹಾಗೂ ವೈದ್ಯಕೀಯ ಶಿಕ್ಷಣ ಸಚಿವರು



# ಕರ್ನಾಟಕ ವಿಧಾನ ಸಭೆ

| | |
|---|---|
| ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ | 2794 |
| ಮಾನ್ಯ ಸದಸ್ಯರ ಹೆಸರು | ಶ್ರೀ ನಿಸರ್ಗ ನಾರಾಯಣ ಸ್ವಾಮಿ ಎಲ್.ಎನ್. |
| ಉತ್ತರಿಸಬೇಕಾದ ದಿನಾಂಕ | 18.03.2021 |
| ಉತ್ತರಿಸುವ ಸಚಿವರು | ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಹಾಗೂ ವೈದ್ಯಕೀಯ ಶಿಕ್ಷಣ ಸಚಿವರು |

| ಕ್ರ.ಸಂ | ಪ್ರಶ್ನೆಗಳು | ಉತ್ತರಗಳು |
|---|---|---|
| ಅ) | ಬೆಂಗಳೂರು ಗ್ರಾಮಾಂತರ ಜಿಲ್ಲೆಯಲ್ಲಿ, ಜಿಲ್ಲೆಗೊಂದು ವೈದ್ಯಕೀಯ ಕಾಲೇಜು ನಿಯಮದಡಿ ದೇವನಹಳ್ಳಿ ವಿಧಾನಸಭಾ ಕ್ಷೇತ್ರದಲ್ಲಿ ವೈದ್ಯಕೀಯ ಕಾಲೇಜು ಸ್ಥಾಪನೆಯ ಪ್ರಸ್ತಾವನೆ ಸರ್ಕಾರದ ಮುಂದಿದೆಯೇ; (ಮಾಹಿತಿ ನೀಡುವುದು) | ರಾಜ್ಯದ ಪ್ರತೀ ಜಿಲ್ಲೆಗೊಂದು ಸರ್ಕಾರಿ ವೈದ್ಯಕೀಯ ಕಾಲೇಜನ್ನು ಪ್ರಾರಂಭಿಸಬೇಕೆಂಬುದು ಸರ್ಕಾರದ ನೀತಿಯಾಗಿರುತ್ತದೆ. ದೇವನಹಳ್ಳಿ ವಿಧಾನ ಸಭಾ ಕ್ಷೇತ್ರ ವ್ಯಾಪ್ತಿಯಲ್ಲಿ ಹೊಸ ವೈದ್ಯಕೀಯ ಕಾಲೇಜನ್ನು ಸ್ಥಾಪಿಸುವ ಯಾವುದೇ ಪ್ರಸ್ತಾವನೆ ಪ್ರಸ್ತುತದಲ್ಲಿ ಸರ್ಕಾರದ ಪರಿಶೀಲನೆಯಲ್ಲಿರುವುದಿಲ್ಲ. |
| ಆ) | ಬೆಂಗಳೂರು ಗ್ರಾಮಾಂತರ ಜಿಲ್ಲೆಯಲ್ಲಿ ಯಾವಾಗ ವೈದ್ಯಕೀಯ ಕಾಲೇಜು ಮಂಜೂರು ಮಾಡಿ ನಿರ್ಮಾಣವನ್ನು ಪ್ರಾರಂಭ ಮಾಡಲಾಗುವುದು; (ಮಾಹಿತಿ ನೀಡುವುದು) | |
| ಇ) | ವೈದ್ಯಕೀಯ ಕಾಲೇಜು ನಿರ್ಮಾಣಕ್ಕೆ ಎಷ್ಟು ಎಕರೆ ಜಮೀನು ಬೇಕಾಗುವುದು; ಅದಕ್ಕಾಗಿ ದೇವನಹಳ್ಳಿ ತಾಲ್ಲೂಕಿನಲ್ಲಿ ಜಾಗ ಗುರುತಿಸಲಾಗಿದೆಯೇ; (ಪೂರ್ಣ ಮಾಹಿತಿ ನೀಡುವುದು) | ರಾಷ್ಟ್ರೀಯ ವೈದ್ಯಕೀಯ ಮಂಡಳಿಯ ಮಾನದಂಡಗಳನ್ವಯ ಹೊಸ ವೈದ್ಯಕೀಯ ಕಾಲೇಜನ್ನು ನಿರ್ಮಾಣ ಮಾಡಲು 20 ಎಕರೆ ಜಮೀನಿನ ಅವಶ್ಯಕತೆ ಇರುತ್ತದೆ.<br><br>ಹೊಸ ವೈದ್ಯಕೀಯ ಕಾಲೇಜಿನ ಪ್ರಾರಂಭದ ಪ್ರಸ್ತಾವನೆಯು ಪರಿಶೀಲನೆಯಲ್ಲಿರದ ಕಾರಣ ದೇವನಹಳ್ಳಿ ತಾಲ್ಲೂಕಿನಲ್ಲಿ ಯಾವುದೇ ಜಾಗವನ್ನು ಗುರುತಿಸುವ ಪ್ರಶ್ನೆ ಉದ್ಭವಿಸುವುದಿಲ್ಲ. |
| ಈ) | ದೇವನಹಳ್ಳಿಯಲ್ಲಿ ಬೆಂಗಳೂರು ಗ್ರಾಮಾಂತರ ಜಿಲ್ಲೆಯ ವೈದ್ಯಕೀಯ ಕಾಲೇಜು ಸ್ಥಾಪನೆ ಬಗ್ಗೆ ಸರ್ಕಾರವು ತ್ವರಿತಗತಿಯಲ್ಲಿ ಕೈಗೊಳ್ಳಲಿರುವ ಕ್ರಮಗಳೇನು? | ಉದ್ಭವಿಸುವುದಿಲ್ಲ. |

ಸಂಖ್ಯೆ: ಎಂಇಡಿ 175 ಎಂಎಂಸಿ 2021

(ಡಾ|| ಕೆ. ಸುಧಾಕರ್)
ಮಾನ್ಯ ಆರೋಗ್ಯ ಮತ್ತು ಕುಟುಂಬ ಕಲ್ಯಾಣ
ಹಾಗೂ ವೈದ್ಯಕೀಯ ಶಿಕ್ಷಣ ಸಚಿವರು

# ಕರ್ನಾಟಕ ವಿಧಾಸಭೆ

| 1) | ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ | 2798 |
|---|---|---|
| 2) | ಮಾನ್ಯ ಸದಸ್ಯರ ಹೆಸರು | ಡಾ॥ ಯತೀಂದ್ರ ಸಿದ್ದರಾಮಯ್ಯ (ವರುಣ) |
| 3) | ಉತ್ತರಿಸಬೇಕಾದ ದಿನಾಂಕ | 18/03/2021 |
| 4) | ಉತ್ತರಿಸುವವರು | ಉಪ ಮುಖ್ಯಮಂತ್ರಿಗಳು ಹಾಗೂ ಕೌಶಲ್ಯಾಭಿವೃದ್ಧಿ, ಉದ್ಯಮಶೀಲತೆ ಮತ್ತು ಜೀವನೋಪಾಯ ಇಲಾಖೆ ಸಚಿವರು |

************

| ಕ್ರ ಸಂ | ಪ್ರಶ್ನೆ | ಉತ್ತರ |
|---|---|---|
| ಅ) | ರಾಜ್ಯದಲ್ಲಿ ಕಳೆದ 2 ವರ್ಷಗಳಲ್ಲಿ ಎಷ್ಟು ಕೈಗಾರಿಕಾ ತರಬೇತಿ ಸಂಸ್ಥೆಗಳನ್ನು ಮಂಜೂರು ಮಾಡಲಾಗಿದೆ; ಮಂಜೂರಾದ ತರಬೇತಿ ಸಂಸ್ಥೆಗಳಲ್ಲಿ ಅಗತ್ಯ ಮೂಲಭೂತ ಸೌಕರ್ಯಗಳನ್ನು ಒದಗಿಸಲಾಗಿದೆಯೇ; ಎಷ್ಟು ಅನುದಾನ ವೆಚ್ಚ ಮಾಡಲಾಗಿದೆ; (ಜಿಲ್ಲಾವಾರು ಮಾಹಿತಿ ನೀಡುವುದು) | ಯಾವುದು ಇರುವುದಿಲ್ಲ. |
| ಆ) | ವರುಣ ವಿಧಾನ ಸಭಾ ಕ್ಷೇತ್ರದ ತಗಡೂರು ಸರ್ಕಾರಿ ಕೈಗಾರಿಕಾ ತರಬೇತಿ ಸಂಸ್ಥೆಗೆ ಅಗತ್ಯ ಮೂಲಭೂತ ಸೌಕರ್ಯಗಳನ್ನು ಯಾವಾಗ ಒದಗಿಸಲಾಗುವುದು; | ತಗಡೂರು ಸರ್ಕಾರಿ ಕೈಗಾರಿಕಾ ತರಬೇತಿ ಸಂಸ್ಥೆಗೆ ಜಮೀನು ಒದಗಿಸಿ ಕೊಡುವಂತೆ ಜಿಲ್ಲಾಧಿಕಾರಿಗಳನ್ನು ಕೋರಿದೆ. ನಿವೇಶನ ದೊರೆತ ನಂತರ ನಬಾರ್ಡ್ ಮಂಜೂರಾತಿ, ಸರ್ಕಾರದ ಅನುಮೋದನೆ ಹಾಗೂ ಅನುದಾನದ ಲಭ್ಯತೆಯನುಸಾರ ಕಟ್ಟಡ ನಿರ್ಮಾಣ ಮಾಡಲು ಕ್ರಮ ಕೈಗೊಳ್ಳಲಾಗುವುದು.<br>ತಗಡೂರು ಸರ್ಕಾರಿ ಕೈಗಾರಿಕಾ ತರಬೇತಿ ಸಂಸ್ಥೆಯಲ್ಲಿ ಪ್ರಾರಂಭಿಸಿರುವ ಫಿಟ್ಟರ್, ಎಲೆಕ್ಟ್ರಾನಿಕ್ ಮೆಕಾನಿಕ್, ಎಲೆಕ್ಟ್ರೀಷಿಯನ್, ಎಂ.ಎಂ.ವಿ ಮತ್ತು ಎಂ.ಆರ್.ಎ.ಸಿ ವೃತ್ತಿಗಳಿಗೆ ಅಗತ್ಯವಾದ ಯಂತ್ರೋಪಕರಣ, ಪೀಠೋಪಕರಣಗಳನ್ನು ಒದಗಿಸಲಾಗಿದ್ದು, ಕೊರತೆ ಇರುವ ಉಪಕರಣಗಳನ್ನು ಅನುದಾನ ಲಭ್ಯತೆ ಆಧರಿಸಿ ಒದಗಿಸಲಾಗುವುದು. |
| ಇ) | ಈ ಸಂಸ್ಥೆಯಲ್ಲಿ ಬೋಧಕ/ ಬೋಧಕೇತರ ಸಿಬ್ಬಂದಿಗಳ ಕೊರತೆ ಇರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; | ಬಂದಿದೆ. |
| ಈ) | ಬಂದಿದ್ದಲ್ಲಿ ಯಾವಾಗ ಖಾಲಿ ಹುದ್ದೆಗಳನ್ನು ಭರ್ತಿ ಮಾಡಲಾಗುವುದು? | ಪ್ರಸ್ತುತ 1520 ಕಿರಿಯ ತರಬೇತಿ ಅಧಿಕಾರಿ ಹುದ್ದೆಯ ಆಯ್ಕೆ ಪ್ರಕ್ರಿಯೆಯಲ್ಲಿ ಅಭ್ಯರ್ಥಿಗಳ ಪ್ರಮಾಣ ಪತ್ರಗಳ ಪರಿಶೀಲನಾ ಕಾರ್ಯ ಮುಗಿದಿದ್ದು, ಕರ್ನಾಟಕ ಲೋಕಸೇವಾ ಆಯೋಗದಿಂದ ಆಯ್ಕೆ ಪಟ್ಟಿಯನ್ನು ನಿರೀಕ್ಷಿಸಲಾಗಿದೆ. ಆಯ್ಕೆಪಟ್ಟಿ ಸ್ವೀಕೃತವಾದ ತಕ್ಷಣ ಸದರಿ ಖಾಲಿ ಹುದ್ದೆಗಳನ್ನು ಭರ್ತಿ ಮಾಡಲು ಕ್ರಮವಹಿಸಲಾಗುವುದು ಹಾಗೂ 32 ಪ್ರಾಚಾರ್ಯರು ದರ್ಜೆ-2 ಹುದ್ದೆಗಳನ್ನು ಮತ್ತು 52 ಪ್ರಥಮ ದರ್ಜೆ ಸಹಾಯಕರ ಹುದ್ದೆಗಳನ್ನು ಭರ್ತಿ ಮಾಡಿಕೊಳ್ಳಲು ಕರ್ನಾಟಕ ಲೋಕಸೇವಾ ಆಯೋಗಕ್ಕೆ ಪ್ರಸ್ತಾವನೆ ಸಲ್ಲಿಸಲಾಗಿರುತ್ತದೆ. ಪ್ರಸ್ತುತ ಇಲಾಖೆಯಲ್ಲಿ ಸ್ವೀಕೃತವಾಗಿರುವ 26 ಪ್ರಥಮ ದರ್ಜೆ ಸಹಾಯಕ ಅಭ್ಯರ್ಥಿಗಳ ಆಯ್ಕೆಪಟ್ಟಿಯಲ್ಲಿ, 17 ಅಭ್ಯರ್ಥಿಗಳ ದಾಖಲೆಗಳ ಪರಿಶೀಲನೆ ಪೂರ್ಣಗೊಂಡಿದ್ದು, ಪೊಲೀಸ್ ವೆರಿಫಿಕೇಶನ್ ಹಾಗೂ ಇ-ಸಿಂಧುತ್ವಕ್ಕಾಗಿ ಕ್ರಮಕೈಗೊಳ್ಳಲಾಗಿದೆ. ಗೈರುಹಾಜರಾಗಿದ್ದ ಬಾಕಿ ಉಳಿದ 09 ಅಭ್ಯರ್ಥಿಗಳ ದಾಖಲೆಗಳ ಪರಿಶೀಲನೆಗಾಗಿ ಮತ್ತೊಂದು ಅವಕಾಶ ನೀಡಲು ಕ್ರಮಕೈಗೊಳ್ಳಲಾಗಿರುತ್ತದೆ. ಈ ನೇಮಕಾತಿ ಪ್ರಕ್ರಿಯೆಗಳು ಪೂರ್ಣಗೊಳ್ಳುವ ಸಂದರ್ಭದಲ್ಲಿ ಸದರಿ ಖಾಲಿ ಹುದ್ದೆಗಳನ್ನು ಭರ್ತಿ ಮಾಡಲು ಕ್ರಮಕೈಗೊಳ್ಳಲಾಗುವುದು. |

**ಸಂಖ್ಯೆ: ಕೌಉಜೀಇ 20 ಕೈತಪ್ರ 2021**

(ಡಾ.ಸಿ.ಎನ್.ಅಶ್ವಥ ನಾರಾಯಣ)
ಉಪ ಮುಖ್ಯಮಂತ್ರಿಗಳು ಹಾಗೂ
ಕೌಶಲ್ಯಾಭಿವೃದ್ಧಿ, ಉದ್ಯಮಶೀಲತೆ ಮತ್ತು
ಜೀವನೋಪಾಯ ಸಚಿವರು

# ಕರ್ನಾಟಕ ವಿಧಾನಸಭೆ

| | | |
|---|---|---|
| 1) | ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ | 1557 |
| 2) | ಮಾನ್ಯ ಸದಸ್ಯರ ಹೆಸರು | ಶ್ರೀ ಕೃಷ್ಣಾರೆಡ್ಡಿ.ಎಂ. (ಚಿಂತಾಮಣಿ) |
| 3) | ಉತ್ತರಿಸಬೇಕಾದ ದಿನಾಂಕ | 18/03/2021 |
| 4) | ಉತ್ತರಿಸುವವರು | ಉಪ ಮುಖ್ಯಮಂತ್ರಿಗಳು ಹಾಗೂ ಕೌಶಲ್ಯಾಭಿವೃದ್ಧಿ, ಉದ್ಯಮಶೀಲತೆ ಮತ್ತು ಜೀವನೋಪಾಯ ಇಲಾಖೆ ಸಚಿವರು |

************

| ಕ್ರ ಸಂ | ಪ್ರಶ್ನೆ | ಉತ್ತರ |
|---|---|---|
| ಅ) | ಚಿಕ್ಕಬಳ್ಳಾಪುರ ಜಿಲ್ಲೆಯ ವ್ಯಾಪ್ತಿಯಲ್ಲಿ ಇಲ್ಲಿಯವರೆಗೆ ಮಂಜೂರಾಗಿರುವ ಸರ್ಕಾರಿ ಐ.ಟಿ.ಐ. ಕಾಲೇಜುಗಳ ಸಂಖ್ಯೆ ಎಷ್ಟು; ಮಂಜೂರಾಗಿರುವ ಕಾಲೇಜುಗಳ ಪೈಕಿ ಎಷ್ಟು ಕಾಲೇಜುಗಳು ಸ್ವಂತ ಕಟ್ಟಡ/ಬಾಡಿಗೆ ಕಟ್ಟಡದಲ್ಲಿ ಕಾರ್ಯನಿರ್ವಹಿಸುತ್ತಿವೆ; (ತಾಲ್ಲೂಕುವಾರು ಮಾಹಿತಿ ನೀಡುವುದು) | ಚಿಕ್ಕಬಳಾಪುರ ಜಿಲ್ಲೆಯ ವ್ಯಾಪ್ತಿಯಲ್ಲಿ ಒಟ್ಟು 7 ಸರ್ಕಾರಿ ಕೈಗಾರಿಕಾ ತರಬೇತಿ ಸಂಸ್ಥೆಗಳು ಮಂಜೂರಾಗಿರುತ್ತದೆ. ಅವುಗಳ ಪೈಕಿ 5 ಸಂಸ್ಥೆಗಳು ಸ್ವಂತ ಕಟ್ಟಡದಲ್ಲಿ, 01 ಸಂಸ್ಥೆ ಬಾಡಿಗೆ ಕಟ್ಟಡದಲ್ಲಿ ಹಾಗೂ 01 ಸಂಸ್ಥೆ ಬಾಡಿಗೆ ರಹಿತ ಕಟ್ಟಡದಲ್ಲಿ ಕಾರ್ಯನಿರ್ವಹಿಸುತ್ತಿವೆ. |
| ಆ) | ಚಿಂತಾಮಣಿ ತಾಲ್ಲೂಕಿಗೆ 4 ವರ್ಷಗಳಿಂದ ಸರ್ಕಾರಿ ಐ.ಟಿ.ಐ. ಕಾಲೇಜು ಮಂಜೂರಾಗಿದ್ದು ಕಾಲೇಜು ನಿರ್ಮಾಣಕ್ಕಾಗಿ ಚಿಂತಾಮಣಿ ತಾಲ್ಲೂಕಿನ ಕಸಬಾ ಹೋಬಳಿಯ ಚಿನ್ನಸಂದ್ರ ಗ್ರಾಮದ ಸರ್ವೆ ನಂ.194ರಲ್ಲಿ 2 ಎಕರೆ ಜಮೀನು ಮಂಜೂರಾಗಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; | ಬಂದಿದೆ. |
| ಇ) | ಬಂದಿದ್ದಲ್ಲಿ, ಯಾವ ಕಾಲಮಿತಿಯೊಳಗೆ ಅನುದಾನ ಬಿಡುಗಡೆ ಮಾಡಿ ಕಟ್ಟಡ ಕಾಮಗಾರಿಯನ್ನು ಪ್ರಾರಂಭಿಸಲಾಗುವುದು (ವಿವರ ನೀಡುವುದು)? | ಪ್ರಸ್ತುತ ಆರ್ಥಿಕ ವರ್ಷ ಮುಕ್ತಾಯಗೊಳ್ಳುತ್ತಿರುವುದರಿಂದ, 2021-22ನೇ ಸಾಲಿಗೆ ನಬಾರ್ಡ್ ಮಂಜೂರಾತಿ ಪಡೆದು, ಅನುದಾನದ ಲಭ್ಯತೆಯನುಸಾರ ಕಟ್ಟಡ ನಿರ್ಮಾಣಕ್ಕೆ ಕ್ರಮ ಕೈಗೊಳ್ಳಲಾಗುವುದು. |

| ಕ್ರ ಸಂ | ತಾಲ್ಲೂಕು | ಕೈ.ತ.ಸಂಸ್ಥೆಯ ಹೆಸರು | ಕಟ್ಟಡದ ವಿವರ |
|---|---|---|---|
| 1 | ಗೌರಿಬಿದನೂರು | 1. ಗೌರಿಬಿದನೂರು | ಸ್ವಂತ ಕಟ್ಟಡ |
| 2 | ಬಾಗೇಪಲ್ಲಿ | 2. ಬಾಗೇಪಲ್ಲಿ | ಸ್ವಂತ ಕಟ್ಟಡ |
| 3 | ಶಿಡ್ಲಘಟ್ಟ | 3. ಶಿಡ್ಲಘಟ್ಟ | ಸ್ವಂತ ಕಟ್ಟಡ |
| 4 | ಗುಡಿಬಂಡೆ | 4. ಗುಡಿಬಂಡೆ | ಬಾಡಿಗೆ ಕಟ್ಟಡ |
| 5 | ಚಿಕ್ಕಬಳ್ಳಾಪುರ | 5. ಚಿಕ್ಕಬಳ್ಳಾಪುರ | ಸ್ವಂತ ಕಟ್ಟಡ |
| | | 6. ಮಂಡಿಕಲ್ಲು | ಸ್ವಂತ ಕಟ್ಟಡ |
| 6 | ಚಿಂತಾಮಣಿ | 7. ಚಿಂತಾಮಣಿ | ಬಾಡಿಗೆ ರಹಿತ |

**ಸಂಖ್ಯೆ: ಕೌಉಜೀಇ 21 ಕೈತಪ್ರ 2021**

(ಡಾ.ಸಿ.ಎನ್.ಅಶ್ವಥ ನಾರಾಯಣ)
ಉಪ ಮುಖ್ಯಮಂತ್ರಿಗಳು ಹಾಗೂ
ಕೌಶಲ್ಯಾಭಿವೃದ್ಧಿ, ಉದ್ಯಮಶೀಲತೆ ಮತ್ತು
ಜೀವನೋಪಾಯ ಸಚಿವರು

## ಕರ್ನಾಟಕ ವಿಧಾನ ಸಭೆ

| | | |
|---|---|---|
| 1. | ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ | 3015 |
| 2. | ಮಾನ್ಯ ಸದಸ್ಯರ ಹೆಸರು | ಶ್ರೀ ಹ್ಯಾರಿಸ್ ಎನ್.ಎ (ಶಾಂತಿನಗರ) |
| 3. | ಉತ್ತರಿಸಬೇಕಾದ ದಿನಾಂಕ | 18/03/2021 |
| 4. | ಉತ್ತರಿಸುವವರು | ಮಾನ್ಯ ಕಾರ್ಮಿಕ ಸಚಿವರು |

| ಕ್ರ ಸಂ. | ಪ್ರಶ್ನೆ | ಉತ್ತರ |
|---|---|---|
| ಅ) | ರಾಜ್ಯಾದ್ಯಂತ ಹಾಗೂ ಹೊರರಾಜ್ಯಗಳಿಂದಲೂ ಜೀವನೋಪಾಯಕ್ಕಾಗಿ ಉದ್ಯೋಗವನ್ನರಸಿ ಬರುವ ವಲಸೆ ಕಾರ್ಮಿಕರಿಗೆ ಒದಗಿಸಲಾಗುವ ಸರ್ಕಾರದ ಸೌಲಭ್ಯ / ಸೌಕರ್ಯಗಳೇನು; | ಕಟ್ಟಡ ಮತ್ತು ಇತರೆ ನಿರ್ಮಾಣ ಕಾಮಗಾರಿಗಳಲ್ಲಿ ಕೆಲಸ ಮಾಡುವ ವಲಸೆ ಕಟ್ಟಡ ಕಾರ್ಮಿಕರನ್ನು ಒಳಗೊಂಡಂತೆ ಎಲ್ಲಾ ಕಾರ್ಮಿಕರನ್ನು ಕಟ್ಟಡ ಮತ್ತು ಇತರೆ ನಿರ್ಮಾಣ (ಉದ್ಯೋಗದ ಕ್ರಮೀಕರಣ ಮತ್ತು ಸೇವಾ ಷರತ್ತುಗಳು) ಕರ್ನಾಟಕ ನಿಯಮಗಳು 2006 ರಡಿಯಲ್ಲಿ ನೋಂದಾಯಿಸಿಕೊಂಡು ಅವರಿಗೆ ಮತ್ತು ಅವರ ಅವಲಂಬಿತರಿಗಾಗಿ 19 ರೀತಿಯ ಕಲ್ಯಾಣ ಮತ್ತು ಸಾಮಾಜಿಕ ಭದ್ರತಾ ಸೌಲಭ್ಯಗಳನ್ನು ರೂಪಿಸಿ ಮಂಡಳಿಯಿಂದ ಅನುಷ್ಠಾನಗೊಳಿಸಲಾಗುತ್ತಿದೆ. ಸೌಲಭ್ಯಗಳ ವಿವರವನ್ನು <u>ಅನುಬಂಧ-1</u> ರಲ್ಲಿ ಸಲ್ಲಿಸಿದೆ. |
| ಆ) | ಉದ್ಯೋಗ ಖಾತರಿ ಸರ್ಕಾರಿ ಪಡಿತರ ವ್ಯವಸ್ಥೆಯೂ ಸೇರಿದಂತೆ ಕಾರ್ಮಿಕ ಕಲ್ಯಾಣ ಇಲಾಖೆಯ ಸಾಕಷ್ಟು ಯೋಜನೆಗಳು ವಿವಿಧ ಕಾರಣಗಳಿಂದಾಗಿ ಫಲಾನುಭವಿಗಳಿಗೆ ತಲುಪುತ್ತಿಲ್ಲವೆಂಬುದನ್ನು ಸರ್ಕಾರ ಗಮನಿಸಿದೆಯೇ; | ಅನ್ವಯಿಸುವುದಿಲ್ಲ. |
| ಇ) | ಗಮನಿಸಿದ್ದಲ್ಲಿ ಬೃಹತ್ತ ಮೊತ್ತದ ಅನುದಾನವು ಅರ್ಹ ಕಾರ್ಮಿಕರನ್ನು ತಲುಪದಿರಲು ಕಾರಣಗಳೇನು? | ಉದ್ಭವಿಸುವುದಿಲ್ಲ. |
| ಈ) | ವಲಸೆ ಕಾರ್ಮಿಕರಿಗೆ ಮೂಲಭೂತ ಸೌಲಭ್ಯ / ಸೌಕರ್ಯಗಳನ್ನು ಕನಿಷ್ಠ ಪ್ರಮಾಣದಲ್ಲಾದರೂ ಒದಗಿಸಿಕೊಡುವಲ್ಲಿ ಸರ್ಕಾರವು ಕೈಗೊಂಡಿರುವ ಕ್ರಮಗಳೇನು? | ವಲಸೆ ಕಾರ್ಮಿಕರು ಕಟ್ಟಡ ಮತ್ತು ಇತರೆ ನಿರ್ಮಾಣ ಕಾಮಗಾರಿಗಳಲ್ಲಿಯೂ ಕೆಲಸ ನಿರ್ವಹಿಸುತ್ತಿದ್ದಲ್ಲಿ, ಕಟ್ಟಡ ಮತ್ತು ಇತರೆ ನಿರ್ಮಾಣ ಮಂಡಳಿಯ ಫಲಾನುಭವಿಗಳಾಗಿ ನೋಂದಾಯಿಸಿಕೊಳ್ಳಬಹುದಾಗಿದೆ. ನೋಂದಾಯಿತ ವಲಸೆ ಕಟ್ಟಡ ಮತ್ತು ಇತರೆ ನಿರ್ಮಾಣ ಕಾರ್ಮಿಕರಿಗೆ ಮಂಡಳಿಯಿಂದ ದೊರೆಯಬಹುದಾದ ಎಲ್ಲಾ ಸೌಲಭ್ಯಗಳನ್ನು ಪಡೆಯಲು ಅರ್ಹರಾಗಿರುತ್ತಾರೆ. ಅವುಗಳೆಂದರೆ;<br>• ಶೈಕ್ಷಣಿಕ ಸಹಾಯಧನ,<br>• ಅಪಘಾತ ಪರಿಹಾರ ಸಹಾಯಧನ,<br>• ಅಂತ್ಯಕ್ರಿಯೆ ವೆಚ್ಚ ಮತ್ತು ಅನುಗ್ರಹ ರಾಶಿ ಸಹಾಯಧನ,<br>• ಪಿಂಚಣಿ,<br>• ಪ್ರಮುಖ ವೈದ್ಯಕೀಯ ಸಹಾಯಧನ, |

| | | |
|---|---|---|
| | | • ಹೆರಿಗೆ ಸಹಾಯಧನ,<br>• ವೈದ್ಯಕೀಯ ವೆಚ್ಚ.<br>ಮೇಲ್ಕಂಡ ಎಲ್ಲಾ ಮೂಲಭೂತ ಸೌಕರ್ಯಗಳನ್ನು ಪಡೆಯಲು ಅರ್ಹರಾಗಿರುತ್ತಾರೆ. |
| ಉ) | ಆ ನಿಟ್ಟಿನಲ್ಲಿ ಸಾಧಿಸಿದ ಪ್ರಗತಿಯೇನು? | ವಲಸೆ ನೋಂದಾಯಿತ ಕಟ್ಟಡ ಮತ್ತು ಇತರೆ ನಿರ್ಮಾಣ ಕಾರ್ಮಿಕರ ಕಲ್ಯಾಣ ಮತ್ತು ಸಾಮಾಜಿಕ ಭದ್ರತಾ ಸೌಲಭ್ಯಗಳ ವೆಚ್ಚವನ್ನು ಒಳಗೊಂಡಂತೆ ರಾಜ್ಯದ ನೋಂದಾಯಿತ ಕಟ್ಟಡ ಮತ್ತು ಇತರ ನಿರ್ಮಾಣ ಕಾರ್ಮಿಕರ ಸೌಲಭ್ಯಗಳಿಗಾಗಿ ತಗುಲಿದ ಒಟ್ಟಾರೆ ವೆಚ್ಚದ ಮೊತ್ತವನ್ನು ಅನುಬಂಧ-2ರಲ್ಲಿ ಲಗತ್ತಿಸಿದೆ.<br>ವಿವಿಧ ಕಲ್ಯಾಣ ಮತ್ತು ಸಾಮಾಜಿಕ ಭದ್ರತಾ ಸೌಲಭ್ಯಗಳಡಿ ಇದೂವರೆಗೂ 1,67,236 ಫಲಾನುಭವಿಗಳಿಗೆ ಒಟ್ಟು ರೂ. 174.69 ಕೋಟಿಯಷ್ಟು ಮೊತ್ತವನ್ನು ವಿತರಿಸಲಾಗಿರುತ್ತದೆ. |

**ಕಾಇ 119 ಎಲ್‌ಇಟಿ 2021**

*(ಅರಬೈಲ್ ಶಿವರಾಂ ಹೆಬ್ಬಾರ್)*
**ಕಾರ್ಮಿಕ ಸಚಿವರು**

# ಅನುಬಂಧ–1

## (ಚುಕ್ಕೆ ಗುರುತಿಲ್ಲದಪ್ರಶ್ನೆ ಸಂಖ್ಯೆ 3015)

### ಕರ್ನಾಟಕ ಕಟ್ಟಡ ಮತ್ತು ಇತರೆ ನಿರ್ಮಾಣ ಕಾರ್ಮಿಕರ ಕಲ್ಯಾಣ ಮಂಡಳ ವತಿಯಿಂದ ಫಲಾನುಭವಿಗಳಿಗೆ ಸಿಗುವ ಸೌಲಭ್ಯಗಳು

1. **ಪಿಂಚಣಿ ಸೌಲಭ್ಯ:** ಮೂರು ವರ್ಷ ಸದಸ್ಯತ್ವದೊಂದಿಗೆ 60 ವರ್ಷ ಪೂರೈಸಿದ ಫಲಾನುಭವಿಗೆಮಾಸಿಕ ರೂ.2,000/-
2. **ಕುಟುಂಬ ಪಿಂಚಣಿ ಸೌಲಭ್ಯ:** ಮೃತ ಪಿಂಚಣಿದಾರರ ಪತಿ / ಪತ್ನಿ ಮಾಸಿಕ ರೂ.1000/-
3. **ದುರ್ಬಲತೆ ಪಿಂಚಣಿ:** ನೋಂದಾಯಿತ ಫಲಾನುಭವಿಯು ಖಾಯಿಲೆಗಳಿಂದ ಅಥವಾಕಟ್ಟಡ ಕಾಮಗಾರಿಗಳ ಅಪಘಾತದಿಂದ ಶಾಶ್ವತ/ಭಾಗಶಃಅಂಗವಿಕಲತೆ ಹೊಂದಿದ್ದರೆ ಮಾಸಿಕ ರೂ.2,000/- ಪಿಂಚಣಿ ಹಾಗೂ ಶೇಕಡವಾರು ದುರ್ಬಲತೆಯನ್ನಾಧರಿಸಿ ರೂ.2,00,000/- ದವರೆಗೆಅನುಗ್ರಹ ರಾಶಿ ಸಹಾಯಧನ.
4. **ಕನ್ನಡಕ, ಶ್ರವಣಯಂತ್ರ, ಕೃತಕ ಕೈಕಾಲು ಮತ್ತು ಗಾಲಿ ಕುರ್ಚಿ**ಮರುಪಾವತಿ ಸೌಲಭ್ಯ.
5. **ಟ್ರೈನಿಂಗ್-ಕಮ್-ಟೂಲ್‌ಕಿಟ್‌ಸೌಲಭ್ಯ (ಶ್ರಮ ಸಾಮರ್ಥ್ಯ)** : ರೂ.30,000/- ವರೆಗೆ
6. **ಶ್ರಮ ಸಂಸಾರ ಸಾಮರ್ಥ್ಯತರಬೇತಿ ಸೌಲಭ್ಯ:** ನೋಂದಾಯಿತ ಫಲಾನುಭವಿಯಅವಲಂಬಿತರಿಗೆ
7. **ವಸತಿ ಸೌಲಭ್ಯ (ಕಾರ್ಮಿಕ ಗೃಹ ಭಾಗ್ಯ):** ರೂ.2,00,000/- ದವರೆಗೆ ಮುಂಗಡ ಸೌಲಭ್ಯ
8. **ಹೆರಿಗೆ ಸೌಲಭ್ಯ (ತಾಯಿ ಲಕ್ಷ್ಮೀ ಬಾಂಡ್):** ಮಹಿಳಾ ಫಲಾನುಭವಿಯ ಮೊದಲ ಎರಡು ಮಕ್ಕಳಿಗೆ ಹೆಣ್ಣು ಮಗುವಿನ ಜನನಕ್ಕೆರೂ. 30,000/- ಮತ್ತುಗಂಡು ಮಗುವಿನ ಜನನಕ್ಕೆರೂ.20,000/-
9. **ಶಿಶು ಪಾಲನಾ ಸೌಲಭ್ಯ:**
10. **ಅಂತ್ಯಕ್ರಿಯೆ ವೆಚ್ಚ** : ರೂ.4,000/- ಹಾಗೂ ಅನುಗ್ರಹ ರಾಶಿ ರೂ.50,000/-ಸಹಾಯಧನ
11. **ಶೈಕ್ಷಣಿಕ ಸಹಾಯಧನ (ಕಲಿಕೆ ಭಾಗ್ಯ):** ಫಲಾನುಭವಿಯಇಬ್ಬರು ಮಕ್ಕಳ ವಿದ್ಯಾಭ್ಯಾಸಕ್ಕಾಗಿ:

| ಕ್ರ.ಸಂ | ತರಗತಿ (ಉತ್ತೀರ್ಣಕ್ಕೆ) | ವಾರ್ಷಿಕ ಸಹಾಯಧನ | |
|---|---|---|---|
| | | ಗಂಡು | ಹೆಣ್ಣು |
| I. | ನರ್ಸರಿ | 3,000 | 4,000 |
| II. | 1 ರಿಂದ 4ನೇ ತರಗತಿ | 3,000 | 4,000 |
| III. | 5 ರಿಂದ 8ನೇ ತರಗತಿ | 5,000 | 6,000 |
| IV. | 9 ಹಾಗೂ 10ನೇ ತರಗತಿ | 10,000 | 11,000 |
| V. | ಪ್ರಥಮ ಪಿಯುಸಿ ಮತ್ತು ದ್ವಿತೀಯ ಪಿ.ಯು.ಸಿ | 10,000 | 14,000 |
| VI. | ಐಟಿಐ | 12,000 | 15,000 |
| VII. | ಪದವಿ ಪ್ರತಿ ವರ್ಷಕ್ಕೆ | 15,000 | 20,000 |
| VIII. | ಸ್ನಾತಕೋತ್ತರ ಪದವಿ ಸೇರ್ಪಡೆಗೆ | 20,000 | 20,000 |
| | ಮತ್ತುಪ್ರತಿ ವರ್ಷಕ್ಕೆ | 20,000 | 25,000 |
| IX. | ಇಂಜಿನಿಯರಿಂಗ್‌ಕೋರ್ಸ್ ಬಿಇ/ ಬಿ.ಟೆಕ್ ಸೇರ್ಪಡೆಗೆ | 25,000 | 25,000 |
| | ಮತ್ತುಪ್ರತಿ ವರ್ಷಕ್ಕೆ | 25,000 | 30,000 |
| X. | ವೈದ್ಯಕೀಯಕೋರ್ಸ್‌ಗೆ ಸೇರ್ಪಡೆಗೆ | 30,000 | 30,000 |
| | ಮತ್ತುಪ್ರತಿ ವರ್ಷಕ್ಕೆ | 40,000 | 50,000 |
| XI. | ಡಿಪ್ಲೋಮಾ | 15,000 | 20,000 |
| XII. | ಎಂ.ಟೆಕ್ / ಎಂ.ಇ | 30,000 | 35,000 |
| XIII. | ಎಂ.ಡಿ (ವೈದ್ಯಕೀಯ) | 45,000 | 55,000 |
| XIV. | ಪಿಹೆಚ್‌ಡಿ (ಪ್ರತಿ ವರ್ಷಕ್ಕೆ) ಗರಿಷ್ಠ 03 ವರ್ಷ | 25,000 | 30,000 |

12. **ವೈದ್ಯಕೀಯ ಸಹಾಯಧನ (ಕಾರ್ಮಿಕಆರೋಗ್ಯ ಭಾಗ್ಯ):** ನೋಂದಾಯಿತ ಫಲಾನುಭವಿ ಹಾಗೂ ಅವರಅವಲಂಬಿತರಿಗೆರೂ.300/- ರಿಂದರೂ.10,000/-ವರೆಗೆ
13. **ಅಪಘಾತ ಪರಿಹಾರ:** ಮರಣ ಹೊಂದಿದ್ದಲ್ಲಿರೂ.5,00,000/-, ಸಂಪೂರ್ಣ ಶಾಶ್ವತದುರ್ಬಲತೆಯಾದಲ್ಲಿ ರೂ.2,00,000/- ಮತ್ತುಭಾಗಶಃ ಶಾಶ್ವತದುರ್ಬಲತೆಯಾದಲ್ಲಿ ರೂ.1,00,000/-
14. **ಪ್ರಮುಖ ವೈದ್ಯಕೀಯ ವೆಚ್ಚ ಸಹಾಯಧನ (ಕಾರ್ಮಿಕಚಿಕಿತ್ಸಾ ಭಾಗ್ಯ):** ಹೃದ್ರೋಗ, ಕಿಡ್ನಿಜೋಡಣೆ, ಕ್ಯಾನ್ಸರ್ ಶಸ್ತ್ರಚಿಕಿತ್ಸೆ, ಕಣ್ಣಿನ ಶಸ್ತ್ರಚಿಕಿತ್ಸೆ, ಪಾರ್ಶ್ವವಾಯು, ಮೂಳೆ ಶಸ್ತ್ರಚಿಕಿತ್ಸೆ, ಗರ್ಭಕೋಶ ಶಸ್ತ್ರಚಿಕಿತ್ಸೆ, ಅಸ್ತಮ ಚಿಕಿತ್ಸೆ, ಗರ್ಭಪಾತ ಪ್ರಕರಣಗಳು, ಪಿತ್ತಕೋಶದತೊಂದರೆಗೆ ಸಂಬಂಧಿತಚಿಕಿತ್ಸೆ, ಮೂತ್ರ ಪಿಂಡದಲ್ಲಿನಕಲ್ಲುತೆಗೆಯುವಚಿಕಿತ್ಸೆ, ಮೆದುಳಿನ ರಕ್ತಸ್ರಾವದಚಿಕಿತ್ಸೆ, ಅಲ್ಸರ್‌ಚಿಕಿತ್ಸೆ, ಡಯಾಲಿಸಿಸ್ ಚಿಕಿತ್ಸೆ, ಕಿಡ್ನಿ ಶಸ್ತ್ರಚಿಕಿತ್ಸೆ, ಇ.ಎನ್.ಟಿ. ಚಿಕಿತ್ಸೆ ಮತ್ತು ಶಸ್ತ್ರಚಿಕಿತ್ಸೆ, ನರರೋಗ ಶಸ್ತ್ರಚಿಕಿತ್ಸೆ, ವ್ಯಾಸ್ಕ್ಯುಲರ್ ಶಸ್ತ್ರಚಿಕಿತ್ಸೆ, ಅನ್ನನಾಳದ ಚಿಕಿತ್ಸೆ ಮತ್ತು ಶಸ್ತ್ರಚಿಕಿತ್ಸೆ, ಕರುಳಿನ ಶಸ್ತ್ರಚಿಕಿತ್ಸೆ, ಸ್ತನ ಸಂಬಂಧಿತಚಿಕಿತ್ಸೆ ಮತ್ತು ಶಸ್ತ್ರಚಿಕಿತ್ಸೆ, ಹರ್ನಿಯ ಶಸ್ತ್ರಚಿಕಿತ್ಸೆ, ಅಪೆಂಡಿಕ್ಸ್ ಶಸ್ತ್ರಚಿಕಿತ್ಸೆ, ಮೂಳೆ ಮುರಿತ/ಡಿಸ್‌ಲೊಕೇಶನ್‌ಚಿಕಿತ್ಸೆ, ಇತರೆಔದ್ಯೋಗಿಕ ಖಾಯಿಲೆಗಳ ಚಿಕಿತ್ಸೆಗಳಿಗೆ ರೂ.2,00,000/-ವರೆಗೆ
15. **ಮದುವೆ ಸಹಾಯಧನ (ಗೃಹ ಲಕ್ಷ್ಮೀ ಬಾಂಡ್):** ಫಲಾನುಭವಿ ಅಥವಾಅವರಇಬ್ಬರು ಮಕ್ಕಳ ಮದುವೆಗೆತಲಾ ರೂ.50,000/-
16. **LPG ಸಂಪರ್ಕ ಸೌಲಭ್ಯ (ಕಾರ್ಮಿಕ ಅನಿಲ ಭಾಗ್ಯ):** ಅನಿಲ ಸಂಪರ್ಕದೊಂದಿಗೆಎರಡು ಬರ್ನರ್ ಸ್ಟೌವ್
17. **ಬಿಎಂಟಿಸಿ ಬಸ್ ಪಾಸ್ ಸೌಲಭ್ಯ:** ಬೆಂಗಳೂರು ಮಹಾನಗರ ಪಾಲಿಕೆ ವ್ಯಾಪ್ತಿಯಲ್ಲಿ ಕೆಲಸ ಮಾಡುತ್ತಿರುವಂತಹ / ವಾಸಸ್ಥಳದಿಂದ ಬೆಂಗಳೂರಿಗೆ ಪ್ರಯಾಣಿಸುವ ನೋಂದಾಯಿತಕಟ್ಟಡಕಾರ್ಮಿಕರಿಗೆ
18. **ಕೆಎಸ್‌ಆರ್‌ಟಿಸಿ ಬಸ್ ಪಾಸ್‌ನ ಸೌಲಭ್ಯ:** ರಾಜ್ಯದಾದ್ಯಂತ ವಿದ್ಯಾಭ್ಯಾಸದಲ್ಲಿತೊಡಗಿರುವ ನೋಂದಾಯಿತಕಾರ್ಮಿಕರಇಬ್ಬರು ಮಕ್ಕಳಿಗೆ (ಈ ಯೋಜನೆಯನ್ನು ಜಾರಿಗೊಳಸಲಾಗುತ್ತಿದೆ)
19. **ತಾಯಿ ಮಗು ಸಹಾಯ ಹಸ್ತ:** ಮಹಿಳಾ ಫಲಾನುಭವಿಯು ಮಗುವಿಗೆ ಜನ್ಮ ನೀಡಿದ ಸಂದರ್ಭದಲ್ಲಿಆಕೆಯ ಮಗುವಿನ ಶಾಲಾ ಪೂರ್ವ ಶಿಕ್ಷಣ ಮತ್ತು ಪೌಷ್ಠಿಕತೆಗಾಗಿ ಮಗುವಿಗೆ ಮೂರು ವರ್ಷಗಳು ತುಂಬುವವರೆಗೆ ವಾರ್ಷಿಕರೂ.6,000/- ಗಳ ಸಹಾಯಧನ.

# ಅನುಬಂಧ-02

## (ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ 3015)

2007 ರಿಂದ ಫಬ್ರವರಿ-2021 ರವರೆಗೆಕಲ್ಯಾಣ ಮತ್ತು ಸಾಮಾಜಿಕ ಭದ್ರತಾ ಸೌಲಭ್ಯಗಳಡಿಯಲ್ಲಿ ವಿತರಿಸಲಾದ ವರ್ಷವಾರು ಸಾಧನೆಯ ವಿವರ

| ಸೌಲಭ್ಯಗಳ ವಿವರ | 2007-08 ರಿಂದ 2012-13 ರವರೆಗೆ | | 2013-14 ರಿಂದ 2017-18 ರವರೆಗೆ | | 2018-19 | | 2019-20 | | 2020-21 | | ಒಟ್ಟು | |
|---|---|---|---|---|---|---|---|---|---|---|---|---|
| | ಸಂಖ್ಯೆ | ಮೊತ್ತ | ಸಂಖ್ಯೆ | ಮೊತ್ತ | ಸಂಖ್ಯೆ | ಮೊತ್ತ | ಸಂಖ್ಯೆ | ಮೊತ್ತ | ಸಂಖ್ಯೆ | ಮೊತ್ತ | ಸಂಖ್ಯೆ | ಮೊತ್ತ |
| ಶೈಕ್ಷಣಿಕಧನಸಹಾಯ | 10,896 | 27,679,600 | 227,489 | 1,038,126,292 | 95,637 | 533,279,365 | 125,403 | 724,788,917 | 100,168 | 735,327,640 | 559,593 | 3,059,201,814 |
| ಮದುವೆಧನಸಹಾಯ | 2,126 | 15,160,000 | 23,514 | 1,161,415,000 | 11,380 | 475,875,000 | 10,966 | 453,596,000 | 14,784 | 379,665,000 | 62,770 | 2,485,711,000 |
| ಅಂತ್ಯ ಸಂಸ್ಕಾರಕ್ಕೆ ವೆಚ್ಚ | 1,376 | 20,921,000 | 6,368 | 328,454,619 | 2,208 | 117,282,000 | 3,674 | 198,641,000 | 2,788 | 150,790,000 | 16,414 | 816,088,619 |
| ಪ್ರಮುಖ ವೈದ್ಯಕೀಯ | 233 | 8,104,269 | 2,272 | 63,982,540 | 530 | 12,829,473 | 778 | 22,668,307 | 1,125 | 41,473,646 | 4,938 | 149,058,235 |
| ಅಪಘಾತ ಪರಿಹಾರ | 195 | 14,777,740 | 185 | 25,574,260 | 58 | 13,781,000 | 116 | 31,957,000 | 123 | 20,559,000 | 677 | 106,649,000 |
| ಹೆರಿಗೆಧನಸಹಾಯ | 365 | 2,192,000 | 1,677 | 24,721,500 | 552 | 9,160,000 | 572 | 11,930,174 | 55 | 1,100,000 | 3,221 | 49,103,674 |
| ವೈದ್ಯಕೀಯ ವೆಚ್ಚ | 779 | 742,750 | 268 | 565,048 | 192 | 5,592,698 | 95 | 2,019,557 | 206 | 2,512,933 | 1,540 | 11,432,986 |
| ಉಪಕರಣ ಖರೀದಿಗೆ ಸಾಲ | 3 | 14,890 | 17 | 85,000 | 0 | 0 | 0 | 0 | 0 | 0 | 20 | 99,890 |
| ಪಿಂಚಣಿ ಸೌಲಭ್ಯ | 0 | 0 | 759 | 9,131,000 | 520 | 12,052,000 | 627 | 23,026,000 | 2,410 | 23,478,000 | 4,316 | 67,687,000 |
| ದುರ್ಬಲತೆ ಪಿಂಚಣಿ | 0 | 0 | 11 | 1,608,000 | 7 | 1,214,000 | 18 | 2,999,000 | 40 | 1,270,000 | 76 | 7,091,000 |
| ಕುಟುಂಬ ಪಿಂಚಣಿ | 0 | 0 | 0 | 0 | 0 | 0 | 0 | 0 | 11 | 17,000 | 11 | 17,000 |
| ಅನಿಲ ಭಾಗ್ಯ | 0 | 0 | 0 | 20,000,000 | 4,055 | 0 | 0 | 0 | 0 | 0 | 4,055 | 20,000,000 |
| ಶ್ರಮಸಾಮರ್ಥ್ಯ | 0 | 0 | 1,854 | 83,995,481 | 3,157 | 56,972,953 | 623 | 90,170,239 | 0 | 0 | 5,634 | 231,138,673 |
| ಬಿಎಂಟಿಸಿ ಬಸ್ ಪಾಸ್ | 0 | 0 | 0 | 52,479,000 | 1,602 | 0 | 2,996 | 594,300 | 45,281 | 384,878,550 | 49,879 | 437,951,850 |
| ವಸತಿ ಸೌಲಭ್ಯ | 0 | 0 | 0 | 0 | 0 | 0 | 5,129 | 760,000,000 | 0 | 0 | 5,129 | 760,000,000 |
| ಶಿಶು ಪಾಲನಾ ಕೇಂದ್ರಗಳ ಸ್ಥಾಪನೆ | 0 | 0 | 0 | 0 | 0 | 0 | 501 | 3,000,000 | 218 | 5,763,296 | 719 | 8,763,296 |
| ತಾಯಿ ಮಗು ಸಹಾಯ ಹಸ್ತ | 0 | 0 | 0 | 0 | 0 | 0 | 0 | 0 | 27 | 162,000 | 27 | 162,000 |
| ಒಟ್ಟು | 15,973 | 89,592,249 | 264,414 | 2,810,137,740 | 119,898 | 1,238,038,489 | 151,498 | 2,325,390,494 | 167,236 | 1,746,997,065 | 719,019 | 8,210,156,037 |

# ಕರ್ನಾಟಕ ವಿಧಾನ ಸಭೆ

| | | |
|---|---|---|
| 1. | ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ | 3016 |
| 2. | ಮಾನ್ಯ ಸದಸ್ಯರ ಹೆಸರು | ಶ್ರೀ ಹ್ಯಾರಿಸ್ ಎನ್.ಎ (ಶಾಂತಿನಗರ) |
| 3. | ಉತ್ತರಿಸಬೇಕಾದ ದಿನಾಂಕ | 18/03/2021 |
| 4. | ಉತ್ತರಿಸುವವರು | ಮಾನ್ಯ ಕಾರ್ಮಿಕ ಸಚಿವರು |

| ಕ್ರ ಸಂ. | ಪ್ರಶ್ನೆ | ಉತ್ತರ |
|---|---|---|
| ಅ) | ವಲಸೆ ಕಾರ್ಮಿಕರು ಮತ್ತು ಅವರ ಸ್ಥಿತಿಗತಿಗಳ ಸುಧಾರಣೆಗಾಗಿ ಸರ್ಕಾರದ ಸರಳ ಮತ್ತು ಸುಧಾರಿತ ಯೋಜನಾನುಷ್ಠಾನಗಳಾವುವು; [ವಿವರ ನೀಡುವುದು] | ವಲಸೆ ಕಾರ್ಮಿಕರು ಮತ್ತು ಅವರ ಸ್ಥಿತಿಗತಿ ಸುಧಾರಣೆಗಾಗಿ ಕಾರ್ಮಿಕ ಇಲಾಖೆಯಿಂದ ಯಾವುದೇ ಸುಧಾರಿತ ಯೋಜನೆಗಳನ್ನು ರೂಪಿಸಿರುವುದಿಲ್ಲ. ಆದರೆ ವಲಸೆ ಕಾರ್ಮಿಕರು ಕಟ್ಟಡ ಮತ್ತು ಇತರೆ ನಿರ್ಮಾಣ ಕಾರ್ಯಗಳಲ್ಲಿ ತೊಡಗಿಸಿಕೊಂಡಿದ್ದು, ಕಟ್ಟಡ ಮತ್ತು ಇತರೆ ನಿರ್ಮಾಣ ಕಾರ್ಮಿಕರ ಕಲ್ಯಾಣ ಮಂಡಳಿಯಲ್ಲಿ ನೊಂದಾಯಿತರಾಗಿದ್ದಲ್ಲಿ, ಅವರಿಗೆ ಮತ್ತು ಅವರ ಅವಲಂಬಿತರಿಗಾಗಿ 19 ರೀತಿಯ ಕಲ್ಯಾಣ ಮತ್ತು ಸಾಮಾಜಿಕ ಭದ್ರತಾ ಸೌಲಭ್ಯಗಳನ್ನು ರೂಪಿಸಿ ಅನುಷ್ಠಾನಗೊಳಿಸಲಾಗುತ್ತಿದೆ. ಸೌಲಭ್ಯಗಳ ವಿವರವನ್ನು **ಅನುಬಂಧದಲ್ಲಿ** ಲಗತ್ತಿಸಿದೆ. |
| ಆ) | ವಲಸೆ ಕಾರ್ಮಿಕರು ತಮ್ಮೂರನ್ನು ಬಿಡುವ ಮೊದಲು ಗ್ರಾಮ ಪಂಚಾಯತ್ / ಸ್ಥಳೀಯ ಸಂಸ್ಥೆಗಳಲ್ಲಿ ತಮ್ಮ ವಿವರ ಮತ್ತು ಹೋಗುವ ಸ್ಥಳ ಹಾಗೂ ಎಷ್ಟು ಜನರು ಕುಟುಂಬದಿಂದ ವಲಸೆ ಹೋಗುತ್ತಿದ್ದಾರೆ ಎಂಬಿತ್ಯಾದಿ ವಿವರಗಳನ್ನು ಪಡೆದು ದಾಖಲಿಸುವ ಮತ್ತು ಹಿಂದಿರುಗಿ ಬಂದ ನಂತರವೂ ದಾಖಲೆಗೊಳಪಡಿಸುವ ನಿಯಮವನ್ನು ರೂಪಿಸಲು ಸರ್ಕಾರವು ಕ್ರಮಕೈಗೊಳ್ಳುವುದೇ; | ಈ ಬಗ್ಗೆ ಪ್ರಸ್ತುತ ಯಾವುದೇ ನಿಯಮವನ್ನು ರೂಪಿಸಿರುವುದಿಲ್ಲ. |
| ಇ) | ಕಾರ್ಮಿಕರು ವಲಸೆ ಹೋಗುವ, ಹಿಂದಿರುಗುವ ಹಾಗೂ ಅವರೊಂದಿಗಿನ ಮಹಿಳೆಯರು ಮತ್ತು ಮಕ್ಕಳ ಕುರಿತಾದ ದಾಖಲೆಗಳನ್ನು ಪಡೆಯುವ ಮೂಲಕ ಅವರ ಸುರಕ್ಷತೆ ಮತ್ತು ಯೋಗಕ್ಷೇಮವನ್ನು ಸರ್ಕಾರ ಗಮನಿಸುವ ಮೂಲಕ ಕಾರ್ಮಿಕರಿಗೆ ಸುಭದ್ರತೆಯನ್ನು ಒದಗಿಸಿಕೊಡುವ ಕುರಿತಾದ ಸರ್ಕಾರದ ಕ್ರಮಗಳೇನು; | ಈ ಬಗ್ಗೆ ಪ್ರಸ್ತುತ ಯಾವುದೇ ನಿಯಮವನ್ನು ರೂಪಿಸಿರುವುದಿಲ್ಲ. |
| ಈ) | ಊರು ಬಿಡುವ ಮುನ್ನ ವಿವರಗಳ ದಾಖಲೆಗಳನ್ನು ಪಡೆಯುವ ಹಾಗೂ ವಲಸೆ ಕಾರ್ಮಿಕರುಗಳಿಗೆ ಯೋಜನಾ ಸೌಲಭ್ಯಗಳನ್ನು ಒದಗಿಸಿಕೊಡುವ ಮತ್ತು ಮಧ್ಯವರ್ತಿಗಳ ಹಾವಳಿಯನ್ನು ತಪ್ಪಿಸುವ ಕುರಿತಾದ ಸರ್ಕಾರದ ಕ್ರಮಗಳೇನು? | ಅನ್ವಯಿಸುವುದಿಲ್ಲ. |

ಕಾಇ 118 ಎಲ್‌ಇಟ 2021

(ಅರಬೈಲ್ ಶಿವರಾಂ ಹೆಬ್ಬಾರ್)
ಕಾರ್ಮಿಕ ಸಚಿವರು

# ಅನುಬಂಧ

## (ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ 3016)

**ಕರ್ನಾಟಕ ಕಟ್ಟಡ ಮತ್ತು ಇತರೆ ನಿರ್ಮಾಣ ಕಾರ್ಮಿಕರ ಕಲ್ಯಾಣ ಮಂಡಳಿವತಿಯಿಂದ ಫಲಾನುಭವಿಗಳಿಗೆ ಸಿಗುವ ಸೌಲಭ್ಯಗಳು**

1. **ಪಿಂಚಣಿ ಸೌಲಭ್ಯ:** ಮೂರು ವರ್ಷ ಸದಸ್ಯತ್ವದೊಂದಿಗೆ 60 ವರ್ಷ ಪೂರೈಸಿದ ಫಲಾನುಭವಿಗೆ ಮಾಸಿಕ ರೂ.2,000/-
2. **ಕುಟುಂಬ ಪಿಂಚಣಿ ಸೌಲಭ್ಯ:** ಮೃತ ಪಿಂಚಣಿದಾರರ ಪತಿ / ಪತ್ನಿ ಮಾಸಿಕ ರೂ.1000/-
3. **ದುರ್ಬಲತೆ ಪಿಂಚಣಿ:** ನೋಂದಾಯಿತ ಫಲಾನುಭವಿಯು ಖಾಯಿಲೆಗಳಿಂದ ಅಥವಾ ಕಟ್ಟಡ ಕಾಮಗಾರಿಗಳ ಅಪಘಾತದಿಂದ ಶಾಶ್ವತ/ಭಾಗಶಃ ಅಂಗವಿಕಲತೆ ಹೊಂದಿದ್ದರೆ ಮಾಸಿಕ ರೂ.2,000/- ಪಿಂಚಣಿ ಹಾಗೂ ಶೇಕಡವಾರು ದುರ್ಬಲತೆಯನ್ನಾಧರಿಸಿ ರೂ.2,00,000/- ದವರೆಗೆ ಅನುಗ್ರಹ ರಾಶಿ ಸಹಾಯಧನ.
4. **ಕನ್ನಡಕ, ಶ್ರವಣಯಂತ್ರ, ಕೃತಕ ಕೈಕಾಲು ಮತ್ತು ಗಾಲಿ ಕುರ್ಚಿಮರುಪಾವತಿ ಸೌಲಭ್ಯ.**
5. **ಟ್ರೈನಿಂಗ್-ಕಮ್-ಟೂಲ್‌ಕಿಟ್‌ಸೌಲಭ್ಯ (ಶ್ರಮ ಸಾಮರ್ಥ್ಯ) : ರೂ.30,000/- ವರೆಗೆ**
6. **ಶ್ರಮ ಸಂಸಾರ ಸಾಮರ್ಥ್ಯ ತರಬೇತಿ ಸೌಲಭ್ಯ:** ನೋಂದಾಯಿತ ಫಲಾನುಭವಿಯ ಅವಲಂಬಿತರಿಗೆ
7. **ವಸತಿ ಸೌಲಭ್ಯ (ಕಾರ್ಮಿಕ ಗೃಹ ಭಾಗ್ಯ):** ರೂ.2,00,000/- ದವರೆಗೆ ಮುಂಗಡ ಸೌಲಭ್ಯ
8. **ಹೆರಿಗೆ ಸೌಲಭ್ಯ (ತಾಯಿ ಲಕ್ಷ್ಮೀ ಬಾಂಡ್):** ಮಹಿಳಾ ಫಲಾನುಭವಿಯ ಮೊದಲ ಎರಡು ಮಕ್ಕಳಿಗೆ ಹೆಣ್ಣು ಮಗುವಿನ ಜನನಕ್ಕೆ ರೂ. 30,000/- ಮತ್ತು ಗಂಡು ಮಗುವಿನ ಜನನಕ್ಕೆ ರೂ.20,000/-
9. **ಶಿಶು ಪಾಲನಾ ಸೌಲಭ್ಯ:**
10. **ಅಂತ್ಯಕ್ರಿಯೆ ವೆಚ್ಚ :** ರೂ.4,000/- ಹಾಗೂ ಅನುಗ್ರಹ ರಾಶಿ ರೂ.50,000/-ಸಹಾಯಧನ
11. **ಶೈಕ್ಷಣಿಕ ಸಹಾಯಧನ (ಕಲಿಕೆ ಭಾಗ್ಯ):** ಫಲಾನುಭವಿಯ ಇಬ್ಬರು ಮಕ್ಕಳ ವಿದ್ಯಾಭ್ಯಾಸಕ್ಕಾಗಿ:

| ಕ್ರ.ಸಂ | ತರಗತಿ (ಉತ್ತೀರ್ಣಕ್ಕೆ) | ವಾರ್ಷಿಕ ಸಹಾಯ ಧನ | |
|---|---|---|---|
| | | ಗಂಡು | ಹೆಣ್ಣು |
| I. | ನರ್ಸರಿ | 3,000 | 4,000 |
| II. | 1 ರಿಂದ 4ನೇ ತರಗತಿ | 3,000 | 4,000 |
| III. | 5 ರಿಂದ 8ನೇ ತರಗತಿ | 5,000 | 6,000 |
| IV. | 9 ಹಾಗೂ 10ನೇ ತರಗತಿ | 10,000 | 11,000 |
| V. | ಪ್ರಥಮ ಪಿಯುಸಿ ಮತ್ತು ದ್ವಿತೀಯ ಪಿ.ಯು.ಸಿ | 10,000 | 14,000 |
| VI. | ಐಟಿಐ | 12,000 | 15,000 |
| VII. | ಪದವಿ ಪ್ರತಿ ವರ್ಷಕ್ಕೆ | 15,000 | 20,000 |
| VIII. | ಸ್ನಾತಕೋತ್ತರ ಪದವಿ ಸೇರ್ಪಡೆಗೆ | 20,000 | 20,000 |
| | ಮತ್ತು ಪ್ರತಿ ವರ್ಷಕ್ಕೆ | 20,000 | 25,000 |
| IX. | ಇಂಜಿನಿಯರಿಂಗ್ ಕೋರ್ಸ್ ಬಿಇ/ ಬಿ.ಟೆಕ್ ಸೇರ್ಪಡೆಗೆ | 25,000 | 25,000 |
| | ಮತ್ತು ಪ್ರತಿ ವರ್ಷಕ್ಕೆ | 25,000 | 30,000 |
| X. | ವೈದ್ಯಕೀಯ ಕೋರ್ಸ್‌ಗೆ ಸೇರ್ಪಡೆಗೆ | 30,000 | 30,000 |
| | ಮತ್ತು ಪ್ರತಿ ವರ್ಷಕ್ಕೆ | 40,000 | 50,000 |
| XI. | ಡಿಪ್ಲೋಮಾ | 15,000 | 20,000 |
| XII. | ಎಂ.ಟೆಕ್ / ಎಂ.ಇ | 30,000 | 35,000 |
| XIII. | ಎಂ.ಡಿ (ವೈದ್ಯಕೀಯ) | 45,000 | 55,000 |
| XIV. | ಪಿಹೆಚ್‌ಡಿ (ಪ್ರತಿ ವರ್ಷಕ್ಕೆ) ಗರಿಷ್ಠ 03 ವರ್ಷ | 25,000 | 30,000 |

12. **ವೈದ್ಯಕೀಯ ಸಹಾಯಧನ (ಕಾರ್ಮಿಕ ಆರೋಗ್ಯ ಭಾಗ್ಯ):** ನೋಂದಾಯಿತ ಫಲಾನುಭವಿ ಹಾಗೂ ಅವರ ಅವಲಂಭಿತರಿಗೆ ರೂ.300/- ರಿಂದ ರೂ.10,000/-ವರೆಗೆ

13. **ಅಪಘಾತ ಪರಿಹಾರ:** ಮರಣ ಹೊಂದಿದ್ದಲ್ಲಿ ರೂ.5,00,000/-, ಸಂಪೂರ್ಣ ಶಾಶ್ವತ ದುರ್ಬಲತೆಯಾದಲ್ಲಿ ರೂ.2,00,000/- ಮತ್ತು ಭಾಗಶಃ ಶಾಶ್ವತ ದುರ್ಬಲತೆಯಾದಲ್ಲಿ ರೂ.1,00,000/-

14. **ಪ್ರಮುಖ ವೈದ್ಯಕೀಯ ವೆಚ್ಚ ಸಹಾಯಧನ (ಕಾರ್ಮಿಕ ಚಿಕಿತ್ಸಾ ಭಾಗ್ಯ):** ಹೃದ್ರೋಗ, ಕಿಡ್ನಿ ಜೋಡಣೆ, ಕ್ಯಾನ್ಸರ್ ಶಸ್ತ್ರಚಿಕಿತ್ಸೆ, ಕಣ್ಣಿನ ಶಸ್ತ್ರಚಿಕಿತ್ಸೆ, ಪಾರ್ಶ್ವವಾಯು, ಮೂಳೆ ಶಸ್ತ್ರಚಿಕಿತ್ಸೆ, ಗರ್ಭಕೋಶ ಶಸ್ತ್ರಚಿಕಿತ್ಸೆ, ಅಸ್ತಮ ಚಿಕಿತ್ಸೆ, ಗರ್ಭಪಾತ ಪ್ರಕರಣಗಳು, ಪಿತ್ತಕೋಶದ ತೊಂದರೆಗೆ ಸಂಬಂಧಿತ ಚಿಕಿತ್ಸೆ, ಮೂತ್ರ ಪಿಂಡದಲ್ಲಿನ ಕಲ್ಲು ತೆಗೆಯುವ ಚಿಕಿತ್ಸೆ, ಮೆದುಳಿನ ರಕ್ತಸ್ರಾವದ ಚಿಕಿತ್ಸೆ, ಅಲ್ಸರ್ ಚಿಕಿತ್ಸೆ, ಡಯಾಲಿಸಿಸ್ ಚಿಕಿತ್ಸೆ, ಕಿಡ್ನಿ ಶಸ್ತ್ರಚಿಕಿತ್ಸೆ, ಇ.ಎನ್.ಟಿ. ಚಿಕಿತ್ಸೆ ಮತ್ತು ಶಸ್ತ್ರಚಿಕಿತ್ಸೆ, ನರರೋಗ ಶಸ್ತ್ರಚಿಕಿತ್ಸೆ, ವ್ಯಾಸ್ಕ್ಯೂಲರ್ ಶಸ್ತ್ರಚಿಕಿತ್ಸೆ, ಅನ್ನನಾಳದ ಚಿಕಿತ್ಸೆ ಮತ್ತು ಶಸ್ತ್ರಚಿಕಿತ್ಸೆ, ಕರುಳಿನ ಶಸ್ತ್ರಚಿಕಿತ್ಸೆ, ಸ್ತನ ಸಂಬಂಧಿತ ಚಿಕಿತ್ಸೆ ಮತ್ತು ಶಸ್ತ್ರಚಿಕಿತ್ಸೆ, ಹರ್ನಿಯ ಶಸ್ತ್ರಚಿಕಿತ್ಸೆ, ಅಪೆಂಡಿಕ್ಸ್ ಶಸ್ತ್ರಚಿಕಿತ್ಸೆ, ಮೂಳೆ ಮುರಿತ/ಡಿಸ್‌ಲೊಕೇಶನ್ ಚಿಕಿತ್ಸೆ, ಇತರೆ ಔದ್ಯೋಗಿಕ ಖಾಯಿಲೆಗಳ ಚಿಕಿತ್ಸೆಗಳಿಗೆ ರೂ.2,00,000/-ವರೆಗೆ

15. **ಮದುವೆ ಸಹಾಯಧನ (ಗೃಹ ಲಕ್ಷ್ಮೀ ಬಾಂಡ್):** ಫಲಾನುಭವಿ ಅಥವಾ ಅವರ ಇಬ್ಬರು ಮಕ್ಕಳ ಮದುವೆಗೆ ತಲಾ ರೂ.50,000/-

16. **LPG ಸಂಪರ್ಕ ಸೌಲಭ್ಯ (ಕಾರ್ಮಿಕ ಅನಿಲ ಭಾಗ್ಯ):** ಅನಿಲ ಸಂಪರ್ಕದೊಂದಿಗೆಎರಡು ಬರ್ನರ್ ಸ್ಟೌವ್

17. **ಬಿಎಂಟಿಸಿ ಬಸ್ ಪಾಸ್ ಸೌಲಭ್ಯ:** ಬೆಂಗಳೂರು ಮಹಾನಗರ ಪಾಲಿಕೆ ವ್ಯಾಪ್ತಿಯಲ್ಲಿ ಕೆಲಸ ಮಾಡುತ್ತಿರುವಂತಹ / ವಾಸಸ್ಥಳದಿಂದ ಬೆಂಗಳೂರಿಗೆ ಪ್ರಯಾಣಿಸುವ ನೋಂದಾಯಿತ ಕಟ್ಟಡ ಕಾರ್ಮಿಕರಿಗೆ

18. **ಕೆಎಸ್‌ಆರ್‌ಟಿಸಿ ಬಸ್ ಪಾಸ್‌ನ ಸೌಲಭ್ಯ:** ರಾಜ್ಯದಾದ್ಯಂತ ವಿದ್ಯಾಭ್ಯಾಸದಲ್ಲಿ ತೊಡಗಿರುವ ನೋಂದಾಯಿತ ಕಾರ್ಮಿಕರ ಇಬ್ಬರು ಮಕ್ಕಳಿಗೆ (ಈ ಯೋಜನೆಯನ್ನು ಜಾರಿಗೊಳಿಸಲಾಗುತ್ತಿದೆ)

19. **ತಾಯಿ ಮಗು ಸಹಾಯ ಹಸ್ತ:** ಮಹಿಳಾ ಫಲಾನುಭವಿಯು ಮಗುವಿಗೆ ಜನ್ಮ ನೀಡಿದ ಸಂದರ್ಭದಲ್ಲಿ ಆಕೆಯ ಮಗುವಿನ ಶಾಲಾ ಪೂರ್ವ ಶಿಕ್ಷಣ ಮತ್ತು ಪೌಷ್ಠಿಕತೆಗಾಗಿ ಮಗುವಿಗೆ ಮೂರು ವರ್ಷಗಳು ತುಂಬುವವರೆಗೆ ವಾರ್ಷಿಕ ರೂ.6,000/- ಗಳ ಸಹಾಯಧನ.

# ಕರ್ನಾಟಕ ವಿಧಾನ ಸಭೆ

| | | |
|---|---|---|
| 1. | ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ | 2982 |
| 2. | ಮಾನ್ಯ ಸದಸ್ಯರ ಹೆಸರು | ಶ್ರೀ ಉಮಾನಾಥ್ ಎ. ಕೋಟ್ಯಾನ್ (ಮೂಡಬಿದ್ರೆ) |
| 3. | ಉತ್ತರಿಸಬೇಕಾದ ದಿನಾಂಕ | 18/03/2021 |
| 4. | ಉತ್ತರಿಸುವವರು | ಮಾನ್ಯ ಕಾರ್ಮಿಕ ಸಚಿವರು |

| ಕ್ರ ಸಂ. | ಪ್ರಶ್ನೆ | ಉತ್ತರ |
|---|---|---|
| ಅ) | ವಲಸೆ ಕಾರ್ಮಿಕರುಗಳು ಪ್ರಸ್ತುತ ಎದುರಿಸುತ್ತಿರುವ ಸೌಲಭ್ಯಗಳು ಪಡೆಯುವಲ್ಲಿನ ಅತಂತ್ರತೆಗೆ ಸರ್ಕಾರದ ಸುರಕ್ಷತೆ ಕ್ರಮಗಳು ಯಾವುವು; | ವಲಸೆ ಕಾರ್ಮಿಕರು ಸೌಲಭ್ಯಗಳನ್ನು ಪಡೆಯಲು ಎದುರಿಸುತ್ತಿದ್ದ ಸಮಸ್ಯೆಗಳನ್ನು ಪರಿಹರಿಸಲು ಕರ್ನಾಟಕ ಕಟ್ಟಡ ಮತ್ತು ಇತರೆ ನಿರ್ಮಾಣ ಕಾರ್ಮಿಕರ ಕಲ್ಯಾಣ ಮಂಡಳಿಯು ಈ ಕೆಳಕಂಡ ಸುರಕ್ಷತಾ ಕ್ರಮಗಳನ್ನು ಮತ್ತು ಸೌಲಭ್ಯಗಳನ್ನು ಕೈಗೊಂಡಿರುತ್ತದೆ.<br>➢ ಮಂಡಳಿಯಿಂದ ಒದಗಿಸಲಾಗುವ ಎಲ್ಲಾ ಸೌಲಭ್ಯಗಳನ್ನು ಕಡ್ಡಾಯವಾಗಿ ಆನ್‌ಲೈನ್ ಮೂಲಕ ಸಲ್ಲಿಸಲು ವ್ಯವಸ್ಥೆ ಕಲ್ಪಿಸಲಾಗಿರುತ್ತದೆ. ಇದರಿಂದಾಗಿ ವಲಸೆ ಕಾರ್ಮಿಕರು ಕಛೇರಿಗಳ ಬಳಿ ಹೋಗುವುದನ್ನು ತಪ್ಪಿಸಲಾಗಿರುತ್ತದೆ.<br>➢ ಮಂಡಳಿಯಿಂದ ವಿವಿಧ ಸೌಲಭ್ಯಗಳಡಿ ಮಂಜೂರಾಗುವ ಸೌಲಭ್ಯದ ಮೊತ್ತವನ್ನು ನೇರವಾಗಿ ಫಲಾನುಭವಿ/ ಅವಲಂಬಿತರ ಬ್ಯಾಂಕ್ ಖಾತೆಗೆ ಎನ್‌ಇಎಫ್‌ಟಿ/ ಆರ್‌ಟಿಜಿಎಸ್ ಮೂಲಕ ಜಮೆ ಮಾಡಲಾಗುವುದು.<br>➢ ವಲಸೆ ಕಾರ್ಮಿಕರು ಸೌಲಭ್ಯಗಳನ್ನು ಪಡೆಯಲು ನಿಯಮಗಳಲ್ಲಿದ್ದ ತೊಡಕುಗಳನ್ನು ನಿಯಮಾವಳಿಗಳಿಗೆ ತಿದ್ದುಪಡಿ ತರುವ ಮೂಲಕ ನಿವಾರಿಸಲಾಗಿರುತ್ತದೆ.<br>➢ ಮಂಡಳಿಯ ಸೌಲಭ್ಯಗಳ ಬಗ್ಗೆ ವಲಸೆ ಕಾರ್ಮಿಕರಿಗೂ ಅರಿವು ಮೂಡಿಸಲು ವಿವಿಧ ಭಾಷೆಯಲ್ಲಿ ಕರಪತ್ರಗಳನ್ನು ಮುದ್ರಿಸಿ ಜಾಗೃತಿ ಮೂಡಿಸಲಾಗುತ್ತಿದೆ.<br>ವಲಸೆ ಕಾರ್ಮಿಕರು ಮಂಡಳಿಯ ಸೌಲಭ್ಯದಿಂದ ವಂಚಿತರಾಗುವುದನ್ನು ತಪ್ಪಿಸಲು ಕಡ್ಡಾಯವಾಗಿ ನೋಂದಣಿ ಮಾಡಿಸಲು ಸಂಬಂಧಪಟ್ಟ ಸಂಸ್ಥೆಗಳಿಗೆ ಸೂಕ್ತ ನಿರ್ದೇಶನವನ್ನು ನೀಡಲಾಗುತ್ತಿರುತ್ತದೆ.<br>**ಕರ್ನಾಟಕ ಕಾರ್ಮಿಕ ಕಲ್ಯಾಣ ಮಂಡಳಿ:-**<br>ವಲಸೆ ಕಾರ್ಮಿಕರು ಕಾರ್ಮಿಕ ಕಲ್ಯಾಣ ಮಂಡಳಿಯ ವ್ಯಾಪ್ತಿಗೆ ಒಳಪಡುವುದಿಲ್ಲ. ಆದರೆ ಮಂಡಳಿಗೆ ವಂತಿಗೆ ಪಾವತಿ ಮಾಡುವ ವಿವಿಧ ಸಂಸ್ಥೆಗಳಲ್ಲಿ ಕೆಲಸ ನಿರ್ವಹಿಸುತ್ತಿರುವ ಕಾರ್ಮಿಕರಲ್ಲಿ ವಲಸೆ ಕಾರ್ಮಿಕರು ಸಹ ಸೇರಲು ಅವಕಾಶವಿರುತ್ತದೆ. ಈ ಕಾರ್ಮಿಕರಿಗೆ ಮಂಡಳಿಯಲ್ಲಿ ಜಾರಿಯಲ್ಲಿರುವ ವಿವಿಧ ಕಲ್ಯಾಣ ಯೋಜನೆಗಳ ಸೌಲಭ್ಯ ದೊರೆಯಲು ಅವರು ಕೆಲಸ ಮಾಡುವ ಸ್ಥಳದಲ್ಲಿ ಅರಿವು ಮೂಡಿಸುವುದು ಹಾಗೂ ಸರಳ ರೀತಿಯಲ್ಲಿ ಸೌಲಭ್ಯ ಪಡೆಯಲು ಎಲ್ಲಾ ವಿವರಗಳನ್ನು ಆನ್‌ಲೈನ್‌ನಲ್ಲಿ ಸಲ್ಲಿಸಲು ಅನುಕೂಲ ಮಾಡಿಕೊಡಲಾಗಿದೆ. |
| ಆ) | ಸಾಮಾಜಿಕ ಭದ್ರತೆ, ಕೌಟುಂಬಿಕ ಅವ್ಯವಸ್ಥೆ, ಆರ್ಥಿಕ ದುರ್ಗತಿ, ದೂರದ ನಗರಗಳಲ್ಲಿನ ದುಡಿಮೆಯ ಅನಿವಾರ್ಯತೆ ಮುಂತಾದ ಅತಂತ್ರ ಸ್ಥಿತಿಯಲ್ಲಿರುವ ಕಾರ್ಮಿಕರಿಗೆ ಸರ್ಕಾರದ ಯೋಜನೆ ಸೌಲಭ್ಯಗಳನ್ನು ಸರಳ ಮತ್ತು ಸುಲಭ ರಿತ್ಯಾ ಒದಗಿಸಿ ಕೊಡುವಲ್ಲಿನ ಸರ್ಕಾರದ ಕ್ರಮಗಳೇನು; | |

| ಇ) | ಕಾರ್ಮಿಕ, ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆಯು ಸೇರಿದಂತೆ ಕಾರ್ಮಿಕ ಸುರಕ್ಷತೆಗಾಗಿ ಇರುವ ಸುಮಾರು 11 ಇಲಾಖೆಗಳು ಜಂಟಿಯಾಗಿ ಕಾರ್ಮಿಕರ ಹಿತರಕ್ಷಣೆಗಾಗಿ ಕ್ರಿಯಾ ಯೋಜನೆಯನ್ನು ರೂಪಿಸಿ ಯೋಜನಾ ಸೌಲಭ್ಯಗಳನ್ನು ಸರಳವಾಗಿ ಪಡೆದುಕೊಳ್ಳುವ ರೀತಿಯಲ್ಲಿ ಕ್ರಮ ವಹಿಸಲು ಸರ್ಕಾರವು ಚಿಂತಿಸಿದೆಯೇ? | ಸರ್ಕಾರದ ವಿವಿಧ ಯೋಜನೆಗಳನ್ನು ಸರಳವಾಗಿ ಪಡೆದುಕೊಳ್ಳಲು ಸರ್ಕಾರ ಜಾರಿಗೊಳಿಸಿರುವ ಮಾಹಿತಿ ಕಣಜ ತಂತ್ರಾಂಶದಲ್ಲಿ ಎಲ್ಲಾ ವಿವರಗಳನ್ನು ಅಳವಡಿಸಲು ಕ್ರಮ ತೆಗೆದುಕೊಳ್ಳಲಾಗಿದೆ. |
|---|---|---|

**ಕಾಇ 117 ಎಲ್ಇಟಿ 2021**

(ಅರಬೈಲ್ ಶಿವರಾಂ ಹೆಬ್ಬಾರ್)
ಕಾರ್ಮಿಕ ಸಚಿವರು

## ಕರ್ನಾಟಕ ವಿಧಾನಸಭೆ

ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 3024
ಮಾನ್ಯ ಸದಸ್ಯರ ಹೆಸರು : ಶ್ರೀ ಖಾದರ್ ಯು.ಟಿ (ಮಂಗಳೂರು
ಉತ್ತರಿಸಬೇಕಾದ ದಿನಾಂಕ : 18-03-2021
ಉತ್ತರಿಸುವ ಸಚಿವರು : ಮಾನ್ಯ ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಹಾಗೂ ವೈದ್ಯಕೀಯ ಶಿಕ್ಷಣ ಸಚಿವರು

| ಕ್ರಮ ಸಂಖ್ಯೆ | ಪ್ರಶ್ನೆ | ಉತ್ತರ |
|---|---|---|
| ಅ) | ಆಯುಷ್ಮಾನ್ ಭಾರತ್-ಆರೋಗ್ಯ ಕರ್ನಾಟಕ ಯೋಜನೆಯ ತುರ್ತು ಚಿಕಿತ್ಸೆಯ ಸಂದರ್ಭದಲ್ಲಿ ಕೆಲವೊಂದು ಖಾಯಿಲೆಗಳಿಗೆ ಅವಕಾಶ ಇಲ್ಲದಿರುವುದರಿಂದ ರೋಗಿಗಳಿಗೆ ಸಮಸ್ಯೆಯಾಗಿದ್ದು, ಈ ಪಟ್ಟಿಯನ್ನು ಹೆಚ್ಚಿಸುವ ಉದ್ದೇಶ ಸರ್ಕಾರಕ್ಕೆ ಇದೆಯೇ; ಇದ್ದಲ್ಲಿ, ಯಾವಾಗ ಸೇರ್ಪಡೆ ಮಾಡಲಾಗುವುದು? (ವಿವರ ನೀಡುವುದು) | ಇದೆ.<br><br>ಈಗಾಗಲೇ ನಿಗದಿಪಡಿಸಿರುವ 169 ತುರ್ತು ಚಿಕಿತ್ಸಾ ವಿಧಾನಗಳೊಂದಿಗೆ 76 ಹೆಚ್ಚುವರಿ ಚಿಕಿತ್ಸಾ ವಿಧಾನಗಳನ್ನು ಸೇರ್ಪಡೆಗೊಳಿಸಲು (ಚಿಕಿತ್ಸಾ ವಿಧಾನಗಳ ಪಟ್ಟಿಯನ್ನು **ಅನುಬಂಧದಲ್ಲಿ** ಲಗತ್ತಿಸಿದೆ) ತಜ್ಞರ ಸಮಿತಿಯಿಂದ ವರದಿ ನೀಡಿದ್ದು, ಈ ಚಿಕಿತ್ಸಾ ವಿಧಾನಗಳನ್ನು ತುರ್ತು ಚಿಕಿತ್ಸಾ ವಿಧಾನಗಳ ಪಟ್ಟಿಗೆ ಸೇರಿಸುವ ಬಗ್ಗೆ ಪರಿಶೀಲನೆಯಲ್ಲಿರುತ್ತದೆ. |

ಆಕುಕ 59 ಎಸ್‌ಬಿವಿ 2021.

(ಡಾ॥ ಕೆ. ಸುಧಾಕರ್)
ಆರೋಗ್ಯ ಮತ್ತು ಕುಟುಂಬ ಕಲ್ಯಾಣ
ಹಾಗೂ ವೈದ್ಯಕೀಯ ಶಿಕ್ಷಣ ಸಚಿವರು

ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ: 3024 ಕ್ಕೆ ಅನುಬಂಧ

# BENEFIT PACKAGES OF AYUSHMAN BHARAT - AROGYA KARNATAKA PROPOSED TO BE BROUGHT UNDER EMERGENCY PACKAGE ANNEXURE - 4 OF THE GOVERNMENT ORDER

| Sl.no | Speciality code | Procedure code | Procedure name | Pre-op | Post-op | Speciality | Category |
|---|---|---|---|---|---|---|---|
| **Simple Secondary Care** | | | | | | | |
| 1 | S16 | 2A.S16.00001 | 2A.S16.00001 : Fixation of fracture of jaw with closed reduction (1 jaw) using wires - under LA | X Ray film with report | X Ray film with report | Dental And Oral And Maxiliofacial Surgery | 2A |
| 2 | S2 | 2A.S2.00071 | 2A.S2.00071 : Retro pharyngeal abscess – Drainage | CT/MRI, Clinical photograph | X-Ray | Ent | 2A |
| 3 | S1 | 2A.S1.00003 | 2A.S1.00003 : Appendicectomy | Clinical notes, USG report | OT note, scar photo, HPE Report | General Surgery | 2A |
| 4 | S1 | 2A.S1.00018 | 2A.S1.00018 : Colostomy | Biopsy of the primary + CT Scan with film | Clinical Photograph of operated site | General Surgery | 2A |
| 5 | S1 | 2A.S1.00023 | 2A.S1.00023 : Drainage of Ischio Rectal Abscess | clinical notes | OT notes | General Surgery | 2A |
| 6 | S1 | 2A.S1.00132 | 2A.S1.00132 : Splenectomy | CT/ MRI | Scar photo | General Surgery | 2A |
| 7 | S5 | 2A.S5.00003 | 2A.S5.00003 : Amputation - Below Elbow | X-ray, clinical photo of the part, HPE for tumours | Scar photo, X-Ray, HPE for tumours | Orthopaedics | 2A |
| 8 | S5 | 2A.S5.00004 | 2A.S5.00004 : Amputation - Above Elbow | X-ray | X-ray | Orthopaedics | 2A |
| 9 | S5 | 2A.S5.00008 | 2A.S5.00008 : Amputation – Below Knee | X-ray, clinical photo of the part, HPE for tumours | Scar photo, X-Ray, HPE for tumours | Orthopaedics | 2A |
| 10 | S5 | 2A.S5.00009 | 2A.S5.00009 : Amputation – Above Knee | X-ray | X-ray | Orthopaedics | 2A |
| **Complex secondary care** | | | | | | | |
| 11 | M2 | 2B.M2.00008C | 2B.M2.00008C : Poisonings with normal vital signs - ICU with ventilator | Clinical note with Lab reports | Treatment note | Neonatal And Paediatrics Surgeries | 2B |
| 12 | M2 | 2B.M2.00025C | 2B.M2.00025C : Diabetic ketoacidosis - ICU with ventilator | Clinical Notes with relevant investigations | Treatment Notes | Neonatal And Paediatrics Surgeries | 2B |
| 13 | M2 | 2B.M2.00043C | 2B.M2.00043C : Empyema - ICU with ventilator | Clinical note with Lab reports | Treatment note | Neonatal And Paediatrics Surgeries | 2B |
| 14 | M2 | 2B.M2.00050C | 2B.M2.00050C : Intracranial ring enhancing lesion with complication (neurocysticercosis, tuberculoma) -.ICU with ventilator | Clinical Notes with relevant investigations | Treatment Notes | Neonatal And Paediatrics Surgeries | 2B |
| 15 | M2 | 2B.M2.00076C | 2B.M2.00076C : Congestive cardiac failure - ICU with ventilator | Clinical Notes with relevant investigations | Treatment Notes | Neonatal And Paediatrics Surgeries | 2B |
| 16 | M1 | 2B.M1.00048F | 2B.M1.00048F : Acute gastroenteritis with severe dehydration - ICU with ventilator - Cross speciality | Clinical notes | Clinical notes | Neonatal And Paediatrics Surgeries | 2B |
| 17 | S5 | 2B.S5.00043 | 2B.S5.00043 : External fixation - Pelvis | X Ray film with report | X Ray film with report | Orthopaedics | 2B |
| 18 | S5 | 2B.S5.17023 | 2B.S5.17023 : Blunt injury abdomen | USG | USG | Orthopaedics | 2B |
| 19 | S1 | 2B.S1.00009A | 2B.S1.00009A : Bleeding Ulcer - Partial Gastrectomy - cross speciality | Endoscopy | Scar photo, HPR | Surgical Gastroenterology | 2B |
| 20 | S1 | 2B.S1.00026A | 2B.S1.00026A : Drainage of Subdiaphramatic Abscess - cross speciality | USG/Clinical Notes | Scar photo | Surgical Gastroenterology | 2B |
| 21 | S1 | 2B.S1.00065A | 2B.S1.00065A : Graham's Operation for duodenal perforation - cross speciality | X-ray abdomen/CT, USG | USG, Scar Photo | Surgical Gastroenterology | 2B |
| 22 | S1 | .S1.00090A | 2B.S1.00090A : Intestinal Perforation (Resection Anastomosis) - cross speciality | Erect abdomen X Ray/CT Abdomen | OT Notes, Scar photo | Surgical Gastroenterology | 2B |

| ಕ್ರ. ಸಂ | ಜಿಲ್ಲೆ/ತಾಲ್ಲೂಕು ಹೆಸರು | ಸರ್ಕಾರದ ಕಚೇರಿ/ಸಂಘ ಸಂಸ್ಥೆಯ ಹೆಸರು ಹಾಗೂ ವಿಳಾಸ | ಯೋಜನೆಯ ಹೆಸರು | ಅನುದಾನ ಬಿಡುಗಡೆ ಮಾಡಿದ ವಿವರ | | |
|---|---|---|---|---|---|---|
| | | | | ಮಂಜೂರಾದ ಅನುದಾನ | ಕಂತಿನ ಸಂಖ್ಯೆ | ಬಿಡುಗಡೆ ಮಾಡಿದ ಮೊತ್ತ |
| 9 | ಬೆಳಗಾವಿ | ಜಿಲ್ಲಾಧಿಕಾರಿಗಳು, ಬೆಳಗಾವಿ ಜಿಲ್ಲೆ, ಕಾರ್ಯದರ್ಶಿ, ನಾಟ್ಯ ಸರಸ್ವತಿ ಕಲಾ ಪೋಷಕ ಅಕಾಡೆಮಿ (ರಿ), 72 ಮಹಾವೀರ ಗಲ್ಲಿ, ಹಲಗಾ, ಬೆಳಗಾವಿ ತಾ॥ & ಜಿಲ್ಲೆ ಇವರಿಗೆ ಬೆಳಗಾವಿ ತಾ॥ ನ ಹಲಗಾ ಗ್ರಾಮದಲ್ಲಿ ಸಾಂಸ್ಕೃತಿಕ ಕಾರ್ಯಕ್ರಮ ನಡೆಸಲು | ಸಾಂಸ್ಕೃತಿಕ ಕಾರ್ಯಕ್ರಮ | 3.00 | 1 | 3.00 |
| 10 | ಅಥಣಿ | ಜಿಲ್ಲಾಧಿಕಾರಿಗಳು, ಬೆಳಗಾವಿ ಜಿಲ್ಲೆ, ಸದ್ಗುರು ರಾಮಲಿಂಗೇಶ್ವರ ಜ್ಞಾನ ವಿದ್ಯಾಸಂಸ್ಥೆ (ರಿ), ಕಕಮರಿ ಸಂಚಲಿತ ಶ್ರೀ ಸದ್ಗುರು, ಅಥಣಿ ತಾ॥, ಬೆಳಗಾವಿ ಜಿಲ್ಲೆ | ಶಾಲಾ ಕೊಠಡಿ ನಿರ್ಮಾಣ | 20.00 | 1 | 20.00 |
| 11 | ಅಥಣಿ | ಜಿಲ್ಲಾಧಿಕಾರಿಗಳು, ಬೆಳಗಾವಿ ಜಿಲ್ಲೆ, ಕಾರ್ಯದರ್ಶಿ, ಶ್ರೀ ಸದ್ಗುರು ಕಲ್ಮೇಶ್ವರ ಗುರುಕುಲ ಕನ್ನಡ ಮಾಧ್ಯಮ ಹಿರಿಯ ಪ್ರಾಥಮಿಕ ಶಾಲೆ, ಕಕಮರಿ, ಅಥಿಣಿ ತಾ॥, ಬೆಳಗಾವಿ ಜಿಲ್ಲೆ | ಶಾಲಾ ಕೊಠಡಿ | 50.00 | ಅಂತಿಮ ಕಂತು | 50.00 |
| 12 | ಬೆಳಗಾವಿ | ಜಿಲ್ಲಾಧಿಕಾರಿಗಳು, ಬೆಳಗಾವಿ ಜಿಲ್ಲೆ, ಬೆಳಗಾವಿ ಸಾಹಿತ್ಯ ಭವನ ಕಟ್ಟಡದ ನಿರ್ಮಾಣ ಉಳಿದ ಕಾಮಗಾರಿಗೆ | ಸಾಹಿತ್ಯ ಭವನ | 327.00 | ಅಂತಿಮ ಕಂತು | 327.00 |
| | | **ಒಟ್ಟು** | | **486.50** | | **448.55** |

ಕಾರ್ಯದರ್ಶಿ,
ಕರ್ನಾಟಕ ಗಡಿ ಪ್ರದೇಶ ಅಭಿವೃದ್ಧಿ ಪ್ರಾಧಿಕಾರ

## ಕರ್ನಾಟಕ ವಿಧಾನ ಸಭೆ

1. ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 2595
2. ಮಾನ್ಯ ಸದಸ್ಯರ ಹೆಸರು : ಶ್ರೀ ಅಪ್ಪಚ್ಚು (ರಂಜನ್) ಎಂ.ಪಿ. (ಮಡಿಕೇರಿ)
3. ಉತ್ತರಿಸಬೇಕಾದ ದಿನಾಂಕ : 18/3/2021
4. ಉತ್ತರಿಸುವವರು : ಮಾನ್ಯ ಕಾರ್ಮಿಕ ಸಚಿವರು

| ಕ್ರಮ ಸಂಖ್ಯೆ | ಪ್ರಶ್ನೆ | ಉತ್ತರ |
| --- | --- | --- |
| ಅ) | ರಾಜ್ಯದಲ್ಲಿ ಸಂಘಟಿತ ಹಾಗೂ ಅಸಂಘಟಿತ ಕಾರ್ಮಿಕರುಗಳಿಗಾಗಿ ಅನುಷ್ಠಾನಗೊಂಡಿರುವ ಯೋಜನೆ ಯಾವುವು; | ಕಾರ್ಮಿಕ ಇಲಾಖೆಯ ಅಧೀನದಲ್ಲಿ ಕಾರ್ಯ ನಿರ್ವಹಿಸುತ್ತಿರುವ ಕರ್ನಾಟಕ ಕಾರ್ಮಿಕ ಕಲ್ಯಾಣ ಮಂಡಳಿಯು ಸಂಘಟಿತ ಕಾರ್ಮಿಕರಿಗೆ ಹಾಗೂ ಕರ್ನಾಟಕ ರಾಜ್ಯ ಕಟ್ಟಡ ಮತ್ತು ಇತರೆ ನಿರ್ಮಾಣ ಕಾರ್ಮಿಕರ ಕಲ್ಯಾಣ ಮಂಡಳಿ ಹಾಗೂ ಕರ್ನಾಟಕ ರಾಜ್ಯ ಅಸಂಘಟಿತ ಕಾರ್ಮಿಕರ ಸಾಮಾಜಿಕ ಭದ್ರತಾ ಮಂಡಳಿಯು ಅಸಂಘಟಿತ ಕಾರ್ಮಿಕರಿಗೆ ಈ ಕೆಳಕಂಡ ಯೋಜನೆಗಳನ್ನು ಅನುಷ್ಠಾನಗೊಳಿಸುತ್ತಿದೆ.<br><br>**ಕರ್ನಾಟಕ ಕಾರ್ಮಿಕ ಕಲ್ಯಾಣ ಮಂಡಳಿ: (ಸಂಘಟಿತ ವಲಯ)**<br>**ಯೋಜನೆಗಳು;**<br>1. ಕಾರ್ಮಿಕರ ಮಕ್ಕಳಿಗೆ ಶೈಕ್ಷಣಿಕ ಪ್ರೋತ್ಸಾಹ ಧನ ಸಹಾಯ ಯೋಜನೆ.<br>2. ಕಾರ್ಮಿಕರಿಗೆ ವೈದ್ಯಕೀಯ ನೆರವು ಯೋಜನೆ.<br>3. ಕಾರ್ಮಿಕರಿಗೆ ಅಪಘಾತ ಧನ ಸಹಾಯ ಯೋಜನೆ.<br>4. ಮೃತ ಕಾರ್ಮಿಕರ ಅಂತ್ಯ ಸಂಸ್ಕಾರಕ್ಕೆ ಧನ ಸಹಾಯ ಯೋಜನೆ.<br>5. ಕಾರ್ಮಿಕರಿಗೆ ವಾರ್ಷಿಕ ವೈದ್ಯಕೀಯ ತಪಾಸಣೆ ಶಿಬಿರಕ್ಕೆ ಧನ ಸಹಾಯ ಯೋಜನೆ.<br>6. ಕಾರ್ಮಿಕರಿಗೆ ವಾರ್ಷಿಕ ಕ್ರೀಡಾಕೂಟ ಹಮ್ಮಿಕೊಳ್ಳುವ ಕಾರ್ಮಿಕಸಂಘಟನೆಗೆ ಧನ ಸಹಾಯ ಯೋಜನೆ.<br><br>**ಕರ್ನಾಟಕ ರಾಜ್ಯ ಕಟ್ಟಡ ಮತ್ತು ಇತರೆ ನಿರ್ಮಾಣ ಕಾರ್ಮಿಕರ ಕಲ್ಯಾಣ ಮಂಡಳಿ : (ಅಸಂಘಟಿತ ವಲಯ):**<br><br>ಯೋಜನೆಯ ವಿವರಗಳನ್ನು <u>ಅನುಬಂಧ-01</u> ರಲ್ಲಿ ಒದಗಿಸಿದೆ.<br><br><u>**ಕರ್ನಾಟಕ ರಾಜ್ಯ ಅಸಂಘಟಿತ ಕಾರ್ಮಿಕರ ಸಾಮಾಜಿಕ ಭದ್ರತಾ ಮಂಡಳಿ( ಅಸಂಘಟಿತ ವಲಯ):-**</u><br>(1) **ಕರ್ನಾಟಕ ರಾಜ್ಯ ಖಾಸಗಿ ವಾಣಿಜ್ಯ ಸಾರಿಗೆ ಕಾರ್ಮಿಕರ ಅಪಘಾತ ಪರಿಹಾರ ಯೋಜನೆ:-**<br>(ಅ) ಅಪಘಾತ ಪರಿಹಾರ ಸೌಲಭ್ಯ : |

| | | |
|---|---|---|
| | | (ಆ) ಶೈಕ್ಷಣಿಕ ಧನ ಸಹಾಯ :<br>(ಇ) ಸ್ಮಾರ್ಟ್ ಕಾರ್ಡ್ ಸೌಲಭ್ಯ :<br>**(2) ಅಂಬೇಡ್ಕರ್ ಕಾರ್ಮಿಕ ಸಹಾಯ ಹಸ್ತ ಯೋಜನೆ:-**<br>(ಅ) ಸ್ಮಾರ್ಟ್ ಕಾರ್ಡ್<br>(ಆ) ಕಾರ್ಮಿಕ ಸನ್ಮಾನ್ ಯೋಜನೆ.<br><br>**(3) ಅಗಸ ಮತ್ತು ಕ್ಷೌರಿಕರಿಗೆ ಕೋವಿಡ್-19ರ ವಿಶೇಷ ಪ್ಯಾಕೇಜ್.**<br><br>**ಕರ್ನಾಟಕ ರಾಜ್ಯ ಅಸಂಘಟಿತ ಕಾರ್ಮಿಕರ ಸಾಮಾಜಿಕ ಭದ್ರತಾ ಮಂಡಳಿ: ( ಸಂಘಟಿತ ವಲಯ)**<br>(ಅ) ಆಶಾದೀಪ ಯೋಜನೆ. |
| ಆ) | ಸಂಘಟಿತ ಹಾಗೂ ಅಸಂಘಟಿತ ಕಾರ್ಮಿಕರೆಂದು ಯಾವ ಮಾನದಂಡದ ಆಧಾರದಲ್ಲಿ ಗುರುತಿಸಲಾಗಿರುತ್ತದೆ; ಅವರುಗಳ ಸಂಖ್ಯೆ ಎಷ್ಟು? (ಪೂರ್ಣ ವಿವರ ನೀಡುವುದು) | 1. <u>ಕರ್ನಾಟಕ ಕಾರ್ಮಿಕ ಕಲ್ಯಾಣ ಮಂಡಳಿಯಲ್ಲಿ</u><br>**ಈ ಕೆಳಕಂಡ ಕಾರ್ಮಿಕರನ್ನು <u>ಸಂಘಟಿತ ಕಾರ್ಮಿಕರೆಂದು</u> ಗುರುತಿಸಲಾಗಿದೆ..**<br>1) ಕರ್ನಾಟಕ ಸೊಸೈಟಿ ನೊಂದಣಿ ಅಧಿನಿಯಮ 1960ರ ಮೇರೆಗೆ ನೊಂದಾಯಿತ ಸಂಘಗಳಲ್ಲಿ ಕೆಲಸ ನಿರ್ವಹಿಸುವ ಕಾರ್ಮಿಕರು.<br>2) 1948ರ ಕಾರ್ಖಾನೆ ಅಧಿನಿಯಮದಡಿಯಲ್ಲಿ ನೊಂದಾಯಿತ ಕಾರ್ಖಾನೆಗಳಲ್ಲಿ ಕೆಲಸ ನಿರ್ವಹಿಸುವ ಕಾರ್ಮಿಕರು.<br>3) ಕರ್ನಾಟಕ ಅಂಗಡಿ ಮತ್ತು ವಾಣಿಜ್ಯ ಸಂಸ್ಥೆ ಕಾಯ್ದೆ 1961 ರಡಿಯಲ್ಲಿ ನೊಂದಾಯಿತ ಸಂಸ್ಥೆಗಳಲ್ಲಿ 50 ಕ್ಕಿಂತ ಹೆಚ್ಚು ನೌಕರರು ಇರುವಂತಹ ಸಂಸ್ಥೆಗಳಲ್ಲಿ ಕೆಲಸ ನಿರ್ವಹಿಸುವ ಕಾರ್ಮಿಕರು.<br>4) ಮೋಟಾರು ಸಾರಿಗೆ ಸಂಸ್ಥೆಗಳಲ್ಲಿ ಕಾರ್ಯನಿರ್ವಹಿಸುವ ಕಾರ್ಮಿಕರು,<br>5) ಪ್ಲಾಂಟೇಶನ್ ಗಳಲ್ಲಿ ಕೆಲಸ ನಿರ್ವಹಿಸುವ ಕಾರ್ಮಿಕರು,<br>6) ವರ್ಕಶಾಪ್ ಗಳಲ್ಲಿ ಕೆಲಸ ನಿರ್ವಹಿಸುವ ಕಾರ್ಮಿಕರು..<br>7) ಇ.ಎಸ್.ಐ ಹಾಗು ಕಾರ್ಮಿಕರ ಭವಿಷ್ಯ ನಿಧಿ ವ್ಯಾಪ್ತಿಗೆ ಒಳಪಟ್ಟ ಕಾರ್ಮಿಕರು.<br>ಮೇಲೆ ತಿಳಿಸಿದ ವರ್ಗಗಳಲ್ಲಿ ಒಟ್ಟು 41,31,603 ಸಂಘಟಿತ ಕಾರ್ಮಿಕರು ಕಾರ್ಯ ನಿರ್ವಹಿಸುತ್ತಿರುತ್ತಾರೆ. (ವಿವರ **<u>ಅನುಬಂಧ-02)</u>**<br><br>**ಈ ಕೆಳಕಂಡ ಕಾರ್ಮಿಕರನ್ನು ಅಸಂಘಟಿತ ಕಾರ್ಮಿಕರೆಂದು ಗುರುತಿಸಲಾಗಿದೆ:**<br>ಕೇಂದ್ರ ಸರ್ಕಾರವು 2008 ರಲ್ಲಿ ಜಾರಿಗೆ ತಂದಿರುವ ಅಸಂಘಟಿತ ಕಾರ್ಮಿಕರ ಸಾಮಾಜಿಕ ಭದ್ರತಾ ಕಾಯ್ದೆಯ |

ಕಲಂ 2(ಎಮ್) ಅಡಿಯಲ್ಲಿ ತಿಳಿಸಿದಂತೆ ಮನೆಗೆಲಸದ ಕಾರ್ಮಿಕರು ಸ್ವ-ಉದ್ಯೋಗ ನಿರ್ವಹಿಸುವ ಕಾರ್ಮಿಕರು ಅಸಂಘಟಿತ ವಲಯದಲ್ಲಿ ಕೆಲಸ ನಿರ್ವಹಿಸುವ ದಿನಗೂಲಿ, ವಲಸೆ, ತಾತ್ಕಾಲಿಕ ಕಾರ್ಮಿಕರು ಹಾಗೂ ಇಎಸ್‌ಐ ಮತ್ತು ಕಾರ್ಮಿಕರ ಭವಿಷ್ಯ ನಿಧಿ ವ್ಯಾಪ್ತಿಗೆ ಒಳಪಡದ ಎಲ್ಲಾ ಕಾರ್ಮಿಕರ, ಅಧಿನಿಯಮದ ಅನುಸೂಚಿ-IIರಲ್ಲಿ ನಮೂದಿಸಿರುವ ಕಾರ್ಮಿಕ ನಷ್ಟ ಪರಿಹಾರ ಅಧಿನಿಯಮ, 1923 (1923ರ 8), ಕೈಗಾರಿಕಾ ವಿವಾದಗಳ ಅಧಿನಿಯಮ, 1947 (1947ರ 14), ನಿಯೋಜಿತರ ರಾಜ್ಯ ವಿಮಾ ಅಧಿನಿಯಮ, 1948 (1948ರ 34), ನೌಕರರ ಭವಿಷ್ಯ ನಿಧಿಗಳ ಮತ್ತು ಸಂಕೀರ್ಣ ಉಪಬಂಧಗಳ ಅಧಿನಿಯಮ, 1952 (1952ರ 19), ಪ್ರಸೂತಿ ಸೌಕರ್ಯ ಅಧಿನಿಯಮ, 1961 (1961ರ 53), ಉಪದಾನ ಸಂದಾಯ ಅಧಿನಿಯಮ, 1972 (1972ರ 39) ಈ ಪ್ರಾವಧಾನಗಳ ವ್ಯಾಪ್ತಿಗೆ ಒಳಪಡದ ಕಾರ್ಮಿರನ್ನು ಅಸಂಘಟಿತ ಕಾರ್ಮಿಕರೆಂದು ಪರಿಗಣಿಸಲ್ಪಡುತ್ತದೆ.

ಕರ್ನಾಟಕ ರಾಜ್ಯ ಅಸಂಘಟಿತ ಕಾರ್ಮಿಕರ ಸಾಮಾಜಿಕ ಭದ್ರತಾ ಮಂಡಳಿಯು ಜಾರಿಗೊಳಿಸುತ್ತಿರುವ

1) ಕರ್ನಾಟಕ ರಾಜ್ಯ ಖಾಸಗಿ ವಾಣಿಜ್ಯ ಸಾರಿಗೆ ಕಾರ್ಮಿಕರ ಅಪಘಾತ ಪರಿಹಾರ ಯೋಜನೆ:- ಅಡಿಯಲ್ಲಿ ಸಾರಿಗೆ ಇಲಾಖೆ ಒದಗಿಸಿರುವ ಮಹಿತಿ ಅನ್ವಯ ಒಟ್ಟು 8,40,561 ಖಾಸಗಿ ವಾಣಿಜ್ಯ ವಾಹನ ಚಾಲಕರು ಇರುತ್ತಾರೆ.
   **(ವಿವರ ಅನುಬಂಧ-03)**
2) ಅಂಬೇಡ್ಕರ್ ಸಹಾಯ ಹಸ್ತ ಯೋಜನೆ ಅಡಿಯಲ್ಲಿ 11 ವರ್ಗಗಳಾದ ಹಮಾಲರು, ಗೃಹಕಾರ್ಮಿಕರು, ಚಿಂದಿ ಆಯುವವರು, ಟೈಲರ್‌ಗಳು, ಮೆಕ್ಯಾನಿಕ್ಸ್, ಅಗಸರು, ಅಕ್ಕಸಾಲಿಗರು, ಕಮ್ಮಾರರು, ಕುಂಬಾರರು, ಕ್ಷೌರಿಕರು ಹಾಗೂ ಭಟ್ಟಿ ಕಾರ್ಮಿಕ ವೃತ್ತಿಯ ರಲ್ಲಿ ಇಂದಿನವರೆಗೆ 1,63,519 ಅಸಂಘಟಿತ ಕಾರ್ಮಿಕರನ್ನು ನೊಂದಾಯಿಸಲಾಗಿದೆ. **(ಅನುಬಂಧ-04)**

ಉಳಿದಂತೆ, ಅಸಂಘಟಿತ ಕಾರ್ಮಿಕರ ಸಂಖ್ಯೆಯನ್ನು ಗುರುತಿಸುವ ಬಗ್ಗೆ ಯಾವುದೇ ಸಮೀಕ್ಷೆಯನ್ನು ನಡೆಸಿರುವುದಿಲ್ಲ.

**ಕಟ್ಟಡ ಮತ್ತು ಇತರೆ ನಿರ್ಮಾಣ ಕಾರ್ಮಿಕರ ಕಲ್ಯಾಣ ಮಂಡಳಿ:- ( ಅಸಂಘಟಿತ ಕಾರ್ಮಿಕ ವಲಯ)**

ಮಂಡಳಿಯ ಫಲಾನುಭವಿಗಳಾಗಿ ನೊಂದಣಿಯಾಗಲು

| | | |
|---|---|---|
| | | ಅನುಸರಿಸಬೇಕಾದ ಮಾನದಂಡಗಳು ಈ ಕೆಳಕಂಡಂತಿದೆ.<br>ಕಟ್ಟಡ ಮತ್ತು ಇತರೆ ನಿರ್ಮಾಣ ಕೆಲಸಗಳಿಗೆ ಸಂಬಂಧಿಸಿದ ಈ ಕೆಳಗಿನ ಯಾವುದಾದರೂ ಕೆಲಸ ನಿರ್ವಹಿಸುತ್ತಿರಬೇಕು<br>1.ನಿರ್ಮಾಣ 2. ಮಾರ್ಪಾಡು 3. ರಿಪೇರಿ 4. ನಿರ್ವಹಣೆ ಅಥವಾ ಕಟ್ಟಡ ಕೆಡವುವಿಕೆಗೆ ಸಂಬಂಧಿಸಿದ ಕಾಮಗಾರಿ 5.ಕಟ್ಟಡಗಳು 6. ಬೀದಿಗಳು 7. ರಸ್ತೆಗಳು 8. ರೈಲ್ವೆಗಳು 9. ಟ್ರಾಮ್‌ವೇಗಳು 10. ಏರ್‌ಫೀಲ್ಡ್ಸ್ 11. ನೀರಾವರಿ ಚರಂಡಿ 12. ಏರಿ/ಕಟ್ಟೆಕಟ್ಟುವುದು ಮತ್ತು ನೌಕಾ ಕಾಮಗಾರಿಗಳು 13. ಪ್ರವಾಹ ನಿಯಂತ್ರಣ ಕಾಮಗಾರಿಗಳು (ಮಳೆ ನೀರು, ಚರಂಡಿ ಕಾಮಗಾರಿಗಳು ಸೇರಿ) 14. ವಿದ್ಯುತ್ ಉತ್ಪಾದನೆ 15. ಪ್ರಸರಣ ಮತ್ತು ವಿತರಣೆ 16. ಜಲ ಕಾಮಗಾರಿಗಳು (ನೀರು ವಿತರಣಾ ನಾಲೆಗಳು ಸೇರಿ) 17. ತೈಲ ಮತ್ತು ಅನಿಲ ಸ್ಥಾವರಗಳು 18. ವಿದ್ಯುತ್ ಮಾರ್ಗಗಳು 19. ವೈರ್‌ಲೆಸ್ 20.ರೇಡಿಯೋ21. ದೂರದರ್ಶನ 22. ದೂರವಾಣಿ 23. ದೂರಸಂಪರ್ಕ ಮತ್ತು ಸಮುದ್ರ ಸಂವಹನಗಳಿಗೆ ಸಂಬಂಧಿಸಿದ ನಿರ್ಮಾಣ/ನವೀಕರಣ ಮತ್ತು ದುರಸ್ತಿ 24. ಅಣೆಕಟ್ಟುಗಳು 25. ನಾಲೆಗಳು 26. ಜಲಾಶಯಗಳು 27.ಜಲ ಮೂಲಗಳು 28. ಸುರಂಗಗಳು 29. ಸೇತುವೆಗಳು 30. ವಯಾಡಕ್ಟ್ಸ್ 31. ಆಕ್ವೆಡಕ್ಟ್ಸ್ 32. ಕೊಳವೆ ಮಾರ್ಗಗಳ ನಿರ್ಮಾಣ 33. ಸ್ಥಾವರಗಳು 34. ಕೂಲಿಂಗ್ ಟವರ್‌ಗಳು ಮತ್ತು ಪ್ರಸರಣ ಸ್ಥಾವರಗಳು ಹೆಚ್ಚುವರಿ ನಿರ್ಮಾಣ ಕೆಲಸಗಳು 35.ಕಲ್ಲು ಗಣಿಗಾರಿಕೆ ಕಾಯ್ದೆ 1952ರ ವ್ಯಾಪ್ತಿಗೆ ಒಳಪಡದ ರಸ್ತೆ ಮತ್ತು ಕಟ್ಟಡ ನಿರ್ಮಾಣದ ಕಲ್ಲು ಕೆಲಸ 36. ನಿರ್ಮಾಣದಲ್ಲಿ ಚಪ್ಪಡಿ/ಟೈಲ್ಸ್‌ಗಳನ್ನು ಅಳವಡಿಸುವುದು 37. ಯುಜಿಡಿ ನಿರ್ಮಾಣ ಸ್ಥೈರಿದಂತೆ ಒಳಚರಂಡಿ ಮತ್ತು ಪ್ಲಂಬಿಂಗ್ ಕೆಲಸ 38. ವೈರಿಂಗ್, ವಿತರಣೆ ಪ್ಯಾನಲ್ ಫಿಕ್ಸಿಂಗ್ ಇತ್ಯಾದಿಗಳನ್ನು ಒಳಗೊಂಡ ವಿದ್ಯುತ್ ಕೆಲಸ 39. ಕೂಲಿಂಗ್ ಮತ್ತು ಹೀಟಿಂಗ್ ಸಿಸ್ಟಂಗಳ ಸ್ಥಾಪನೆ ಮತ್ತು ಅಳವಡಿಕೆ 40. ಲಿಫ್ಟ್, ಎಕ್ಸಲೇಟರ್ ಇತ್ಯಾದಿಗಳ ಸ್ಥಾಪನೆ 41. ಸೆಕ್ಯೂರಿಟಿ ಗೇಟಗಳ ಸ್ಥಾಪನೆ 42. ಕಬ್ಬಿಣ/ಲೋಹದ ಗ್ರಿಲ್‌ಗಳು, ಕಿಟಕಿ, ಬಾಗಿಲುಗಳ ಸ್ಥಾಪನೆ 43. ನೀರಿನ ಕೊಯ್ಲು ರಚನೆಗಳ ನಿರ್ಮಾಣ 44. ಫ್ಲೋರಿಂಗ್, ಫಾಲ್ಸ್‌ಸೀಲಿಂಗ್, ವಾಲ್ ಪ್ಯಾನಲಿಂಗ್ ಮುಂತಾದವುಗಳನ್ನು ಒಳಗೊಂಡ ಒಳಾಂಗಣ ವಿನ್ಯಾಸ 45. ಕಟ್ಟಡ ನಿರ್ಮಾಣ ಸಂದರ್ಭದಲ್ಲಿ ಅಳವಡಿಸುವ ಗ್ಲಾಸ್ ಪ್ಯಾನಲ್‌ಗಳು, ಎಸಿಪಿ ಶೀಟ್‌ಗಳು, ಸ್ಪೈಡರ್ ಗ್ಲೇಜಿಂಗ್‌ಗಳು 46.ಪ್ರೀ–ಫ್ಯಾಬ್ರಿಕೇಟೆಡ್ ಕಾಂಕ್ರೀಟ್ ಮಾಡ್ಯೂಲ್ಸ್, ಕಾಂಕ್ರೀಟ್ ಬ್ರಿಕ್ಸ್, ಬ್ಲಾಕ್ಸ್, ಹಾಲೋಬ್ಲಾಕ್ಸ್, ಟೈಲ್ಸ್ ಮುಂತಾದವುಗಳ ಅಳವಡಿಕೆ 47.ಸಿಗ್ನೇಜ್, ರಸ್ತೆ ಪೀಠೋಪಕರಣಗಳು, ಬಸ್ |

| | | |
|---|---|---|
| | | ಆಶ್ರಯಗಳು/ ಸ್ಯಾಂಡ್, ಸಿಗ್ನಲಿಂಗ್ ಸಿಸ್ಟಮ್ಸ್ ಮುಂತಾದವುಗಳ ನಿರ್ಮಾಣ **48.**ರೋಟರಿಗಳ ನಿರ್ಮಾಣ ಮತ್ತು ಸ್ಥಾಪನೆ, ಕಾರಂಜಿಗಳು, ಸಾರ್ವಜನಿಕ ಉದ್ಯಾನವನ ಮತ್ತು ತೋಟಗಳಲ್ಲಿ ಈಜುಕೊಳಗಳು ಇತ್ಯಾದಿಗಳ ಅಳವಡಿಕೆ **49.** ನಿರ್ಮಾಣ ಉದ್ದೇಶಗಳಿಗಾಗಿ ಭೂಮಿಯ ಕೆಲಸ, ಭೂಮಿಯ ಹರಡುವಿಕೆ, ನೆಲಸಮಗೊಳಿಸುವಿಕೆ ಮತ್ತು ಭೂಮಿಯ ಕತ್ತರಿಸುವಿಕೆ ಇತ್ಯಾದಿ ಕೆಲಸಗಳು **50.** ತಾತ್ಕಾಲಿಕ ಆಶ್ರಯ ತಾಣಗಳ ನಿರ್ಮಾಣ ಮತ್ತು ಅಳವಡಿಕೆ **51.** ಫಿಲಂಸೆಟ್ ಗಳ ನಿರ್ಮಾಣ ಮತ್ತು ಅಳವಡಿಕೆ. **52.** ಸರ್ಕಾರದ ಅಧಿಸೂಚನೆ ಸಂಖ್ಯೆ ಕಾಇ 220 ಎಲ್ಇಟಿ 2013 ದಿನಾಂಕ 30-11-2013 ರಲ್ಲಿ Cutting Breaking and Crushing of Stone ಕೆಲಸಗಳನ್ನು ಸಹ ಕಟ್ಟಡ ಮತ್ತು ಇತರೆ ನಿರ್ಮಾಣ ಕೆಲಸಗಳೆಂದು ಪರಿಗಣಿಸಿದೆ.<br>ವಯೋಮಿತಿ: 18 ರಿಂದ 60 ವರ್ಷದೊಳಗಿರಬೇಕು<br>ಮಂಡಳಿಯಲ್ಲಿ 2007 ರಿಂದ ಫೆಬ್ರವರಿ, 2021 ರವರೆಗೆ 29,59,851 ಕಟ್ಟಡ ಮತ್ತು ಇತರೆ ನಿರ್ಮಾಣ ಕಾರ್ಮಿಕರನ್ನು ಗುರುತಿಸಿ ನೋಂದಣಿ ಮಾಡಲಾಗಿರುತ್ತದೆ (ಅನುಬಂಧ-05).<br><br>**ಕರ್ನಾಟಕ ರಾಜ್ಯ ಅಸಂಘಟಿತ ಕಾರ್ಮಿಕರ ಸಾಮಾಜಿಕ ಭದ್ರ ಮಂಡಳಿ ವತಿಯಿಂದ ಕೋವಿಡ್-19ರ ವಿಶೇಷ ಪ್ಯಾಕೇಜ್: ( ಅಸಂಘಟಿತ ವಲಯ)**<br>ಕೋವಿಡ್-19ರ ಲಾಕ್‌ಡೌನ್ ಕಾರಣ ಸಂಕಷ್ಟಕ್ಕೊಳಗಾದ ಕಾರ್ಮಿಕರಿಗೆ ಸನ್ಮಾನ್ಯ ಮುಖ್ಯಮಂತ್ರಿಯವರು ಘೋಷಿಸಿದ ಒಂದು ಬಾರಿಯ ರೂ.5000 ಗಳ ವಿಶೇಷ ಪ್ಯಾಕೇಜ್ ಅಡಿ 74,782 ಅಗಸರು ಹಾಗೂ 66,820 ಕ್ಷೌರಿಕರು ಒಟ್ಟು 1,41,602 ಅರ್ಜಿಗಳು ಸ್ವೀಕೃತವಾಗಿ ಗುರುತಿಸಲಾಗಿದೆ.<br>(ಅನುಬಂಧ-6) |

ಕಾಇ 121 ಎಲ್ಇಟಿ 2021

(ಅರಬೈಲ್ ಶಿವರಾಂ ಹೆಬ್ಬಾರ್)
ಕಾರ್ಮಿಕ ಸಚಿವರು

# ಅನುಬಂಧ-1

**(ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ: 2595)**

**ಕರ್ನಾಟಕ ಕಟ್ಟಡ ಮತ್ತು ಇತರೆ ನಿರ್ಮಾಣ ಕಾರ್ಮಿಕರ ಕಲ್ಯಾಣ ಮಂಡಳಿವತಿಯಿಂದ ಫಲಾನುಭವಿಗಳಿಗೆ ಸಿಗುವ ಸೌಲಭ್ಯಗಳು**

1. **ಪಿಂಚಣಿ ಸೌಲಭ್ಯ:** ಮೂರು ವರ್ಷ ಸದಸ್ಯತ್ವದೊಂದಿಗೆ 60 ವರ್ಷ ಪೂರೈಸಿದ ಫಲಾನುಭವಿಗೆ ಮಾಸಿಕ ರೂ.2,000/-
2. **ಕುಟುಂಬ ಪಿಂಚಣಿ ಸೌಲಭ್ಯ:** ಮೃತ ಪಿಂಚಣಿದಾರರ ಪತಿ / ಪತ್ನಿ ಮಾಸಿಕ ರೂ.1000/-
3. **ದುರ್ಬಲತೆ ಪಿಂಚಣಿ:** ನೋಂದಾಯಿತ ಫಲಾನುಭವಿಯು ಖಾಯಿಲೆಗಳಿಂದ ಅಥವಾ ಕಟ್ಟಡ ಕಾಮಗಾರಿಗಳ ಅಪಘಾತದಿಂದ ಶಾಶ್ವತ/ಭಾಗಶಃ ಅಂಗವಿಕಲತೆ ಹೊಂದಿದ್ದರೆ ಮಾಸಿಕ ರೂ.2,000/- ಪಿಂಚಣಿ ಹಾಗೂ ಶೇಕಡವಾರು ದುರ್ಬಲತೆಯನ್ನಾಧರಿಸಿ ರೂ.2,00,000/- ದವರೆಗೆ ಅನುಗ್ರಹ ರಾಶಿ ಸಹಾಯಧನ.
4. ಕನ್ನಡಕ, ಶ್ರವಣಯಂತ್ರ, ಕೃತಕ ಕೈಕಾಲು ಮತ್ತು ಗಾಲಿ ಕುರ್ಚಿಮರುಪಾವತಿ ಸೌಲಭ್ಯ.
5. ಟ್ರೈನಿಂಗ್-ಕಮ್-ಟೂಲ್‌ಕಿಟ್‌ಸೌಲಭ್ಯ (ಶ್ರಮ ಸಾಮರ್ಥ್ಯ) : ರೂ.30,000/- ವರೆಗೆ
6. ಶ್ರಮ ಸಂಸಾರ ಸಾಮರ್ಥ್ಯ ತರಬೇತಿ ಸೌಲಭ್ಯ: ನೋಂದಾಯಿತ ಫಲಾನುಭವಿಯ ಅವಲಂಭಿತರಿಗೆ
7. ವಸತಿ ಸೌಲಭ್ಯ (ಕಾರ್ಮಿಕ ಗೃಹ ಭಾಗ್ಯ): ರೂ.2,00,000/- ದವರೆಗೆ ಮುಂಗಡ ಸೌಲಭ್ಯ
8. ಹೆರಿಗೆ ಸೌಲಭ್ಯ (ತಾಯಿ ಲಕ್ಷ್ಮೀ ಬಾಂಡ್): ಮಹಿಳಾ ಫಲಾನುಭವಿಯ ಮೊದಲ ಎರಡು ಮಕ್ಕಳಿಗೆ ಹೆಣ್ಣು ಮಗುವಿನ ಜನನಕ್ಕೆ ರೂ. 30,000/- ಮತ್ತು ಗಂಡು ಮಗುವಿನ ಜನನಕ್ಕೆ ರೂ.20,000/-
9. ಶಿಶು ಪಾಲನಾ ಸೌಲಭ್ಯ:
10. ಅಂತ್ಯಕ್ರಿಯೆ ವೆಚ್ಚ : ರೂ.4,000/- ಹಾಗೂ ಅನುಗ್ರಹ ರಾಶಿ ರೂ.50,000/-ಸಹಾಯಧನ
11. ಶೈಕ್ಷಣಿಕ ಸಹಾಯಧನ (ಕಲಿಕೆ ಭಾಗ್ಯ): ಫಲಾನುಭವಿಯ ಇಬ್ಬರು ಮಕ್ಕಳ ವಿದ್ಯಾಭ್ಯಾಸಕ್ಕಾಗಿ:

| ಕ್ರ.ಸಂ | ತರಗತಿ (ಉತ್ತೀರ್ಣಕ್ಕೆ) | ವಾರ್ಷಿಕ ಸಹಾಯ ಧನ | |
|---|---|---|---|
| | | ಗಂಡು | ಹೆಣ್ಣು |
| I. | ನರ್ಸರಿ | 3,000 | 4,000 |
| II. | 1 ರಿಂದ 4ನೇ ತರಗತಿ | 3,000 | 4,000 |
| III. | 5 ರಿಂದ 8ನೇ ತರಗತಿ | 5,000 | 6,000 |
| IV. | 9 ಹಾಗೂ 10ನೇ ತರಗತಿ | 10,000 | 11,000 |
| V. | ಪ್ರಥಮ ಪಿಯುಸಿ ಮತ್ತು ದ್ವಿತೀಯ ಪಿ.ಯು.ಸಿ | 10,000 | 14,000 |
| VI. | ಐಟಿಐ | 12,000 | 15,000 |
| VII. | ಪದವಿ ಪ್ರತಿ ವರ್ಷಕ್ಕೆ | 15,000 | 20,000 |
| VIII. | ಸ್ನಾತಕೋತ್ತರ ಪದವಿ ಸೇರ್ಪಡೆಗೆ | 20,000 | 20,000 |
| | ಮತ್ತು ಪ್ರತಿ ವರ್ಷಕ್ಕೆ | 20,000 | 25,000 |
| IX. | ಇಂಜಿನಿಯರಿಂಗ್ ಕೋರ್ಸ್ ಬಿಇ/ ಬಿ.ಟೆಕ್ ಸೇರ್ಪಡೆಗೆ | 25,000 | 25,000 |
| | ಮತ್ತು ಪ್ರತಿ ವರ್ಷಕ್ಕೆ | 25,000 | 30,000 |
| X. | ವೈದ್ಯಕೀಯ ಕೋರ್ಸ್‌ಗೆ ಸೇರ್ಪಡೆಗೆ | 30,000 | 30,000 |
| | ಮತ್ತು ಪ್ರತಿ ವರ್ಷಕ್ಕೆ | 40,000 | 50,000 |
| XI. | ಡಿಪ್ಲೋಮಾ | 15,000 | 20,000 |
| XII. | ಎಂ.ಟೆಕ್ / ಎಂ.ಇ | 30,000 | 35,000 |
| XIII. | ಎಂ.ಡಿ (ವೈದ್ಯಕೀಯ) | 45,000 | 55,000 |
| XIV. | ಪಿಹೆಚ್‌ಡಿ (ಪ್ರತಿ ವರ್ಷಕ್ಕೆ) ಗರಿಷ್ಠ 03 ವರ್ಷ | 25,000 | 30,000 |

12. **ವೈದ್ಯಕೀಯ ಸಹಾಯಧನ (ಕಾರ್ಮಿಕ ಆರೋಗ್ಯ ಭಾಗ್ಯ):** ನೋಂದಾಯಿತ ಫಲಾನುಭವಿ ಹಾಗೂ ಅವರ ಅವಲಂಭಿತರಿಗೆ **ರೂ.300/-** ರಿಂದ **ರೂ.10,000/-ವರೆಗೆ**
13. **ಅಪಘಾತ ಪರಿಹಾರ:** ಮರಣ ಹೊಂದಿದ್ದಲ್ಲಿ **ರೂ.5,00,000/-**, ಸಂಪೂರ್ಣ ಶಾಶ್ವತ ದುರ್ಬಲತೆಯಾದಲ್ಲಿ **ರೂ.2,00,000/-** ಮತ್ತು ಭಾಗಶಃ ಶಾಶ್ವತ ದುರ್ಬಲತೆಯಾದಲ್ಲಿ **ರೂ.1,00,000/-**
14. **ಪ್ರಮುಖ ವೈದ್ಯಕೀಯ ವೆಚ್ಚ ಸಹಾಯಧನ (ಕಾರ್ಮಿಕ ಚಿಕಿತ್ಸಾ ಭಾಗ್ಯ):** ಹೃದ್ರೋಗ, ಕಿಡ್ನಿ ಜೋಡಣೆ, ಕ್ಯಾನ್ಸರ್ ಶಸ್ತ್ರಚಿಕಿತ್ಸೆ, ಕಣ್ಣಿನ ಶಸ್ತ್ರಚಿಕಿತ್ಸೆ, ಪಾರ್ಶ್ವವಾಯು, ಮೂಳೆ ಶಸ್ತ್ರಚಿಕಿತ್ಸೆ, ಗರ್ಭಕೋಶ ಶಸ್ತ್ರಚಿಕಿತ್ಸೆ, ಅಸ್ತಮ ಚಿಕಿತ್ಸೆ, ಗರ್ಭಪಾತ ಪ್ರಕರಣಗಳು, ಪಿತ್ತಕೋಶದ ತೊಂದರೆಗೆ ಸಂಬಂಧಿತ ಚಿಕಿತ್ಸೆ, ಮೂತ್ರ ಪಿಂಡದಲ್ಲಿನ ಕಲ್ಲು ತೆಗೆಯುವ ಚಿಕಿತ್ಸೆ, ಮೆದುಳಿನ ರಕ್ತಸ್ರಾವದ ಚಿಕಿತ್ಸೆ, ಅಲ್ಸರ್ ಚಿಕಿತ್ಸೆ, ಡಯಾಲಿಸಿಸ್ ಚಿಕಿತ್ಸೆ, ಕಿಡ್ನಿ ಶಸ್ತ್ರಚಿಕಿತ್ಸೆ, ಇ.ಎನ್.ಟಿ. ಚಿಕಿತ್ಸೆ ಮತ್ತು ಶಸ್ತ್ರಚಿಕಿತ್ಸೆ, ನರರೋಗ ಶಸ್ತ್ರಚಿಕಿತ್ಸೆ, ವ್ಯಾಸ್ಕ್ಯೂಲರ್ ಶಸ್ತ್ರಚಿಕಿತ್ಸೆ, ಅನ್ನನಾಳದ ಚಿಕಿತ್ಸೆ ಮತ್ತು ಶಸ್ತ್ರಚಿಕಿತ್ಸೆ, ಕರುಳಿನ ಶಸ್ತ್ರಚಿಕಿತ್ಸೆ, ಸ್ತನ ಸಂಬಂಧಿತ ಚಿಕಿತ್ಸೆ ಮತ್ತು ಶಸ್ತ್ರಚಿಕಿತ್ಸೆ, ಹರ್ನಿಯ ಶಸ್ತ್ರಚಿಕಿತ್ಸೆ, ಅಪೆಂಡಿಕ್ಸ್ ಶಸ್ತ್ರಚಿಕಿತ್ಸೆ, ಮೂಳೆ ಮುರಿತ/ಡಿಸ್‌ಲೊಕೇಶನ್ ಚಿಕಿತ್ಸೆ, ಇತರೆ ಔದ್ಯೋಗಿಕ ಖಾಯಿಲೆಗಳ ಚಿಕಿತ್ಸೆಗಳಿಗೆ **ರೂ.2,00,000/-ವರೆಗೆ**
15. **ಮದುವೆ ಸಹಾಯಧನ (ಗೃಹ ಲಕ್ಷ್ಮೀ ಬಾಂಡ್):** ಫಲಾನುಭವಿ ಅಥವಾ ಅವರ ಇಬ್ಬರು ಮಕ್ಕಳ ಮದುವೆಗೆ ತಲಾ **ರೂ.50,000/-**
16. **ಐಕಲು ಸಂಪರ್ಕ ಸೌಲಭ್ಯ (ಕಾರ್ಮಿಕ ಅನಿಲ ಭಾಗ್ಯ):** ಅನಿಲ ಸಂಪರ್ಕದೊಂದಿಗೆ ಎರಡು ಬರ್ನರ್ ಸ್ಟೌವ್
17. **ಬಿಎಂಟಿಸಿ ಬಸ್ ಪಾಸ್ ಸೌಲಭ್ಯ:** ಬೆಂಗಳೂರು ಮಹಾನಗರ ಪಾಲಿಕೆ ವ್ಯಾಪ್ತಿಯಲ್ಲಿ ಕೆಲಸ ಮಾಡುತ್ತಿರುವಂತಹ / ವಾಸಸ್ಥಳದಿಂದ ಬೆಂಗಳೂರಿಗೆ ಪ್ರಯಾಣಿಸುವ ನೋಂದಾಯಿತ ಕಟ್ಟಡ ಕಾರ್ಮಿಕರಿಗೆ
18. **ಕೆಎಸ್‌ಆರ್‌ಟಿಸಿ ಬಸ್ ಪಾಸ್‌ನ ಸೌಲಭ್ಯ:** ರಾಜ್ಯದಾದ್ಯಂತ ವಿದ್ಯಾಭ್ಯಾಸದಲ್ಲಿ ತೊಡಗಿರುವ ನೋಂದಾಯಿತ ಕಾರ್ಮಿಕರ ಇಬ್ಬರು ಮಕ್ಕಳಿಗೆ (ಈ ಯೋಜನೆಯನ್ನು ಜಾರಿಗೊಳಿಸಲಾಗುತ್ತಿದೆ)
19. **ತಾಯಿ ಮಗು ಸಹಾಯ ಹಸ್ತ:** ಮಹಿಳಾ ಫಲಾನುಭವಿಯು ಮಗುವಿಗೆ ಜನ್ಮ ನೀಡಿದ ಸಂದರ್ಭದಲ್ಲಿ ಆಕೆಯ ಮಗುವಿನ ಶಾಲಾ ಪೂರ್ವ ಶಿಕ್ಷಣ ಮತ್ತು ಪೌಷ್ಠಿಕತೆಗಾಗಿ ಮಗುವಿಗೆ ಮೂರು ವರ್ಷಗಳು ತುಂಬುವವರೆಗೆ ವಾರ್ಷಿಕ **ರೂ.6,000/-** ಗಳ ಸಹಾಯಧನ.

ಅನುಬಂಧ–2

## (ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ: 2595)

**ಕರ್ನಾಟಕ ಕಾರ್ಮಿಕ ಕಲ್ಯಾಣ ಮಂಡಳಿಯಲ್ಲಿ ವಂತಿಗೆ ಪಾವತಿಸುವ ಸಂಘಟಿತ ಕಾರ್ಮಿಕರ ಒಟ್ಟು ಸಂಖ್ಯೆ ಈ ಕೆಳಕಂಡಂತಿದೆ.**

| ಕ್ರಸಂ. | ಜಿಲ್ಲೆಯ ಹೆಸರು | ಸಂಸ್ಥೆಗಳು | ಕಾರ್ಮಿಕರ ಸಂಖ್ಯೆ |
|---|---|---|---|
| 1 | ಬೆಂಗಳೂರು ನಗರ | 10435 | 3358067 |
| 2 | ಬೆಂಗಳೂರು ರೂರಲ್ | 664 | 105424 |
| 3 | ಬೆಳಗಾಂ | 425 | 46170 |
| 4 | ಬಳ್ಳಾರಿ | 441 | 45713 |
| 5 | ಬೀದರ್ | 32 | 5037 |
| 6 | ಬಾಗಲಕೋಟೆ | 62 | 13396 |
| 7 | ವಿಜಯಪುರ | 49 | 13881 |
| 8 | ಚಿಕ್ಕಮಗಳೂರು | 162 | 12611 |
| 9 | ಚಾಮರಾಜನಗರ | 35 | 5511 |
| 10 | ಚಿತ್ರದುರ್ಗ | 43 | 5661 |
| 11 | ಚಿಕ್ಕಬಳ್ಳಾಪುರ | 41 | 10751 |
| 12 | ದಾವಣಗೆರೆ | 125 | 16153 |
| 13 | ದಕ್ಷಿಣ ಕನ್ನಡ | 562 | 69183 |
| 14 | ಧಾರವಾಡ | 338 | 50632 |
| 15 | ಗದಗ್ | 21 | 3782 |
| 16 | ಕಲ್ಬುರ್ಗಿ | 128 | 17616 |
| 17 | ಹಾವೇರಿ | 41 | 7969 |
| 18 | ಹಾಸನ | 103 | 22944 |
| 19 | ಕೊಡಗು | 162 | 10512 |
| 20 | ಕೋಲಾರ | 207 | 31393 |
| 21 | ಕೊಪ್ಪಳ | 44 | 4958 |

| 22 | ಮೈಸೂರು | 673 | 93653 |
|---|---|---|---|
| 23 | ಮಂಡ್ಯ | 93 | 19889 |
| 24 | ರಾಮನಗರ | 279 | 40624 |
| 25 | ರಾಯಚೂರು | 29 | 7379 |
| 26 | ಶಿವಮೊಗ್ಗ | 189 | 27965 |
| 27 | ತುಮಕೂರು | 243 | 34631 |
| 28 | ಉಡುಪಿ | 322 | 37452 |
| 29 | ಉತ್ತರ ಕನ್ನಡ | 65 | 7999 |
| 30 | ಯಾದಗಿರಿ | 12 | 4107 |
|  | ಒಟ್ಟು | **16025** | **4131063** |

## ಅನುಬಂಧ–3

## (ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ: 2595)

## ಕರ್ನಾಟಕ ರಾಜ್ಯ ಅಸಂಘಟಿತ ಕಾರ್ಮಿಕರ ಸಾಮಾಜಿಕ ಭದ್ರತಾ ಮಂಡಳಿಯ ಮಾಹಿತಿ

ಸಾರಿಗೆ ಇಲಾಖೆಯಿಂದ ಊರ್ಜಿತ ಚಾಲನ ಪರವಾನಗಿ ಹೊಂದಿದ ಚಾಲಕರ ಜಿಲ್ಲಾವಾರು ವಿವರ

| ಕ್ರ.ಸಂ | ಜಿಲ್ಲೆ | ಚಾಲಕರ ಸಂಖ್ಯೆ |
|---|---|---|
| 1 | ಬಾಗಲಕೋಟೆ | 19015 |
| 2 | ಬಳ್ಳಾರಿ | 25273 |
| 3 | ಬೆಳಗಾವಿ | 46747 |
| 4 | ಬೆಂಗಳೂರು ನಗರ | 286129 |
| 5 | ಬೆಂಗಳೂರು ಗ್ರಾಮಾಂತರ | 16681 |
| 6 | ಬೀದರ್ | 25332 |
| 7 | ಚಾಮರಾಜನಗರ | 9743 |
| 8 | ಚಿಕ್ಕಬಳ್ಳಾಪುರ | 15610 |
| 9 | ಚಿಕ್ಕಮಗಳೂರು | 10711 |
| 10 | ಚಿತ್ರದುರ್ಗ | 13457 |
| 11 | ದಕ್ಷಿಣ–ಕನ್ನಡ | 50475 |
| 12 | ದಾವಣಗೆರೆ | 20553 |
| 13 | ಧಾರವಾಡ | 14199 |
| 14 | ಗದಗ | 13822 |
| 15 | ಹಾಸನ | 34001 |
| 16 | ಹಾವೇರಿ | 10681 |
| 17 | ಕಲಬುರಗಿ | 27470 |
| 18 | ಕೊಡಗು | 7326 |
| 19 | ಕೋಲಾರ | 28757 |
| 20 | ಕೊಪ್ಪಳ | 8488 |
| 21 | ಮಂಡ್ಯ | 27992 |
| 22 | ಮೈಸೂರು | 39460 |
| 23 | ರಾಮನಗರ | 15903 |
| 24 | ರಾಯಚೂರು | 15343 |
| 25 | ಶಿವಮೊಗ್ಗ | 22213 |
| 26 | ತುಮಕೂರು | 27383 |
| 27 | ಉಡುಪಿ | 22323 |
| 28 | ಉತ್ತರ–ಕನ್ನಡ | 15714 |
| 29 | ವಿಜಯಪುರ | 34008 |
| 30 | ಯಾದಗಿರಿ | 7291 |
| | ಒಟ್ಟು | **912100** |
| ಸರ್ಕಾರಿ ಇಲಾಖೆಗಳು, ಮಂಡಳಿಗಳು ಹಾಗೂ ಸಾರ್ವಜನಿಕಉದ್ದಿಮೆಗಳಲ್ಲಿ ಕಾರ್ಯ ನಿರ್ವಹಿಸುತ್ತಿರುವ ಚಾಲಕರನ್ನು ಸಂಖ್ಯೆ (–_) | | 71539 |
| | ಒಟ್ಟು | **840561** |

## ಅನುಬಂಧ-4

**(ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ: 2595)**

**ಕರ್ನಾಟಕ ರಾಜ್ಯ ಅಸಂಘಟಿತ ಕಾರ್ಮಿಕರ ಸಾಮಾಜಿಕ ಭದ್ರತಾ ಮಂಡಳಿಯು ಅನುಷ್ಠಾನಗೊಳಿಸುತ್ತಿರವ ಅಂಬೇಡ್ಕರ್ ಕಾರ್ಮಿಕ ಸಹಾಯ ಹಸ್ತ ಯೋಜನೆಯಡಿ 11 ವರ್ಗಗಳ ಅಸಂಘಟಿತ ಕಾರ್ಮಿಕರನ್ನು ನೋಂದಾಯಿಸಿದ ವಿವರ**

| ಜಿಲ್ಲೆ | ತಾಲ್ಲೂಕು | ಒಟ್ಟು |
|---|---|---|
| ಬಾಗಲಕೋಟೆ | ಬಾದಾಮಿ | 321 |
| | ಬಾಗಲಕೋಟೆ | 1594 |
| | ಬೀಳಗಿ | 268 |
| | ಹುನಗುಂದ | 444 |
| | ಜಮಖಂಡಿ | 546 |
| | ಮುಧೋಳ | 1277 |
| | **ಒಟ್ಟು** | **4324** |
| ಬಳ್ಳಾರಿ | ಬಳ್ಳಾರಿ | 2640 |
| | ಹಡಗಲಿ | 105 |
| | ಹಗರಿಬೊಮ್ಮನಹಳ್ಳಿ | 305 |
| | ಹರಪನಹಳ್ಳಿ | 0 |
| | ಹೊಸಪೇಟೆ | 447 |
| | ಕೂಡ್ಲಿಗಿ | 320 |
| | ಸಂಡೂರು | 215 |
| | ಸಿರಗುಪ್ಪ | 735 |
| | **ಒಟ್ಟು** | **4767** |
| ಬೆಳಗಾವಿ | ಅಥಣಿ | 832 |
| | ಬೈಲಾಹೊಂಗಲ | 142 |
| | ಬೆಳಗಾವಿ | 1700 |
| | ಚಿಕ್ಕೋಡಿ | 5852 |
| | ಗೋಕಾಕ್ | 740 |
| | ಹುಕ್ಕೇರಿ | 625 |
| | ಖಾನಪುರ | 101 |
| | ರಾಮದುರ್ಗ | 140 |
| | ರಾಯಭಾಗ | 1041 |
| | ಸವದತ್ತಿ | 225 |
| | **ಒಟ್ಟು** | **11398** |
| ಬೆಂಗಳೂರು ನಗರ | ಬಿಬಿಎಂಪಿ | 15707 |
| | ಆನೇಕಲ್ | 456 |
| | ಬೆಂಗಳೂರು ಪೂರ್ವ | 405 |

| | | |
|---|---|---|
| | ಬೆಂಗಳೂರು ಉತ್ತರ | 1729 |
| | ಬೆಂಗಳೂರು ದಕ್ಷಿಣ | 732 |
| | **ಒಟ್ಟು** | **19119** |
| **ಬೆಂಗಳೂರು ಗ್ರಾಮಾಂತರ** | ದೇವನಹಳ್ಳಿ | 147 |
| | ದೊಡ್ಡಬಳ್ಳಾಪುರ | 314 |
| | ಹೊಸಕೋಟೆ | 56 |
| | ನೆಲಮಂಗಲ | 52 |
| | **ಒಟ್ಟು** | **569** |
| **ಬೀದರ್** | ಔರಾದ್ | 50 |
| | ಬಸವಕಲ್ಯಾಣ | 498 |
| | ಭಾಲ್ಕಿ | 375 |
| | ಬೀದರ್ | 1120 |
| | ಚಿತ್ತಗುಪ್ಪ | 217 |
| | **ಒಟ್ಟು** | **2260** |
| **ಚಾಮರಾಜನಗರ** | ಚಾಮರಾಜನಗರ | 1183 |
| | ಗುಂಡ್ಲುಪೇಟೆ | 598 |
| | ಕೊಳ್ಳೇಗಾಲ | 1308 |
| | ಯಲಂದೂರು | 104 |
| | **ಒಟ್ಟು** | **3283** |
| **ಚಿಕ್ಕಬಳ್ಳಾಪುರ** | ಬಾಗೇಪಲ್ಲಿ | 202 |
| | ಚಿಕ್ಕಬಳ್ಳಾಪುರ | 556 |
| | ಚಿಂತಾಮಣಿ | 157 |
| | ಗೌರಿಬಿದನೂರು | 429 |
| | ಗುಡಿಬಂಡೆ | 57 |
| | ಶಿಡ್ಲಘಟ್ಟ | 305 |
| | **ಒಟ್ಟು** | **1706** |
| **ಚಿಕ್ಕಮಗಳೂರು** | ಚಿಕ್ಕಮಗಳೂರು | 988 |
| | ಕಡೂರು | 423 |
| | ಕೊಪ್ಪ | 165 |
| | ಮುಡಿಗೆರೆ | 272 |
| | ನರಸಿಂಹರಾಜಪುರ | 182 |
| | ಶೃಂಗೇರಿ | 65 |
| | ತರಿಕೆರೆ | 775 |
| | **ಒಟ್ಟು** | **2870** |
| **ಚಿತ್ರದುರ್ಗ** | ಚಳ್ಳಕೆರೆ | 1780 |
| | ಚಿತ್ರದುರ್ಗ | 1774 |
| | ಹಿರಿಯೂರು | 513 |

| | | |
|---|---|---|
| | ಹೊಳಲ್ಕೆರೆ | 196 |
| | ಹೊಸದುರ್ಗ | 368 |
| | ಮೊಳಕಾಲ್ಮೂರು | 318 |
| | ಒಟ್ಟು | **4949** |
| ದಕ್ಷಿಣ–ಕನ್ನಡ | ಬಂಟ್ವಾಳ | 832 |
| | ಬೆಳ್ತಂಗಡಿ | 276 |
| | ಮಂಗಳೂರು | 2606 |
| | ಪುತ್ತೂರು | 741 |
| | ಸುಳ್ಯ | 284 |
| | ಒಟ್ಟು | **4739** |
| ದಾವಣಗೆರೆ | ಚನ್ನಗಿರಿ | 548 |
| | ದಾವಣಗೆರೆ | 3703 |
| | ಹರಿಹರ | 1366 |
| | ಹೊನ್ನಾಳಿ | 442 |
| | ಹರಪ್ಪನಳ್ಳಿ | 621 |
| | ಜಗಳೂರು | 292 |
| | ಒಟ್ಟು | **6972** |
| ಧಾರವಾಡ | ಧಾರವಾಡ | 571 |
| | ಹುಬ್ಬಳ್ಳಿ | 1602 |
| | ಕಲಘಟಗಿ | 206 |
| | ಕುಂದಗೋಳ್ | 164 |
| | ನವಲಗುಂದ | 119 |
| | ಒಟ್ಟು | **2662** |
| ಗದಗ | ಗದಗ | 1169 |
| | ಮುಂಡರಗಿ | 195 |
| | ನರಗುಂದ | 514 |
| | ರಾಣ | 675 |
| | ಶಿರಹಟ್ಟಿ | 394 |
| | ಒಟ್ಟು | **2947** |
| ಹಾಸನ | ಆಲೂರು | 77 |
| | ಅರಕಲಗೂಡು | 251 |
| | ಅರಸಿಕೆರೆ | 760 |
| | ಬೇಲೂರು | 429 |
| | ಚನ್ನರಾಯಪಟ್ಟಣ | 160 |
| | ಹಾಸನ | 650 |
| | ಹೊಳೇ ನರಸೀಪುರ | 227 |
| | ಸಕಲೇಶ್‌ಪುರ | 137 |

| | | |
|---|---|---|
| | ಒಟ್ಟು | **2691** |
| ಹಾವೇರಿ | ಬ್ಯಾಡಗಿ | 113 |
| | ಹಂಗಾಲ | 1324 |
| | ಹಾವೇರಿ | 488 |
| | ಹಿರೇಕೆರೂರು | 257 |
| | ರಾಣಿಬೆನ್ನೂರು | 430 |
| | ಸವಣೂರು | 473 |
| | ಶಿಗ್ಗಾಂವ್ | 91 |
| | ಒಟ್ಟು | **3176** |
| ಕಲಬುರಗಿ | ಅಫ್ಜಲ್‌ಪುರ | 440 |
| | ಆಳಂದ | 524 |
| | ಚಿಂಚೋಳಿ | 83 |
| | ಚಿತ್ತಪುರ | 323 |
| | ಜೇವರ್ಗಿ | 44 |
| | ಕಲಬುರಗಿ | 857 |
| | ಸೇಡಂ | 288 |
| | ಒಟ್ಟು | **2562** |
| ಕೊಡಗು | ಮಡಿಕೇರಿ | 691 |
| | ಸೋಮವಾರಪೇಟೆ | 642 |
| | ವಿರಾಜಪೇಟೆ | 1928 |
| | ಒಟ್ಟು | **3261** |
| ಕೋಲಾರ | ಬಂಗಾರಪೇಟೆ | 770 |
| | ಕೋಲಾರ | 393 |
| | ಮಾಲೂರು | 93 |
| | ಮುಳಬಾಗಿಲು | 66 |
| | ಶ್ರೀನಿವಾಸಪುರ | 50 |
| | ಒಟ್ಟು | **1372** |
| ಕೊಪ್ಪಳ | ಗಂಗಾವತಿ | 1229 |
| | ಕೊಪ್ಪಳ | 1364 |
| | ಕುಷ್ಟಗಿ | 757 |
| | ಯಲ್ಬುರ್ಗ | 410 |
| | ಒಟ್ಟು | **3760** |
| ಮಂಡ್ಯ | ಕೃಷ್ಣರಾಜಪೇಟೆ | 482 |
| | ಮದ್ದೂರು | 977 |
| | ಮಳವಳ್ಳಿ | 564 |
| | ಮಂಡ್ಯ | 1959 |
| | ನಾಗಮಂಗಲ | 245 |

| | | |
|---|---|---|
| | ಪಾಂಡವಪುರ | 391 |
| | ಶ್ರೀರಂಗಪಟ್ಟಣ | 393 |
| | ಒಟ್ಟು | **5011** |
| ಮೈಸೂರು | ಹೆಗ್ಗಡದೇವನಕೋಟೆ | 442 |
| | ಹುಣಸೂರು | 550 |
| | ಕೃಷ್ಣರಾಜನಗರ | 174 |
| | ಮೈಸೂರು | 4440 |
| | ನಂಜನಗೂಡು | 288 |
| | ಪಿರಿಯಾಪಟ್ಟಣ | 427 |
| | ನರಸೀಪುರ | 168 |
| | ಒಟ್ಟು | **6490** |
| ರಾಯಚೂರು | ದೇವದುರ್ಗ | 178 |
| | ಲಿಂಗಸೂಗೂರು | 470 |
| | ಮಾನ್ವಿ | 645 |
| | ರಾಯಚೂರು | 1559 |
| | ಸಿಂಧನೂರು | 1491 |
| | ಒಟ್ಟು | **4343** |
| ರಾಮನಗರ | ಚನ್ನಪಟ್ಟಣ | 576 |
| | ಕನಕಪುರ | 226 |
| | ಮಾಗಡಿ | 181 |
| | ರಾಮನಗರ | 656 |
| | ಒಟ್ಟು | **1639** |
| ಶಿವಮೊಗ್ಗ | ಭದ್ರಾವತಿ | 530 |
| | ಹೊಸನಗರ | 141 |
| | ಸಾಗರ | 559 |
| | ಶಿಕಾರಿಪುರ | 369 |
| | ಶಿವಮೊಗ್ಗ | 1968 |
| | ಸೊರಬ | 969 |
| | ತೀರ್ಥಹಳ್ಳಿ | 466 |
| | ಒಟ್ಟು | **5002** |
| ತುಮಕೂರು | ಚಿಕ್ಕನಾಯಕನಹಳ್ಳಿ | 429 |
| | ಗುಬ್ಬಿ | 307 |
| | ಕೊರಟಗೆರೆ | 166 |
| | ಕುಣಿಗಲ್ | 329 |
| | ಮಧುಗಿರಿ | 535 |
| | ಪಾವಗಡ | 420 |
| | ಸಿರಾ | 176 |

|  |  |  |
|---|---|---|
|  | ತಿಪಟೂರು | 457 |
|  | ತುಮಕೂರು | 2169 |
|  | ತುರುವೇಕೆರೆ | 234 |
|  | ಒಟ್ಟು | **5222** |
| ಉಡುಪಿ | ಕಾರ್ಕಳ | 451 |
|  | ಕುಂದಾಪುರ | 653 |
|  | ಉಡುಪಿ | 1279 |
|  | ಒಟ್ಟು | **2383** |
| ಉತ್ತರ-ಕನ್ನಡ | ಅಂಕೋಲಾ | 6605 |
|  | ಭಟ್ಕಳ | 10543 |
|  | ಹಳಿಯಾಳ | 91 |
|  | ಹೊನ್ನಾವರ | 12645 |
|  | ಕಾರವಾರ | 1660 |
|  | ಕುಮುಟ | 5688 |
|  | ಮುಂಡಗೋಡು | 16 |
|  | ಸಿದ್ದಾಪುರ | 404 |
|  | ಶಿರಸಿ | 860 |
|  | ಸೂಪ | 81 |
|  | ಯಲ್ಲಾಪುರ | 162 |
|  | ಒಟ್ಟು | **38755** |
| ವಿಜಯಪುರ | ಬಸವನಬಾಗೇವಾಡಿ | 251 |
|  | ಇಂಡಿ | 79 |
|  | ಮುದ್ದೇಬಿಹಾಳ | 1605 |
|  | ಸಿಂದಗಿ | 44 |
|  | ವಿಜಯಪುರ | 1417 |
|  | ಒಟ್ಟು | **3396** |
| ಯಾದಗಿರಿ | ಶಹಪುರ | 353 |
|  | ಸುರಪುರ | 580 |
|  | ಯಾದಗಿರಿ | 958 |
|  | ಒಟ್ಟು | **1891** |
| ಒಟ್ಟು |  | **1,63,519** |

ಅನುಬಂಧ-5

(ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ: 2595)

**ಕರ್ನಾಟಕ ಕಟ್ಟಡ ಮತ್ತು ಇತರೆ ನಿರ್ಮಾಣ ಕಾರ್ಮಿಕರ ಕಲ್ಯಾಣ ಮಂಡಳಿಯ ಮಾಹಿತಿ**

| Total Number of Registered Workers From 2007 to February -2021 | | |
|---|---|---|
| **Sl No** | **District** | **No. of workers registered** |
| 1 | Bagalkote | 59,370 |
| 2 | Bangalore | 436810 |
| 3 | Belgaum | 144515 |
| 4 | Bellary | 83,276 |
| 5 | Bijapur | 93,566 |
| 6 | Bidar | 151891 |
| 7 | Chamaraja Nagara | 38,932 |
| 8 | Chikkabalapura | 34,063 |
| 9 | Chikmagalur | 60,290 |
| 10 | Chitradurga | 71,339 |
| 11 | Dakshina Kannada | 83,791 |
| 12 | Davanagere | 1,13,553 |
| 13 | Dharwar | 88,446 |
| 14 | Gadag | 37,633 |
| 15 | Gulbarga | 150473 |
| 16 | Hassan | 54,823 |
| 17 | Haveri | 90,130 |
| 18 | Kodagu | 6,592 |
| 19 | Kolar | 97,705 |
| 20 | Koppal | 62,699 |
| 21 | Mandya | 43,033 |
| 22 | Mysore | 90,668 |
| 23 | Ramanagara | 52,898 |
| 24 | Raichur | 45,735 |
| 25 | Shimoga | 97,600 |
| 26 | Uttara Kannada | 76,409 |
| 27 | Udupi | 44,713 |
| 28 | Tumkur | 69,373 |
| 29 | Yadgiri | 58,639 |
| | Total | 25,38,965 |
| | Special Drive Registration | 4,20,886 |
| | **Grand Total** | **29,59,851** |

## ಅನುಬಂಧ-6
## (ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ: 2595)

### ಕರ್ನಾಟಕ ರಾಜ್ಯ ಅಸಂಘಟಿತ ಕಾರ್ಮಿಕರ ಸಾಮಾಜಿಕ ಭದ್ರತಾ ಮಂಡಳಿಯ ವತಿಯಿಂದ ಕ್ಷೌರಕರು/ಅಗಸ ತೊಡಗಿರುವ ಕಾರ್ಮಿಕರ ಅರ್ಜಿಗಳನ್ನು ಸ್ವೀಕರಿಸಲಾದ ಜಿಲ್ಲಾವಾರು ಮಾಹಿತಿ [15-8-2020 ರವರೆಗೆ]

| ಕ್ರಸಂ | ಜಿಲ್ಲೆ | ಕ್ಷೌರಿಕ | ಅಗಸ | ಒಟ್ಟು |
|---|---|---|---|---|
| 1 | ಬಾಗಲಕೋಟೆ | 2417 | 1072 | 3489 |
| 2 | ಬಳ್ಳಾರಿ | 3075 | 7495 | 10570 |
| 3 | ಬೆಳಗಾವಿ | 5667 | 2788 | 8455 |
| 4 | ಬೆಂಗಳೂರು ಗ್ರಾಮಾಂತರ | 1324 | 1166 | 2490 |
| 5 | ಬೆಂಗಳೂರು ನಗರ | 6071 | 6007 | 12078 |
| 6 | ಬೀದರ್ | 1937 | 1944 | 3881 |
| 7 | ಚಾಮರಾಜನಗರ | 1057 | 2950 | 4007 |
| 8 | ಚಿಕ್ಕಬಳ್ಳಾಪುರ | 2261 | 3012 | 5273 |
| 9 | ಚಿಕ್ಕಮಗಳೂರು | 976 | 516 | 1492 |
| 10 | ಚಿತ್ರದುರ್ಗ | 1785 | 3660 | 5445 |
| 11 | ದಕ್ಷಿಣ-ಕನ್ನಡ | 992 | 345 | 1337 |
| 12 | ದಾವಣಗೆರೆ | 1650 | 2571 | 4221 |
| 13 | ಧಾರವಾಡ | 2257 | 2191 | 4448 |
| 14 | ಗದಗ | 1999 | 1240 | 3239 |
| 15 | ಹಾಸನ | 1765 | 1937 | 3702 |
| 16 | ಹಾವೇರಿ | 2200 | 2381 | 4581 |
| 17 | ಕಲಬುರಗಿ | 3761 | 2250 | 6011 |
| 18 | ಕೊಡಗು | 395 | 238 | 633 |
| 19 | ಕೋಲಾರ | 2509 | 2449 | 4958 |
| 20 | ಕೊಪ್ಪಳ | 2382 | 2363 | 4745 |
| 21 | ಮಂಡ್ಯ | 2311 | 4089 | 6400 |
| 22 | ಮೈಸೂರು | 3294 | 5147 | 8441 |
| 23 | ರಾಯಚೂರು | 2745 | 5604 | 8349 |
| 24 | ರಾಮನಗರ | 1045 | 1373 | 2418 |
| 25 | ಶಿವಮೊಗ್ಗ | 1570 | 883 | 2453 |
| 26 | ತುಮಕೂರು | 2596 | 4582 | 7178 |
| 27 | ಉಡುಪಿ | 1048 | 368 | 1416 |
| 28 | ಉತ್ತರ-ಕನ್ನಡ | 986 | 685 | 1671 |
| 29 | ವಿಜಯಪುರ | 3207 | 1469 | 4676 |
| 30 | ಯಾದಗಿರಿ | 1538 | 2007 | 3545 |
| ಒಟ್ಟು | | **66820** | **74782** | **141602** |

# ಕರ್ನಾಟಕ ವಿಧಾನ ಸಭೆ

1 ಮಾನ್ಯ ಸದಸ್ಯರ ಹೆಸರು : ಶ್ರೀ ಶಿವಣ್ಣ ಬಿ. (ಆನೇಕಲ್)

2 ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 2582

3 ಉತ್ತರಿಸಬೇಕಾದ ದಿನಾಂಕ : 18–03–2021

4 ಉತ್ತರಿಸಬೇಕಾದವರು : ಮಾನ್ಯ ಕಾರ್ಮಿಕ ಸಚಿವರು

| ಕ್ರ. ಸಂ. | ಪ್ರಶ್ನೆ | ಉತ್ತರ |
|---|---|---|
| (ಅ) | ಆನೇಕಲ್ ತಾಲ್ಲೂಕಿನ ಇಗ್ಗಲೂರಿನಲ್ಲಿ ಇ.ಎಸ್.ಐ, ಆಸ್ಪತ್ರೆ ಕಟ್ಟಡ ಕಾಮಗಾರಿ ಯಾವಾಗ ಆರಂಭಿಸಲಾಗುವುದು; (ಪೂರ್ಣ ಮಾಹಿತಿ ನೀಡುವುದು) | ಆಸ್ಪತ್ರೆಯ ಕಟ್ಟಡ ನಿರ್ಮಾಣ ಕಾರ್ಯ ಕಾರಾವಿ. ನಿಗಮಕ್ಕೆ ಸಂಬಂಧಿಸಿದ್ದು, ಕೇಂದ್ರ ಲೋಕೋಪಯೋಗಿ ಇಲಾಖೆಗೆ ಕಟ್ಟಡ ನಿರ್ಮಾಣ ಕಾರ್ಯವನ್ನು ವಹಿಸಲಾಗಿದೆ. |
| (ಇ) | ಇಗ್ಗಲೂರಿನಲ್ಲಿ ಇ.ಎಸ್.ಐ. ಆಸ್ಪತ್ರೆಯ ಕಟ್ಟಡ ಕಾಮಗಾರಿಯನ್ನು ಯಾವ ಕಾಲಮಿತಿಯಲ್ಲಿ ಪೂರ್ಣಗೊಳಿಸಲಾಗುವುದು? (ಪೂರ್ಣ ಮಾಹಿತಿ ನೀಡುವುದು) | ದಿನಾಂಕ:17-10-2018 ರಲ್ಲಿ ಇ.ಎಸ್.ಐ ಆಸ್ಪತ್ರೆಯನ್ನು ರಾಜ್ಯ ಸರ್ಕಾರದ ವತಿಯಿಂದ ನಿರ್ವಹಿಸುವುದಾಗಿ ಕಾರಾವಿ. ನಿಗಮಕ್ಕೆ ಸರ್ಕಾರವು ತನ್ನ ಸಹಮತವನ್ನು ನೀಡಿರುತ್ತದೆ. (ಪ್ರತಿ ಲಗತ್ತಿಸಿದೆ).<br><br>ಆಸ್ಪತ್ರೆಯ ಕಟ್ಟಡ ನಿರ್ಮಾಣ ಕಾರ್ಯ ಕಾರಾವಿ. ನಿಗಮಕ್ಕೆ ಸಂಬಂಧಿಸಿರುತ್ತದೆ.<br><br>ಕಾ.ರಾ.ವಿ ನಿಗಮ ತನ್ನ ಪತ್ರ ಸಂಖ್ಯೆ: W/11/13/Karnataka/8/2012(Land-PMD) Dated.18-07-2019 ರಲ್ಲಿ ತಿಳಿಸಿರುವಂತೆ ಆಸ್ಪತ್ರೆ ನಿರ್ಮಾಣ ಕಾಮಗಾರಿಯನ್ನು ಕೇಂದ್ರ ಲೋಕೋಪಯೋಗಿ ಇಲಾಖೆಯೊಂದಿಗೆ ಮಾಡಿಕೊಂಡಿರುವ MoU ಷರತ್ತುಗಳನ್ವಯ ಕಟ್ಟಡದ ಕಾಮಗಾರಿಯನ್ನು ಕೈಗೊಳ್ಳಲಾಗುತ್ತಿದೆ. |

ಕಡತ ಸಂಖ್ಯೆ: LD-LSI/60/2021

(ಅರಬೈಲ್ ಶಿವರಾಂ ಹೆಬ್ಬಾರ್)
ಕಾರ್ಮಿಕ ಸಚಿವರು

(10) (5)

# GOVERNMENT OF KARNATAKA

No. LD 208 LSI 2018

Karnataka Government Secretar
Vikasa Soudha,
Bengaluru, dated: 17.10.2018

From:

The Secretary to Government
Labour Department
Bangalore - 560 001.

To:

The Director General,
Employees State Insurance Corporation,
Panchdeep Bhawan, C.I.G. Marg,
New Delhi-110002.



Sir,

Sub:- Commissioning of 200 bedded ESI Hospital in Bommasandra Industrial Area.

Ref:- Medical commissioner, ESI Corporation Letter No.U-16/12/22/Misc./2011/Med-II, dated:26-07-2018.

*****

Adverting to the above subject and reference, I am directed to conv Principle' approval of Government for setting up of 200 bedded ESI Hosp Bommasandra Industrial Area.

Department is willing to take over the said building after its constru if the essential staff / posts have been sanctioned. Therefore it is request take up construction works of the ESI hospital at Bommasandra on priority under intimation to this Department.

Yours faithfully,

Ramani
(Ramani)
Desk Officer-5,
Labour Department

9/10

**Copy to:**

The Director, ESIS, Rajajinagar for information and follow up action.



HEADQUARTERS
EMPLOYEES' STATE INSURANCE CORPORATION
PANCHDEEP BHAVAN: C.I.G. ROAD, NEW DELHI-110002.
Chief Engineer e-mail: chief-engr@esic.nic.in

Dated: 18.7.2019

No. W/11/13/Karnataka/8/2012(Land-PMD)

To
Chief Engineer (SE-III)
Central Public Works Department
1st Floor, A-wing, Kendriya Sadan
Koramngala, Bangalore-560034.

Subject :- Construction of 200 bedded ESIC Hospital at Bommasandra, Industrial Area, Karnataka.
*****

Sir,

With reference to the above, I am directed to intimate that Competent Authority of ESI Corporation is pleased to assign the above work on the following terms and conditions:-

1. The work shall be executed by M/s. CPWD on Deposit Work basis in accordance with provisions of MoU-2.
2. CVC guidelines, GFR Provisions, CPWD Specifications, BIS/NBC standard and sound engineering practices shall be followed by CPWD while executing the work besides observing due diligence so as to complete the work with optimum cost and within timeline. The required follow up actions need to be taken by CPWD in sequential manner as delineated in the generic MoU-2 which was signed earlier.
3. ESIC will pay departmental charges to CPWD as per mutually agreed condition for execution of this project including Architectural and Engineering Consultancy.
4. It is requested to visit the site for preparation of Concept Plan.
5. CPWD will develop concept plan for this project and give presentation to ESIC for approval, thereafter the plans shall be submitted to local authority for obtaining approval from them to take up the work on the Ground.

This is for information and necessary action.

Yours faithfully,

(SUDIP DUTTA)
CHIEF ENGINEER

Copy to:-
1. Shri Harish Kumar, DDG(Works), CPWD, A Wing, 114, Nirman Bhawan, New Delhi for kind information.
2. Shri Harnam Singh, Chief Project Manager, RPZ, CPWD E-Wing, Nirman Bhawan, New Delhi for kind information and necessary action.
3. Regional Director, Regional Office, ESI Corporation, Karnataka for information and necessary action please.
4. Shri D.N. Arya, SE, PMD, Hqrs. Office for information.
5. SE(SZ) for information & necessary action.

CHIEF ENGINEER

6237



ಕಾರ್ಮಿಕರ ರಾಜ್ಯ ವಿಮಾ ನಿಗಮ / कर्मचारी राज्य बीमा निगम
EMPLOYEES' STATE INSURANCE CORPORATION
REGIONAL OFFICE (KARNATAKA)
Ministry of Labour & Employment, Govt. of India
No.10, Binnyfields, Binnypet, Tank Bund Road
(Near Binny Mills, Next to ETA Mall), Bangalore-560023
Phone: 080-26742485, Fax: 080-26741307, E-mail: rd-karnataka@esic.nic.in





No. 53.U.16.51.01/2018.Inspn

Date: 01.02.2021

To,
Dr. Manoranjini.G, Director,
ESIS Medical Services
Rajajinagar,
BENGALURU – 560 010.

**Sub: Karnataka Legislative Assembly Question No. 995/2021, reg. construction of ESI Hospital at Iggalur, Anekal Taluk.**

Sir,

I am directed to refer to your mail dated 01.02.2021 on the subject cited above.

In this connection, it is informed that, 'in principle' approval has been accorded by the ESI Corporation, for setting up of 200 bedded ESI Hospital at Bommasandra and five acres of land has been purchased & registered from KIADB for setting up of Hospital at Iggalur, Anekal Taluk.

Further, the Construction work was assigned to CPWD on 18.07.2019 by ESIC Headquarters and as per the latest communication received from CPWD, the revised concept plan has been submitted to ESIC Headquarters for approval.

This is for kind information.

This has approval of the Regional Director.

Yours faithfully,

(RAVI NAYAK BR)
ASSISTANT DIRECTOR



# ಕರ್ನಾಟಕ ವಿಧಾನಸಭೆ

| | | |
|---|---|---|
| **ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ** | : | 3000 |
| **ಮಾನ್ಯ ಸದಸ್ಯರ ಹೆಸರು** | : | ಶ್ರೀ ಕೌಜಲಗಿ ಮಹಾಂತೇಶ್ ಶಿವಾನಂದ್ (ಬೈಲಹೊಂಗಲ ) |
| **ಉತ್ತರಿಸುವ ಸಚಿವರು** | : | ಪ್ರವಾಸೋದ್ಯಮ, ಪರಿಸರ ಹಾಗೂ ಜೀವಿಶಾಸ್ತ್ರ, ಸಚಿವರು |
| **ಉತ್ತರಿಸುವ ದಿನಾಂಕ** | : | 18-03-2021 |

*******

| ಕ್ರ. ಸಂ. | ಪ್ರಶ್ನೆ | ಉತ್ತರ |
|---|---|---|
| ಅ) | ವೀರ ರಾಣಿ ಬೆಳವಡಿ ಮಲ್ಲಮ್ಮ ಸಹ ದೇಶದಲ್ಲಿಯೇ ಪ್ರಪ್ರಥಮವಾಗಿ ಮಹಿಳಾ ಸೈನ್ಯವನ್ನು ಕಟ್ಟಿ ನಾಡು-ನುಡಿಗಾಗಿ ಹೋರಾಡಿದ ವೀರ ಮಹಿಳೆಯಾಗಿದ್ದು, ಇವರ ಹೆಸರಿನಲ್ಲಿ ರಾಕ್ ಗಾರ್ಡನ್ ಪ್ರಾರಂಭಿಸುವಂತೆ ಆ ಭಾಗದ ಜನಪ್ರತಿನಿಧಿಗಳು ಸರ್ಕಾರವನ್ನು ಒತ್ತಾಯಿಸುತ್ತಿರುವುದು ಸರ್ಕಾರದ ಗಮನದಲ್ಲಿದೆಯೇ; | ಇಲ್ಲ |
| ಆ) | ಹಾಗಿದ್ದಲ್ಲಿ, ಬೆಳವಡಿ ಗ್ರಾಮದಲ್ಲಿ ಸರ್ಕಾರದ 20 ಎಕರೆ ಜಾಗ ಲಭ್ಯವಿದ್ದು, ಇಲ್ಲಿ ಬೆಳವಾಡಿ ಮಲ್ಲಮ್ಮನ ಹೆಸರಿನಿಂದ ರಾಕ್ ಗಾರ್ಡನ್ ನಿರ್ಮಾಣ ಮಾಡಲು ಕ್ರಮ ಕೈಗೊಳ್ಳಲಾಗುವುದೇ? | ಉದ್ಭವಿಸುವುದಿಲ್ಲ |

ಸಂಖ್ಯೆ: ಟಿಓಆರ್ 51 ಟಿಡಿವಿ 2021

(ಸಿ.ಪಿ.ಯೋಗೇಶ್ವರ)
ಪ್ರವಾಸೋದ್ಯಮ, ಪರಿಸರ
ಹಾಗೂ ಜೀವಿಶಾಸ್ತ್ರ, ಸಚಿವರು

## ಕರ್ನಾಟಕ ವಿಧಾನ ಸಭೆ

**ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ** : **2972**

**ಮಾನ್ಯ ಸದಸ್ಯರ ಹೆಸರು** : **ಶ್ರೀ ಬಸವನಗೌಡ ದದ್ದಲ**

**ಉತ್ತರಿಸಬೇಕಾದ ದಿನಾಂಕ** : **18.03.2021**

**ಉತ್ತರಿಸುವ ಸಚಿವರು** : **ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಹಾಗೂ ವೈದ್ಯಕೀಯ ಶಿಕ್ಷಣ ಸಚಿವರು**

| ಕ್ರ. ಸಂ | ಪ್ರಶ್ನೆಗಳು | ಉತ್ತರ |
|---|---|---|
| ಅ) | ರಾಯಚೂರು ಜಿಲ್ಲೆಯನ್ನು ಕೇಂದ್ರ ಸರ್ಕಾರವು ಅಪೌಷ್ಠಿಕತೆಯಿಂದ ಕೂಡಿದ ಜಿಲ್ಲೆ ಎಂದು ಘೋಷಿಸಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; | ಬಂದಿದೆ. |
| ಆ) | ಪ್ರಾಥಮಿಕ ಆರೋಗ್ಯ ಕೇಂದ್ರಗಳನ್ನು ಸ್ಥಾಪಿಸುವಲ್ಲಿ ಇರುವ ಮಾನದಂಡವೇನು; (ಸಂಪೂರ್ಣವಾದ ವಿವರ ನೀಡುವುದು) | ಐ.ಪಿ.ಹೆಚ್.ಎಸ್ ಮಾರ್ಗಸೂಚಿ ಪ್ರಕಾರ ಸಮತಟ್ಟು ಪ್ರದೇಶಗಳಲ್ಲಿ 30,000 ಜನಸಂಖ್ಯೆ ಮತ್ತು ಗುಡ್ಡಗಾಡು ಹಾಗೂ ಗಿರಿಜನ ಪ್ರದೇಶಗಳಲ್ಲಿ 20,000 ಜನಸಂಖ್ಯೆಗೆ ಒಂದು ಪ್ರಾಥಮಿಕ ಆರೋಗ್ಯ ಕೇಂದ್ರವನ್ನು ಮಂಜೂರು ಮಾಡಲು ಅವಕಾಶವಿದೆ. |
| ಇ) | ರಾಯಚೂರು ಗ್ರಾಮೀಣ ವಿಧಾನಸಭಾ ಕ್ಷೇತ್ರದಲ್ಲಿ ಎಷ್ಟು ಪ್ರಾಥಮಿಕ ಆರೋಗ್ಯ ಕೇಂದ್ರಗಳಿವೆ; | ರಾಯಚೂರು ಗ್ರಾಮೀಣ ವಿಧಾನಸಭಾ ಕ್ಷೇತ್ರದಲ್ಲಿ 9 ಪ್ರಾಥಮಿಕ ಆರೋಗ್ಯ ಕೇಂದ್ರಗಳು ಕಾರ್ಯನಿರ್ವಹಿಸುತ್ತಿವೆ. ಮಾಹಿತಿ ಈ ಕೆಳಕಂಡಂತಿದೆ. |

| ಕ್ರ.ಸಂ | ಸ್ಥಳ |
|---|---|
| 1 | ಚಂದ್ರಬಂಡಾ |
| 2 | ಯಪಲದಿನ್ನಿ |
| 3 | ಗುಂಜಳ್ಳಿ |
| 4 | ಗಿಲ್ಲಸೂಗರು |
| 5 | ಇಡಪನೂರು |
| 6 | ಉ ಖಾನಾಪೂರ |
| 7 | ಮಾಟಮಾರಿ |
| 8 | ಕಲಮಲ |
| 9 | ಗಾಣದಾಳ |

| | | |
|---|---|---|
| ಈ | ಅಲ್ಲಿನ ಜನಸಂಖ್ಯೆಗೆ ಅನುಗುಣವಾಗಿ ಆರೋಗ್ಯ ಕೇಂದ್ರಗಳಿವೆಯೇ (ಸಂಪೂರ್ಣವಾದ ವಿವರ ನೀಡುವುದು) | 2011ರ ಗ್ರಾಮೀಣ ಜನಸಂಖ್ಯೆ ಅನ್ವಯ ರಾಯಚೂರು ತಾಲ್ಲೂಕಿನ ಗ್ರಾಮೀಣ ಜನಸಂಖ್ಯೆ 2,47,476 ಇದ್ದು, ಐ.ಪಿ.ಹೆಚ್.ಎಸ್ ಮಾರ್ಗಸೂಚಿ ಅನ್ವಯ 12 ಪ್ರಾಥಮಿಕ ಆರೋಗ್ಯ ಕೇಂದ್ರ ಸ್ಥಾಪಿಸಲು ಅವಕಾಶವಿದ್ದು, ಪ್ರಸ್ತುತ 9 ಪ್ರಾಥಮಿಕ ಆರೋಗ್ಯ ಕೇಂದ್ರ ಕಾರ್ಯನಿರ್ವಹಿಸುತ್ತಿವೆ. |
| ಉ) | ರಾಯಚೂರು ಗ್ರಾಮೀಣ ವಿಧಾನಸಭಾ ಕ್ಷೇತ್ರಕ್ಕೆ ಹೊಸ ಪ್ರಾಥಮಿಕ ಆರೋಗ್ಯ ಕೇಂದ್ರಗಳನ್ನು ಮಂಜೂರು ಮಾಡುವ ಉದ್ದೇಶ ಸರ್ಕಾರಕ್ಕೆ ಇದೆಯೇ; | ಆರ್ಥಿಕ ವಿಸ್ತರತೆ ಇಲ್ಲದಿರುವುದರಿಂದ ಪ್ರಾಥಮಿಕ ಆರೋಗ್ಯ ಕೇಂದ್ರಗಳನ್ನು ಪ್ರಾರಂಭಿಸುವ ಪ್ರಸ್ತಾವನೆಗಳನ್ನು ಸದ್ಯಕ್ಕೆ ತಡೆಹಿಡಿಯಲಾಗಿದೆ. |
| ಊ) | ಇದ್ದಲ್ಲಿ, ಯಾವಾಗ ಮಂಜೂರು ಮಾಡಲಾಗುವುದು; | |
| ಋ) | ಹಾಗಿದ್ದಲ್ಲಿ, ಯಾವಾಗ ಪ್ರಾರಂಭ ಮಾಡಿ ಸಾರ್ವಜನಿಕರಿಗೆ ಸೌಲಭ್ಯ ಕಲ್ಪಿಸಲಾಗುವುದು (ಸಂಪೂರ್ಣ ವಿವರ ನೀಡುವುದು) ? | |

**ಸಂಖ್ಯೆ: ಆಕುಕ 24 ಎಸ್.ಟಿ.ಕ್ಯೂ 2021.**

**(ಡಾ|| ಕೆ.ಸುಧಾಕರ್)**
ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಹಾಗೂ
ವೈದ್ಯಕೀಯ ಶಿಕ್ಷಣ ಸಚಿವರು



# ಕರ್ನಾಟಕ ವಿಧಾನ ಸಭೆ

| | | | |
|---|---|---|---|
| 1. | ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ | : | 2646 |
| 2. | ಸದಸ್ಯರ ಹೆಸರು | : | ಶ್ರೀ ನಾಗೇಂದ್ರ ಎಲ್. (ಚಾಮರಾಜ) |
| 3. | ಉತ್ತರಿಸಬೇಕಾದ ದಿನಾಂಕ | : | 18.03.2021 |
| 4. | ಉತ್ತರಿಸಬೇಕಾದ ಸಚಿವರು | : | ವೈದ್ಯಕೀಯ ಶಿಕ್ಷಣ ಸಚಿವರು |

| ಕ್ರ. ಸಂ | ಪ್ರಶ್ನೆಗಳು | ಉತ್ತರಗಳು |
|---|---|---|
| ಅ) | ಕಳೆದ 03 ವರ್ಷಗಳಲ್ಲಿ ಮೈಸೂರು ವೈದ್ಯಕೀಯ ಕಾಲೇಜು ಮತ್ತು ಸಂಶೋಧನಾ ಸಂಸ್ಥೆಗೆ ಎಷ್ಟು ಅನುದಾನ ಬಿಡುಗಡೆ ಮಾಡಲಾಗಿದೆ;(ವಿವರ ಒದಗಿಸುವುದು) | ಕಳೆದ 03 ವರ್ಷಗಳಲ್ಲಿ ಮೈಸೂರು ವೈದ್ಯಕೀಯ ಕಾಲೇಜು ಮತ್ತು ಸಂಶೋಧನಾ ಸಂಸ್ಥೆಗೆ ಬಿಡುಗಡೆ ಮಾಡಲಾದ ಅನುದಾನದ ವಿವರಗಳ ಪಟ್ಟಿಯ **ಅನುಬಂಧವನ್ನು** ಲಗತ್ತಿಸಿದೆ. |
| ಆ) | ಸದರಿ ಸಂಸ್ಥೆಗೆ ಸೇರಿದ ಆಸ್ಪತ್ರೆ ಕಟ್ಟಡಗಳ ದುರಸ್ತಿ ಮತ್ತು ನವೀಕರಣ ಕಾಮಗಾರಿಗಳು ಆಗಬೇಕಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; ಬಂದಿದ್ದಲ್ಲಿ, ಆ ಬಗ್ಗೆ ಕೈಗೊಂಡಿರುವ ಕ್ರಮಗಳೇನು ; | ಬಂದಿದೆ.<br><br>ಸದರಿ ಸಂಸ್ಥೆಗೆ ಸೇರಿದ ಆಸ್ಪತ್ರೆ ಕಟ್ಟಡಗಳ ದುರಸ್ತಿ ಮತ್ತು ನವೀಕರಣ ಕಾಮಗಾರಿಗಳ ಪ್ರಸ್ತಾವನೆಗಳನ್ನು ಅಗತ್ಯತೆ ಮತ್ತು ಅನುದಾನದ ಲಭ್ಯತೆಯ ಅನುಸಾರ ಪರಿಶೀಲಿಸಲಾಗುತ್ತಿದೆ. ಅನುಮೋದಿತ ಕಾಮಗಾರಿಗಳು ಪ್ರಗತಿಯಲ್ಲಿದ್ದು ವಿವರಗಳನ್ನು ಅನುಬಂಧದಲ್ಲಿ ವಿವರಿಸಿದೆ. |
| ಇ) | ಅಭಿವೃದ್ಧಿ ಕಾಮಗಾರಿಗಳು ವಿಳಂಬವಾಗುತ್ತಿರಲು ಕಾರಣವೇನು? (ವಿವರ ನೀಡುವುದು) | |

**ಸಂಖ್ಯೆ:** ಎಂಇಡಿ 186 ಎಂಪಿಎಸ್ 2021

(ಡಾ|| ಕೆ. ಸುಧಾಕರ್)
ವೈದ್ಯಕೀಯ ಶಿಕ್ಷಣ ಸಚಿವರು

# ಅನುಬಂಧ

**ಕಳೆದ ಮೂರು ವರ್ಷಗಳಲ್ಲಿ ಮೈಸೂರು ವೈದ್ಯಕೀಯ ಕಾಲೇಜು ಮತ್ತು ಸಂಶೋಧನಾ ಸಂಸ್ಥೆಗೆ ಬಿಡುಗಡೆ ಮಾಡಲಾದ ಅನುದಾನದ ವಿವರ.**

| Sl.No | Head of Account | 2017-18 | 2018-19 | 2019-20 | 2020-21 Upto Feb 2021) |
|---|---|---|---|---|---|
| 1 | 2210-05-105-1-44 | | | | |
| | 101-salary | 9624.00 | 13044.00 | 10056.00 | 12004.11 |
| | 103-General | 3172.00 | 3163.00 | 1645.00 | 2979.14 |
| | 115-Outsource | | 1520.00 | 1654.00 | 1378.30 |
| | 118-Pension | 3.00 | 4.00 | 4.00 | 79.75 |
| 2 | 2210-05-105-1-44-422 SCP | 20.00 | 25.00 | 26.00 | 183.31 |
| 3 | 2210-05-105-1-44-422 TSP | 10.00 | 10.00 | 10.00 | 45.81 |
| 4 | 4210-01-110-1-13-139 Trauma Care - Building | 2318.00 | | | |
| | Equipment& Furniture | 1800.00 | 899.06 | | |
| 5 | 4210-03-105-1-09-059 a)Up gradation of MMCRI | | 4000.00 | 5237.00 | |
| | b) Construction of labour Ward in Cheluvamba Hospital | | 58.07 | | |
| | c)K.R Hospital 04 works | | 123.00 | | |
| 6 | 4210-03-105-109-422 SCP Building | 378.00 | 742.00 | 987.00 | |
| 7 | 4210-03-105-109-422 TSP Building | 151.00 | 208.00 | 277.00 | |
| 8 | 4210-01-110-1-17-139 Super Speciality Hospital | 2583.33 | 1400.00 | 5970.92 | 1500.00 |
| 9 | ಮುಖ್ಯ ಮಂತ್ರಿಗಳ ಮೂಲಭೂತ ಸೌಕರ್ಯಗಳ ಅಭಿವೃದ್ಧಿಯೋಜನೆ | 200.00 | | | |
| 10 | Covid 19 | | | 21.90 | |
| 11 | ಮುಖ್ಯ ಮಂತ್ರಿಗಳ ಪರಿಹಾರ ನಿಧಿಯಿಂದ ಕೋವಿಡ್-19 ಗುತ್ತಿಗೆ/ಹೊರಗುತ್ತಿಗೆ ಸಿಬ್ಬಂದಿಗಳ ವೇತನ ಪಾವತಿಗೆ | | | | 29.40 |

# ಕರ್ನಾಟಕ ವಿಧಾನಸಭೆ

| | | |
|---|---|---|
| **ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ** | : | 2605 |
| **ಮಾನ್ಯ ಸದಸ್ಯರ ಹೆಸರು** | : | ಶ್ರೀ ಲಾಲಾಜಿ ಆರ್ ಮೆಂಡನ್ (ಕಾಪು) |
| **ಉತ್ತರಿಸುವ ಸಚಿವರು** | : | ಪ್ರವಾಸೋದ್ಯಮ, ಪರಿಸರ ಹಾಗೂ ಜೀವಿಶಾಸ್ತ್ರ, ಸಚಿವರು |
| **ಉತ್ತರಿಸುವ ದಿನಾಂಕ** | : | 18-03-2021 |

*******

| ಕ್ರ. ಸಂ. | ಪ್ರಶ್ನೆ | ಉತ್ತರ |
|---|---|---|
| ಅ) | ಕಾಪು ವಿಧಾನ ಸಭಾ ಕ್ಷೇತ್ರ ವ್ಯಾಪ್ತಿಯಲ್ಲಿ ಕೇಂದ್ರ ಸರ್ಕಾರದ ಯೋಜನೆಯಡಿ ಅಭಿವೃದ್ಧಿಪಡಿಸಲಾದ ಅಂತರಾಷ್ಟ್ರೀಯ ಮಾನ್ಯತೆ ಪಡೆದಿರುವ ಪಡುಬಿದ್ರೆ ಬ್ಲ್ಯೂಫ್ಲ್ಯಾಗ್ ಬೀಚ್ ಸಾರ್ವಜನಿಕರಿಗೆ ಮುಕ್ತವಾಗಿದ್ದು, ಬೀಚ್ ಗೆ ಸಂಪರ್ಕಿಸುವ ರಸ್ತೆಯು ಅತ್ಯಂತ ಕಿರಿದಾಗಿರುವುದರ ಜೊತೆಗೆ ಪಾರ್ಕಿಂಗ್ ಸೇರಿದಂತೆ ಇನ್ನಿತರ ಅಗತ್ಯ ಮೂಲಭೂತ ಸೌಕರ್ಯಗಳ ಕೊರತೆಯಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; | ಬಂದಿದೆ. |
| ಆ) | ಬಂದಿದ್ದಲ್ಲಿ, ಪಡುಬಿದ್ರಿ ಬ್ಲ್ಯೂಫ್ಲ್ಯಾಗ್ ಬೀಚ್ ನ ಮೂಲಸೌಕರ್ಯ ಅಭಿವೃದ್ಧಿಗೆ ಅಗತ್ಯವಾದ ಬೀಚ್ ಸಂಪರ್ಕ ರಸ್ತೆ, ಪಾರ್ಕಿಂಗ್ ವ್ಯವಸ್ಥೆ ಸೇರಿದಂತೆ ಅಗತ್ಯ ಮೂಲಭೂತ ಸೌಕರ್ಯ ಒದಗಿಸಲು ಕ್ರಮ ಕೈಗೊಳ್ಳಲಾಗುವುದೇ; ಕ್ರಮ ಕೈಗೊಳ್ಳುವುದಾದಲ್ಲಿ ಅವುಗಳಿಗೆ ಯಾವಾಗ ಅನುದಾನ ಮಂಜೂರು ಮಾಡಲಾಗುವುದು? | ಬ್ಲೂ ಫ್ಲಾಗ್ ಸರ್ಟಿಫಿಕೇಶನ್ ಯೋಜನೆ ಸಂಬಂಧ ಉಡುಪಿ ಜಿಲ್ಲೆಯ ಪಡುಬಿದ್ರೆ ಬೀಚ್ ನ ಎಂಡ್ ಪಾಯಿಂಟ್ ವ್ಯಾಪ್ತಿಯಲ್ಲಿ ಕೆಲವೊಂದು ಕಾಮಗಾರಿಗಳನ್ನು ರೂ.268.50ಲಕ್ಷಗಳ ವೆಚ್ಚದಲ್ಲಿ ಕೈಗೊಳ್ಳಲು ದಿ:11.01.2019ರ ಆದೇಶದಲ್ಲಿ ಮಂಜೂರಾತಿಯನ್ನು ನೀಡಲಾಗಿರುತ್ತದೆ.<br>ಉಡುಪಿ ಜಿಲ್ಲೆಯ ಕಾಪು ತಾಲ್ಲೂಕಿನಲ್ಲಿ ಅಂತರರಾಷ್ಟ್ರೀಯ ಬ್ಲೂ ಫ್ಲಾಗ್ ಪ್ರಮಾಣೀತ ಕಡಲ ತೀರವನ್ನು ಪ್ರವಾಸಿ ಆಕರ್ಷಣಿಯ ತಾಣವನ್ನಾಗಿ ಅಭಿವೃದ್ಧಿಪಡಿಸಲು ಸುಮಾರು 21 ಹೆಚ್ಚುವರಿ ಕಾಮಗಾರಿಗಳಿಗೆ ರೂ.651.25ಲಕ್ಷಗಳು ವೆಚ್ಚವಾಗಲಿದ್ದು, ಸದರಿ ಪ್ರಸ್ತಾವನೆ ಪರಿಶೀಲನೆಯಲ್ಲಿದೆ. |

ಸಂಖ್ಯೆ: ಟಿಒಆರ್ 59 ಟಿಡಿವಿ 2021

(ಸಿ. ಪಿ. ಯೋಗೇಶ್ವರ)
ಪ್ರವಾಸೋದ್ಯಮ ಮತ್ತು ಪರಿಸರ
ಹಾಗೂ ಜೀವಿಶಾಸ್ತ್ರ, ಸಚಿವರು

# ಕರ್ನಾಟಕ ವಿಧಾನ ಸಭೆ

1 ಮಾನ್ಯ ಸದಸ್ಯರ ಹೆಸರು : ಶ್ರೀ ರಘುಮೂರ್ತಿ. ಟಿ (ಚಳ್ಳಕೆರೆ)

2 ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 2038

3 ಉತ್ತರಿಸಬೇಕಾದ ದಿನಾಂಕ : 18-03-2021

4 ಉತ್ತರಿಸಬೇಕಾದವರು : ಮಾನ್ಯ ಕಾರ್ಮಿಕ ಸಚಿವರು

| ಕ್ರ. ಸಂ. | ಪ್ರಶ್ನೆ | ಉತ್ತರ |
|---|---|---|
| (ಅ) | ಚಿತ್ರದುರ್ಗ ಜಿಲ್ಲೆ ಚಳ್ಳಕೆರೆ ವಿಧಾನ ಸಭಾ ಕ್ಷೇತ್ರ ವ್ಯಾಪ್ತಿಯಲ್ಲಿ ವಿವಿಧ ಕಡೆ ಕೆಲಸ ನಿರ್ವಹಿಸುವ ನೊಂದಾಯಿತ ಕಾರ್ಮಿಕರೆಷ್ಟು; ( ವಿವರ ನೀಡುವುದು) | **ಕಾರ್ಮಿಕ ಇಲಾಖೆಯ ಅಧೀನದಲ್ಲಿ ಬರುವ ಮಂಡಳಿಗಳಲ್ಲಿ ನೋಂದಾಯಿತರಾಗಿರುವ ಕಾರ್ಮಿಕರ ವಿವರ ಕೆಳಕಂಡಂತಿದೆ;**<br><br>**1. ಕರ್ನಾಟಕ ಕಟ್ಟಡ ಮತ್ತು ಇತರೆ ನಿರ್ಮಾಣ ಕಾರ್ಮಿಕರ ಕಲ್ಯಾಣ ಮಂಡಳಿ:-**<br><br>ಈ ಮಂಡಳಿಯ ವತಿಯಿಂದ ಚಿತ್ರದುರ್ಗ ಜಿಲ್ಲೆಯ ಚಳ್ಳಕೆರೆ ವಿಧಾನಸಭಾ ಕ್ಷೇತ್ರ ವ್ಯಾಪ್ತಿಯಲ್ಲಿ 2007 ರಿಂದ ಫೆಬ್ರುವರಿ, 2021 ರವರೆಗೆ 11,187 ಕಟ್ಟಡ ಮತ್ತು ಇತರೆ ನಿರ್ಮಾಣ ಕಾರ್ಮಿಕರು ಮಂಡಳಿಯ ಫಲಾನುಭವಿಗಳಾಗಿ ನೋಂದಣಿ ಮಾಡಲಾಗಿರುತ್ತದೆ.<br><br>**2. ಕರ್ನಾಟಕ ರಾಜ್ಯ ಅಸಂಘಟಿತ ಕಾರ್ಮಿಕರ ಸಾಮಾಜಿಕ ಭದ್ರತಾ ಮಂಡಳಿ;**<br><br>ಈ ಮಂಡಳಿಯಿಂದ ಜಾರಿಗೊಳಿಸುತ್ತಿರುವ ಸಾಮಾಜಿಕ ಭದ್ರತಾ ಯೋಜನೆಗಳಡಿ ವಿಧಾನ ಸಭಾ ಕ್ಷೇತ್ರವಾರು ಅಸಂಘಟಿತ ಕಾರ್ಮಿಕರ ನೋಂದಣಿಯ ಮಾಹಿತಿ ಲಭ್ಯವಿರುವುದಿಲ್ಲ. ಆದರೆ, ತಾಲ್ಲೂಕುವಾರು ಮಾಹಿತಿ ಲಭ್ಯವಿದ್ದು, ಚಿತ್ರದುರ್ಗ ಜಿಲ್ಲೆ ಚಳ್ಳಕೆರೆ ತಾಲ್ಲೂಕಿಗೆ ಸಂಬಂಧಿಸಿದಂತೆ ಮಂಡಳಿಯು ಜಾರಿಗೊಳಿಸುತ್ತಿರುವ "ಅಂಬೇಡ್ಕರ್ ಕಾರ್ಮಿಕ ಸಹಾಯ ಹಸ್ತ ಯೋಜನೆ" ಯಡಿ, 11 ವರ್ಗಗಳಾದ ಹಮಾಲರು, ಗೃಹಕಾರ್ಮಿಕರು, ಚಿಂದಿ ಆಯುವವರು, ಟೈಲರ್‌ಗಳು, ಮೆಕ್ಯಾನಿಕ್ಸ್, ಅಗಸರು, ಅಕ್ಕಸಾಲಿಗರು, ಕಮ್ಮಾರರು, ಕುಂಬಾರರು, ಕ್ಷೌರಿಕರು ಹಾಗೂ ಭಟ್ಟಿ ಕಾರ್ಮಿಕ ವೃತ್ತಿಯ 1780 ಅಸಂಘಟಿತ ಕಾರ್ಮಿಕರನ್ನು ನೋಂದಾಯಿಸಲಾಗಿದೆ. |

| | | 3. **ಕರ್ನಾಟಕ ಕಾರ್ಮಿಕ ಕಲ್ಯಾಣ ಮಂಡಳಿ;**<br>ಈ ಮಂಡಳಿಯಲ್ಲಿ ನೊಂದಣಿ ವ್ಯವಸ್ಥೆ ಇರುವುದಿಲ್ಲ. ಚಿತ್ರದುರ್ಗ ಜಿಲ್ಲೆಯ ಚಳ್ಳಕೆರೆ ವಿಧಾನಸಭಾ ಕ್ಷೇತ್ರದಲ್ಲಿ 5 ಸಂಸ್ಥೆಗಳಿಂದ 245 ಸಂಘಟಿತ ಕಾರ್ಮಿಕರು ಕಾರ್ಮಿಕ ಕಲ್ಯಾಣ ಮಂಡಳಿಯ ವ್ಯಾಪ್ತಿಗೆ ಒಳಪಡುತ್ತಾರೆ. |
|---|---|---|
| (ಆ) | ವಿಮಾ ಕಾರ್ಡುಗಳನ್ನು ಹೊಂದಿರುವ ಕಾರ್ಮಿಕರ ವಿಮಾದಾರರು ಹಾಗೂ ಅವರ ಅವಲಂಬಿತ ಕುಟುಂಬಗಳ ಆರೋಗ್ಯದ ಹಿತದೃಷ್ಠಿಯಿಂದ ವಿಮಾ ಕಾರ್ಮಿಕ ಚಿಕಿತ್ಸಾಲಯವು 2006 ರವರೆಗೆ ಚಳ್ಳಕೆರೆಯಲ್ಲಿ ಅಸ್ತಿತ್ವದಲ್ಲಿದ್ದದ್ದು ಸರ್ಕಾರದ ಗಮನಕ್ಕೆ ಬಂದಿದೆಯೇ; | ಹೌದು. ಸರ್ಕಾರದ ಗಮನಕ್ಕೆ ಬಂದಿರುತ್ತದೆ. ಸರ್ಕಾರದ ಆದೇಶ ಸಂಖ್ಯೆ: ಕಾಇ 98 ಎಲ್ಎಸ್ಐ 2005 ದಿ: 02-05-2005 ರಲ್ಲಿ ಕಾ.ರಾ.ವಿ. ಚಿಕಿತ್ಸಾಲಯ, ಚಳ್ಳಕೆರೆಯನ್ನು ಒಳಗೊಂಡಂತೆ ಒಟ್ಟು 06 ಕಾರಾವಿ. ಚಿಕಿತ್ಸಾಲಯಗಳನ್ನು ಐ.ಎಂ.ಪಿ. ಮಾದರಿ ಚಿಕಿತ್ಸಾಲಯಗಳನ್ನಾಗಿ ಪರಿವರ್ತಿಸುವವರೆಗೆ ಮುಂದುವರೆಸುವಂತೆ ಆದೇಶಿಸಿದೆ. (ಪ್ರತಿ ಲಗತ್ತಿಸಿದೆ) |
| (ಇ) | ಬಂದಿದ್ದರೆ ಕಾರ್ಮಿಕರು / ಅವಲಂಬಿತರು ವೈದ್ಯಕೀಯ ಚಿಕಿತ್ಸೆ ಪಡೆಯಲು ದೂರದ ದಾವಣಗೆರೆ ಹಾಗೂ ಬೆಂಗಳೂರಿಗೆ ಹೋಗಿ ಚಿಕಿತ್ಸೆ ಪಡೆಯುವುದು ತುಂಬಾ ಕಷ್ಟಕರವಾಗುತ್ತಿದ್ದು ಈ ಸಮಸ್ಯೆ ನಿವಾರಿಸಲು ಸರ್ಕಾರವು ಕೈಗೊಂಡ ಕ್ರಮಗಳೇನು; (ಪೂರ್ಣ ವಿವರ ನೀಡುವುದು) | ವಿಮಾದಾರರು ಹಾಗೂ ಅವರ ಕುಟುಂಬದವರ ಚಿಕಿತ್ಸೆಗಾಗಿ ಹೊಂದಾಣಿಕೆ ಮಾಡಿಕೊಂಡಿರುವ ತಿರುಮಲ ಹಾಸ್ಪಿಟಲ್, ಚಳ್ಳಕೆರೆ ಇಲ್ಲಿಗೆ ಉಲ್ಲೇಖಿಸಲಾಗುತ್ತಿದೆ. ಹಾಗೂ ಖಾಸಗಿ ವಿಮಾ ವೈದ್ಯಕೀಯ ವೃತ್ತಿಗಾರರು (ಐ. ಎಂ. ಪಿ. ) ಮೂಲಕವೂ ಸಹ ಚಿಕಿತ್ಸೆ ಒದಗಿಸಲಾಗುತ್ತಿದೆ. |
| (ಈ) | ವೈದ್ಯಕೀಯ ಚಿಕಿತ್ಸೆ ಪಡೆಯಲು ವಿಮಾದಾಡ್ರುಗಳನ್ನು ಹೊಂದಿರುವ ವಿವಿಧ ಕೆಲಸ ನಿರ್ವಹಿಸುತ್ತಿರುವ ಕಾರ್ಮಿಕರ ಅವಲಂಬಿತರಿಗೆ ಮತ್ತು ಕಾರ್ಮಿಕರಿಗೆ ಅನುಕೂಲವಾಗುವಂತೆ ಚಳ್ಳಕೆರೆ ನಗರದಲ್ಲಿ ಈ ಹಿಂದೆ ಕಾರ್ಯ ನಿರ್ವಹಿಸುತ್ತಿದ್ದ ಕಾರ್ಮಿಕ ವಿಮಾ ಚಿಕಿತ್ಸಾಲಯ ಪ್ರಾರಂಭ ಮಾಡಲು ಸರ್ಕಾರವು ಕೈಗೊಳ್ಳುವ ಕ್ರಮದ ಪೂರ್ಣ ಮಾಹಿತಿ ನೀಡುವುದು? | ಕಾರಾವಿ. ನಿಗಮದ ಮಾರ್ಗಸೂಚಿ ಅನುಸಾರ ಚಿಕಿತ್ಸಾಲಯವನ್ನು ಪ್ರಾರಂಭಿಸಲು ಕನಿಷ್ಠ 3000 ವಿಮಾ ಕಾರ್ಡುಗಳ ಅವಶ್ಯಕತೆ ಇರುತ್ತದೆ. |

ಕಡತ ಸಂಖ್ಯೆ: LD-LSI/64/2021

(ಅರಬ್ಯೆಲ್ ಶಿವರಾಂ ಹೆಬ್ಬಾರ್)
ಕಾರ್ಮಿಕ ಸಚಿವರು

## ಕಾರ್ಮಿಕ ಸಚಿವಾಲಯ

**ವಿಷಯ:** ಕಾರಾವಿ ಯೋಜನೆ (ವೈ) ಸೇವೆಗಳು ಇಲಾಖೆಯ ಪುನರ್‌ಸಂಘಟನೆ ಬಗ್ಗೆ.

**ಓದಲಾಗಿದೆ:**
1. ಉಪ ವೈದ್ಯಕೀಯ ಆಯುಕ್ತರು, ಕಾರಾವಿ ನಿಗಮ, ನವದೆಹಲಿ ಇವರ ಪತ್ರ ಸಂಖ್ಯೆಯು-13:12:6:2001-ಎಂಡಿ-1ಪಿಬಿಆರ್, ದಿನಾಂಕ:15-10-2005.
2. ನಿರ್ದೇಶಕರು, ಕಾರಾವಿ ಯೋ (ವೈ) ಸೇವೆಗಳು ಇವರ ಪತ್ರ ಸಂಖ್ಯೆ:ಅಭಿವೃದ್ಧಿ:47:2004-05, ದಿ:11-05-2004,11-06-2004, 31-01-2005,18-02-2005, ಮತ್ತು 25-02-2005.
3. ಸರ್ಕಾರದ ಪತ್ರ ಸಂಖ್ಯೆ:ಕಾಇ 71 ಎಲ್‌ಎಸ್‌ಬಿ 2004, ದಿನಾಂಕ:11-08-2004, ದಿ.28-3-05, 5-4-05.
4. ಸರ್ಕಾರಿ ಆದೇಶ ಸಂಖ್ಯೆ:ಕಾಇ 71ಎಲ್‌ಎಸ್‌ಬಿ 2004, ದಿನಾಂಕ:23-09-2004.

**ಪ್ರಸ್ತಾವನೆ:**

ಉಪ ವೈದ್ಯಕೀಯ ಆಯುಕ್ತರು, ಕಾರಾವಿ ನಿಗಮ, ನವದೆಹಲಿ ಇವರು ಮೇಲೆ (1)ರಲ್ಲಿ ಓದಲಾದ ತಮ್ಮ ಪತ್ರದಲ್ಲಿ ಈ ಕೆಳಕಂಡ ಮಾರ್ಗದರ್ಶಿ ಸೂತ್ರಗಳನುಸಾರ ರಾಜ್ಯದಲ್ಲಿನ ಕಾರಾವಿ ಚಿಕಿತ್ಸಾಲಯಗಳನ್ನು ಪುನರ್ ಸಂಘಟಿಸುವ ಬಗ್ಗೆ ಪರಿಶೀಲಿಸಿ ಸೂಕ್ತ ಪ್ರಸ್ತಾವನೆಯನ್ನು ಸಲ್ಲಿಸುವಂತೆ ತಿಳಿಸಿದ್ದರು.

1. ಮೂರು ಸಾವಿರಕ್ಕಿಂತ ಕಡಿಮೆ ವಿಮಾದಾರರನ್ನು ಹೊಂದಿರುವ ಹಾಗೂ ಬಾಡಿಗೆ ಕಟ್ಟಡದಲ್ಲಿ ಕಾರ್ಯನಿರ್ವಹಿಸುತ್ತಿರುವ ಚಿಕಿತ್ಸಾಲಯಗಳ ಬಗ್ಗೆ ಪರಿಶೀಲಿಸಿ ಕೆಳಕಂಡಂತೆ ಕ್ರಮಗಳನ್ನು ತೆಗೆದುಕೊಳ್ಳುವುದು.
   ಅ) ಮತ್ತೊಂದು ಚಿಕಿತ್ಸಾಲಯವು ಸೂಕ್ತವಾದ ಅಂತರದೊಳಗಿದ್ದು ಸುಲಭವಾಗಿ ಅಲ್ಲಿಗೆ ಹೋಗಲು ಸಾಧ್ಯವಿದ್ದಲ್ಲಿ ಅಂತಹ ಚಿಕಿತ್ಸಾಲಯಗಳೊಂದಿಗೆ ವಿಲೀನಗೊಳಿಸುವ ಬಗ್ಗೆ ಪರಿಶೀಲಿಸುವುದು.
   ಆ) ಚಿಕಿತ್ಸಾಲಯವನ್ನು ವಿಲೀನಗೊಳಿಸುವುದು ಕಾರ್ಯಸಾಧ್ಯವಾಗದಿದ್ದಲ್ಲಿ ಬಾಡಿಗೆ ಕಟ್ಟಡದಲ್ಲಿ ನಡೆಯುತ್ತಿರುವ ಚಿಕಿತ್ಸಾಲಯವನ್ನು ಮುಚ್ಚುವುದು ಹಾಗೂ ಆ ಪ್ರದೇಶದ ಫಲಾನುಭವಿಗಳಿಗಾಗಿ ಐಎಮ್‌ಪಿ ಪದ್ಧತಿಯನ್ನು ಜಾರಿಗೆ ತರುವುದು.
2. ಅಂತಹ ಚಿಕಿತ್ಸಾಲಯಗಳು ಸ್ವಂತ ಕಟ್ಟಡದಲ್ಲಿ ಕಾರ್ಯನಿರ್ವಹಿಸುತ್ತಿದ್ದಲ್ಲಿ ಹಾಗೂ 2 ಅಥವಾ 3 ಚಿಕಿತ್ಸಾಲಯಗಳು ಕಾರಾವಿ ನಿಗಮದ ಕಟ್ಟಡದಲ್ಲಿ ಕಾರ್ಯ ನಿರ್ವಹಿಸುತ್ತಿದ್ದಲ್ಲಿ ಈ ಚಿಕಿತ್ಸಾಲಯಗಳನ್ನು ಒಂದು ಚಿಕಿತ್ಸಾಲಯವಾಗಿ ವಿಲೀನಗೊಳಿಸಿ ಸಿಬ್ಬಂದಿಯನ್ನು ಸೂಕ್ತ ರೀತಿಯಲ್ಲಿ ಹಂಚಿಕೆ ಮಾಡುವುದು. ಚಿಕಿತ್ಸಾಲಯಗಳನ್ನು ಮುಚ್ಚಿದ /ವಿಲೀನಗೊಳಿಸಿದ ನಂತರ ಹೆಚ್ಚುವರಿಯಾಗುಳಿಯುವ ಸಿಬ್ಬಂದಿಯ ಸೇವೆಗಳನ್ನು ರಾಜ್ಯ ಸರ್ಕಾರ ನಡೆಸುತ್ತಿರುವ ಆಸ್ಪತ್ರೆಗಳಲ್ಲಿ ಸಿಬ್ಬಂದಿ ಕಡಿಮೆ ಇರುವ ಸ್ಥಳಗಳಿಗೆ ಉಪಯೋಗಿಸಿಕೊಳ್ಳುವುದು.

ಕಾರಾವಿ ನಿಗಮದ ಮಾರ್ಗದರ್ಶಿ ಸೂತ್ರಗಳ ಆಧಾರದ ಮೇಲೆ ನಿರ್ದೇಶಕರು, ಕಾರಾವಿ ಯೋ (ವೈ) ಸೇವೆಗಳು ರವರು ಮೇಲೆ (2)ರಲ್ಲಿ ಓದಲಾದ ದಿನಾಂಕ:11-05-2004ರ ತಮ್ಮ ಪತ್ರದಲ್ಲಿ ಅತೀ ಕನಿಷ್ಠ ಸಂಖ್ಯೆಯ ವಿಮಾದಾರರನ್ನು ಹೊಂದಿದ್ದ 08 ಕಾರಾವಿ ಚಿಕಿತ್ಸಾಲಯಗಳನ್ನು ಮುಚ್ಚಿ ಅಲ್ಲಿನ ವಿಮಾದಾರರಿಗೆ ಐಎಂಪಿ ಪದ್ಧತಿಯ ಮೂಲಕ ವೈದ್ಯಕೀಯ ಸೌಲಭ್ಯವನ್ನು ವಿಸ್ತರಿಸಲು ಸಲ್ಲಿಸಿದ್ದ ಪ್ರಸ್ತಾವನೆಯನ್ನು ಪರಿಗಣಿಸಿ ಅಂತಹ ಕಾರಾವಿ ಚಿಕಿತ್ಸಾಲಯಗಳನ್ನು ಮುಚ್ಚಿ ಇಲ್ಲಿನ ವಿಮಾದಾರರು ಹಾಗೂ ಅವರ ಕುಟುಂಬದವರಿಗೆ ಐಎಂಪಿ ಪದ್ಧತಿ ಮೂಲಕ ವೈದ್ಯಕೀಯ ಸೌಲಭ್ಯವನ್ನು ವಿಸ್ತರಿಸಲು ಮೇಲೆ (3)ರಲ್ಲಿ ಓದಲಾದ ದಿ:11-08-2004ರ ಸರ್ಕಾರಿ ಪತ್ರದಲ್ಲಿ ಸರ್ಕಾರದ ಮಂಜೂರಾತಿ ನೀಡಲಾಗಿದೆ. ಅಲ್ಲದೆ ನಿರ್ದೇಶಕರು, ಕಾರಾವಿ ಯೋ (ವೈ) ಸೇವೆಗಳು ರವರು ದಿನಾಂಕ:11-06-2004ರ ತಮ್ಮ ಪತ್ರದಲ್ಲಿ ಸಲ್ಲಿಸಿದ್ದ 3000 ಕ್ಕಿಂತ ಕಡಿಮೆ ವಿಮಾದಾರರಿರುವ ಹಾಗೂ ದಿನವಹಿ ಹಾಜರಾತಿ ಅತೀ ಕನಿಷ್ಠವಾಗಿರುವ 23 ಕಾರಾವಿ ಚಿಕಿತ್ಸಾಲಯಗಳನ್ನು ಮುಚ್ಚಿ ಸಮೀಪದಲ್ಲಿರುವ ಕಾರಾವಿ ಚಿಕಿತ್ಸಾಲಯಗಳೊಂದಿಗೆ ವಿಲೀನಗೊಳಿಸುವ ಪ್ರಸ್ತಾವನೆಯನ್ನು ಪರಿಶೀಲಿಸಿ ಮೇಲೆ (4)ರಲ್ಲಿ ಓದಲಾದ ಸರ್ಕಾರಿ ಆದೇಶಕ್ಕೆ ಲಗತ್ತಿಸಲಾದ ಅನುಬಂಧದಲ್ಲಿರುವ 23 ಚಿಕಿತ್ಸಾಲಯಗಳನ್ನು ಅವುಗಳ ಮುಂದೆ ನಮೂದಿಸಲಾದ ಚಿಕಿತ್ಸಾಲಯಗಳೊಂದಿಗೆ ವಿಲೀನಗೊಳಿಸಲು ಆದೇಶಿಸಲಾಗಿದೆ. ಆನಂತರ ಮೇಲೆ (3)ರಲ್ಲಿ ಓದಲಾದ ದಿನಾಂಕ:28-03-2005ರ ಸರ್ಕಾರಿ ಪತ್ರದಲ್ಲಿ ಹುಲಿಕೋಟೆ, ಮಣಿಪಾಲ್, ರಾಮನಗರ, ಚಿಕಿತ್ಸಾಲಯಗಳನ್ನು ತಾತ್ಕಾಲಿಕವಾಗಿ ಮುಂದುವರಿಸಲು ಹಾಗೂ ದಿನಾಂಕ: 05-04-2005ರ ಸರ್ಕಾರಿ ಪತ್ರದಲ್ಲಿ ಬಾಗಲಕೋಟೆ ಹಾಗೂ ಹುಣಸೂರು ಚಿಕಿತ್ಸಾಲಯಗಳನ್ನು ಕನಿಷ್ಠ 06 ತಿಂಗಳ ಅವಧಿಯವರೆಗೆ ಮುಂದುವರಿಸಲು ಹಾಗೂ ಈ ಅವಧಿಯಲ್ಲಿ ವಿಮಾದಾರರ ಸಂಖ್ಯೆ ಹೆಚ್ಚಾಗದಿದ್ದಲ್ಲಿ ಐಎಂಪಿ ಪದ್ಧತಿಯನ್ನು ಅಳವಡಿಸಲು ಸರ್ಕಾರದ ಮಂಜೂರಾತಿ ನೀಡಲಾಗಿದೆ.

ನಿರ್ದೇಶಕರು, ಕಾರಾವಿ ಯೋ (ವೈ) ಸೇವೆಗಳು ರವರು ಮೇಲೆ (2)ರಲ್ಲಿ ಓದಲಾದ ದಿನಾಂಕ:18-02-2005ರ ತಮ್ಮ ಪತ್ರದಲ್ಲಿ ಕಾರಾವಿ ಆಸ್ಪತ್ರೆ, ರಾಜಾಜಿನಗರ, ಬೆಂಗಳೂರು ಇದನ್ನು ಹೊರತುಪಡಿಸಿ ಇಲಾಖೆಯಲ್ಲಿನ ಒಟ್ಟಾರೆ ಹುದ್ದೆಗಳ ಮರುವಿಂಗಡಣೆಯ ಬಗ್ಗೆ ವಿವರವಾದ ಪ್ರಸ್ತಾವನೆಯನ್ನು ಸಲ್ಲಿಸಿದ್ದಾರೆ. ನಿರ್ದೇಶಕರು ತಮ್ಮ ಪ್ರಸ್ತಾವನೆಯಲ್ಲಿ ಒಟ್ಟಾರೆ 26 ಕಾರಾವಿ ಚಿಕಿತ್ಸಾಲಯಗಳನ್ನು ವಿಲೀನಗೊಳಿಸಿದ/ಮುಚ್ಚಿದ ನಂತರ ರಾಜ್ಯದಲ್ಲಿ 96 ಕಾರಾವಿ ಚಿಕಿತ್ಸಾಲಯಗಳು ಕಾರ್ಯನಿರ್ವಹಿಸಲಿರುವುದರಿಂದ ಇಲಾಖೆಯಲ್ಲಿ ಕಾರ್ಯನಿರ್ವಹಿಸುತ್ತಿರುವ ಸಿಬ್ಬಂದಿಗಳನ್ನು ಅವಶ್ಯಕತೆ ಇರುವ ಕಾರಾವಿ ಆಸ್ಪತ್ರೆ/ ಚಿಕಿತ್ಸಾಲಯಗಳಿಗೆ ಮರುಹಂಚಿಕೆ ಮಾಡುವಂತೆ ಕೋರಿರುತ್ತಾರೆ. ಮುಂದುವರಿದು ರಾಜ್ಯದಲ್ಲಿ ಇದುವರೆಗೂ ಕಾರಾವಿ ಚಿಕಿತ್ಸಾಲಯಗಳ ಪುನರ್‌ಸಂಘಟನೆ ಮಾಡದೇ ಇರುವುದರಿಂದ ಹಲವಾರು ಕಾರಾವಿ ಚಿಕಿತ್ಸಾಲಯಗಳಿಗೆ ಅಗತ್ಯವಾದ ಸಿಬ್ಬಂದಿಯ ಕೊರತೆ ಇದ್ದು ಹಲವಾರು ಕಾರಾವಿ ಚಿಕಿತ್ಸಾಲಯಗಳಲ್ಲಿ ಅಗತ್ಯಕ್ಕಿಂತ ಹೆಚ್ಚು ಸಿಬ್ಬಂದಿ ಕಾರ್ಯನಿರ್ವಹಿಸುತ್ತಿರುವುದಾಗಿಯೂ ಅಗತ್ಯವಿರುವ ಕಾರಾವಿ ಚಿಕಿತ್ಸಾಲಯಗಳಲ್ಲಿ ಮಂಜೂರಾದ ಹುದ್ದೆಗಳು ಕಡಿಮೆ

ಇರುವುದರಿಂದ ಈ ಚಿಕಿತ್ಸಾಲಯಗಳಿಗೆ ಎರವಲು ಸೇವೆಯ ಮೇಲೆ ಸಿಬ್ಬಂದಿಯನ್ನು ನಿಯೋಜಿಸಿ ಕೆಲಸ ನಿರ್ವಹಿಸಲಾಗುತ್ತಿದ್ದು ಆದರಿಂದ ಇಲಾಖೆಯಲ್ಲಿ ಅತೀ ಹೆಚ್ಚಿನ ಎರವಲು ಸೇವೆಯ ವ್ಯವಸ್ಥೆ ಮಾಡಬೇಕಾಗಿರುತ್ತದೆಯೆಂದು ಅಲ್ಲದೆ ನಿಯೋಜಿಸಲಾದ ಸಿಬ್ಬಂದಿಗೆ ಪ್ರಯಾಣ ವೆಚ್ಚ, ದಿನ ಭತ್ಯೆ, ಇತ್ಯಾದಿಗಳನ್ನು ಪಾವತಿ ಮಾಡುತ್ತಿರುವುದರಿಂದ ರಾಜ್ಯ ಸರ್ಕಾರಕ್ಕೆ ಅನಗತ್ಯ ಆರ್ಥಿಕ ಹೊರೆಯೂ ಸಹ ಉಂಟಾಗುತ್ತದೆಯೆಂದು ತಿಳಿಸಿರುತ್ತಾರೆ. ಕಾರಾವಿ ನಿಗಮದ ನಾರ್ಮ್ಸ್ ಹಾಗೂ ಮಾರ್ಗಸೂಚಿಯನ್ವಯ ಹಾಗೂ ವಿಮಾದಾರರ ಸಂಖ್ಯೆ, ವಿಮಾಯೋಗಿಗಳ ಸಂಖ್ಯೆ ಭೌಗೋಳಿಕ ಹಿನ್ನೆಲೆ, ಮೊದಲಾದವುಗಳನ್ನು ಪರಿಗಣಿಸಿ ವಿಮಾದಾರರ ಸಂಖ್ಯೆಯ ಆಧಾರದ ಮೇಲೆ ಅಗತ್ಯವಿರುವ ಸಿಬ್ಬಂದಿಯನ್ನು/ಹುದ್ದೆಗಳನ್ನು ಸಂಬಂಧಿಸಿದ ಕಾರಾವಿ ಚಿಕಿತ್ಸಾಲಯಗಳಿಗೆ ಪುನರ್ ಹಂಚಿಕೆ ಮಾಡುವ ಬಗ್ಗೆ ಪ್ರಸ್ತಾವಿಸಿರುತ್ತಾರೆ. ಅಲ್ಲದೆ ವೈದ್ಯರು ರಜೆಯ ಮೇಲೆ ತೆರಳಿದ ಸಂದರ್ಭದಲ್ಲಿ ಸಂಬಂಧಿಸಿದ ಕಾರಾವಿ ಚಿಕಿತ್ಸಾಲಯಗಳ ಕಾರ್ಯನಿರ್ವಹಣೆಗಾಗಿ ರಜೆ ಮೀಸಲಾತಿ ಹುದ್ದೆಗಳನ್ನು ಸಂಬಂಧಿಸಿದ ಆಸ್ಪತ್ರೆಗಳಲ್ಲಿ ಕಾಯ್ದಿರಿಸಲೂ ಸಹ ಪ್ರಸ್ತಾವಿಸಿರುತ್ತಾರೆ. ವಿವಿಧ ಕಾರಾವಿ ಚಿಕಿತ್ಸಾಲಯಗಳಿಗೆ ಅಲ್ಲಿನ ಸ್ಥಳೀಯ ಪರಿಸ್ಥಿತಿಗಳಿಗನುಗುಣವಾಗಿ ಕೆಲಸದ ಸಮಯವನ್ನು ನಿಗದಿಪಡಿಸಲು ಪ್ರಸ್ತಾಪಿಸಿದ್ದು ಕಾರಾವಿ ಆಸ್ಪತ್ರೆಗಳಲ್ಲಿ ವಿವಿಧ ರೋಗಗಳಿಗೆ ಸಂಬಂಧಿಸಿದಂತೆ ಅವಶ್ಯಕವಿರುವ ತಜ್ಞ ವೈದ್ಯಾಧಿಕಾರಿಗಳ ಸಂಖ್ಯೆಯನ್ನೂ ಸಹ ನಿಗದಿಪಡಿಸಲು ಮತ್ತು ಕಾರಾವಿ ಚಿಕಿತ್ಸಾಲಯಗಳ ಸಮರ್ಪಕ ಆಡಳಿತ ನಿರ್ವಹಣೆಗಾಗಿ ವಲಯ ಆಡಳಿತ ವಿಮಾ ವೈದ್ಯಾಧಿಕಾರಿಗಳಿಗೆ ಕಾರಾವಿ ಚಿಕಿತ್ಸಾಲಯಗಳನ್ನು ಅನುಬಂಧಿಸುವ ಬಗ್ಗೆ ಸಹ ಪ್ರಸ್ತಾವಿಸಿರುತ್ತಾರೆ.

ನಿರ್ದೇಶಕರು, ಕಾರಾವಿ ಯೋ (ವೈ) ಸೇವೆಗಳು ರವರು ಸಲ್ಲಿಸಿರುವ ಪ್ರಸ್ತಾವನೆಯನ್ನು ಕೂಲಂಕುಷವಾಗಿ ಪರಿಶೀಲಿಸಲಾಗಿದೆ.

ಸರ್ಕಾರಿ ಆದೇಶ ಸಂಖ್ಯೆ:ಕಾಇ 98 ಎಲ್ಎಸ್ಎ 2005, ಬೆಂಗಳೂರು, ದಿನಾಂಕ: 02-05-2005.

ಕಾರಾವಿ ಯೋಜನೆಗೊಳಪಟ್ಟ ವಿಮಾದಾರರಿಗೆ ಹಾಗೂ ಅವರ ಕುಟುಂಬದವರಿಗೆ ಉತ್ತಮ ವೈದ್ಯಕೀಯ ಸೌಲಭ್ಯವನ್ನು ಒದಗಿಸುವ ದೃಷ್ಟಿಯಿಂದ ಕಾರಾವಿ ಆಸ್ಪತ್ರೆ / ಚಿಕಿತ್ಸಾಲಯಗಳನ್ನು ತಕ್ಷಣದಿಂದ ಜಾರಿಗೆ ಬರುವಂತೆ ಹಾಗೂ ಈ ಆದೇಶಗಳಲ್ಲಿನ ಅನುಬಂಧ 1ರಿಂದ 5 ರಲ್ಲಿರುವಂತೆ ಪುನರ್‌ಸಂಘಟಿಸಲಾಗಿದೆ. ಕಾರಾವಿ ಇಲಾಖೆಗೆ ಮಂಜೂರಾದ ಒಟ್ಟಾರೆ ವೈದ್ಯಕೀಯ ಅರೆ ವೈದ್ಯಕೀಯ, ಲಿಪಿಕ, ಮತ್ತು ಗ್ರೂಪ್ ಡಿ ವರ್ಗದ ಹುದ್ದೆಗಳನ್ನು (ಕಾರಾವಿ ಮಾದರಿ ಆಸ್ಪತ್ರೆ, ರಾಜಾಜಿನಗರ, ಬೆಂಗಳೂರು ಇಲ್ಲಿ ನಿಯೋಜನೆ ಮೇಲೆ ಕಾರ್ಯ ನಿರ್ವಹಿಸುತ್ತಿರುವ ಸಿಬ್ಬಂದಿ ಹಾಗೂ ಮಂಜೂರಾದ ಹುದ್ದೆಗಳನ್ನು ಹೊರತುಪಡಿಸಿ) ಈ ಆದೇಶದ ಅನುಬಂಧ-1ರಲ್ಲಿರುವಂತೆ ಕಾರಾವಿ ನಿರ್ದೇಶನಾಲಯ ಹಾಗೂ ಕಾರಾವಿ ಆಸ್ಪತ್ರೆ / ಚಿಕಿತ್ಸಾಲಯಗಳಿಗೆ ಪುನರ್ ಹಂಚಿಕೆ ಮಾಡಲಾಗಿದೆ.

ಕಾರಾವಿ ಇಲಾಖೆಗೆ ಮಂಜೂರಾದ ಒಟ್ಟಾರೆ ಹುದ್ದೆಗಳ ವಿವರ ಅನುಬಂಧ-2ರಂತಿದೆ.

ಕಾರಾವಿ ಚಿಕಿತ್ಸಾಲಯಗಳಲ್ಲಿ ಸ್ಥಳೀಯ ಪರಿಸ್ಥಿತಿಗೆ ಅನುಗುಣವಾಗಿ ಕೆಲಸದ ಸಮಯವನ್ನು ಈ ಆದೇಶದ ಅನುಬಂಧ-3 ರಲ್ಲಿರುವಂತೆ ನಿಗದಿಪಡಿಸಲಾಗಿದೆ.

ಕಾರಾವಿ ಆಸ್ಪತ್ರೆಗಳಿಗೆ ತಜ್ಞತೆಯ ಆಧಾರದ ಮೇಲೆ ಅಗತ್ಯವಿರುವ ತಜ್ಞ ವೈದ್ಯರ ಹುದ್ದೆಗಳನ್ನು ಈ ಆದೇಶದ ಅನುಬಂಧ-4 ರಲ್ಲಿರುವಂತೆ ಮರುಹಂಚಿಕೆ ಮಾಡಲಾಗಿದೆ.

ವಲಯ ಆಡಳಿತ ವಿಮಾ ವೈದ್ಯಾಧಿಕಾರಿಗಳಿಗೆ ಅನುಬಂಧ-5ರಲ್ಲಿರುವಂತೆ ಕಾರಾವಿ ಚಿಕಿತ್ಸಾಲಯಗಳನ್ನು ಅನುಬಂಧಿಸಲಾಗಿದೆ.

ಈಗಾಗಲೇ ಮೇಲೆ (3)ರಲ್ಲಿ ಓದಲಾದ ದಿನಾಂಕ:11-08-2004ರ ಸರ್ಕಾರಿ ಪತ್ರದಲ್ಲಿ ಐಎಂಪಿ ಪದ್ಧತಿಯನ್ನು ಅನುಷ್ಠಾನಗೊಳಿಸಲು ಅನುಮತಿ ನೀಡಲಾದ ಕಾರಾವಿ ಚಿಕಿತ್ಸಾಲಯ ಮದ್ದೂರು, ಕನಕಪುರ, ಟಿ.ನರಸೀಪುರ, ಚಾಮರಾಜನಗರ, ಕೊಳ್ಳೇಗಾಲ ಮತ್ತು ಚಳ್ಳಕೆರೆ ಇವುಗಳನ್ನು ಐಎಂಪಿ ಪದ್ಧತಿಯನ್ನು ಅನುಷ್ಠಾನಗೊಳಿಸುವವರೆಗೆ ಮುಂದುವರಿಸಲು ಆದೇಶಿಸಲಾಗಿದೆ. ಸದರಿ ಪ್ರದೇಶಗಳಲ್ಲಿನ ವಿಮಾದಾರರಿಗೆ ಐಎಂಪಿ ಪದ್ಧತಿಯನ್ನು ಅಳವಡಿಸಿದ ನಂತರ ಈ ಚಿಕಿತ್ಸಾಲಯಗಳನ್ನು ಮುಚ್ಚತಕ್ಕದ್ದು.

ಕಾರಾವಿ ಇಲಾಖೆಯ ಪುನರ್‌ಸಂಘಟನೆಯಿಂದಾಗಿ ಸಂಬಂಧಿಸಿದ ಕಾರಾವಿ ಆಸ್ಪತ್ರೆ / ಚಿಕಿತ್ಸಾಲಯಗಳಲ್ಲಿ ಹೆಚ್ಚುವರಿಯಾಗಿ ಉಳಿದಿರುವ ಗ್ರೂಪ್ ಎ ವೃಂದದಲ್ಲಿ ಕಾರ್ಯನಿರ್ವಹಿಸುತ್ತಿರುವ ಸಿಬ್ಬಂದಿಯನ್ನು ಅವಶ್ಯವಿರುವ ಕಾರಾವಿ ಆಸ್ಪತ್ರೆ / ಚಿಕಿತ್ಸಾಲಯಗಳಿಗೆ ವರ್ಗಾವಣೆ ಮಾಡಲು ಅಗತ್ಯವಾದ ಪ್ರಸ್ತಾವನೆಯನ್ನು ಸೂಕ್ತ ಸಮರ್ಥನೆಯೊಂದಿಗೆ ವೃಂದ ನಿರ್ವಹಣಾ ಪ್ರಾಧಿಕಾರಕ್ಕೆ ನಿರ್ದೇಶಕರು ಕಾರಾವಿ ಯೋ (ವೈ) ಸೇವೆಗಳು ಇವರು ಸಲ್ಲಿಸತಕ್ಕದ್ದು. ಪ್ರತಿ ಕಾರಾವಿ ಆಸ್ಪತ್ರೆ / ಚಿಕಿತ್ಸಾಲಯಗಳಿಗೆ ನಿಗದಿಪಡಿಸಲಾದ ಹುದ್ದೆಗಳ ಸಂಖ್ಯೆಗನುಗುಣವಾಗಿ ಗ್ರೂಪ್ ಬಿ, ಸಿ, ಮತ್ತು ಡಿ ಹುದ್ದೆಗಳಲ್ಲಿ ಕಾರ್ಯನಿರ್ವಹಿಸುತ್ತಿರುವ ಸಿಬ್ಬಂದಿಯನ್ನು ದಿನಾಂಕ:18-02-2005ರಲ್ಲಿನ ಪ್ರಸ್ತಾವನೆಯೊಂದಿಗೆ ಲಗತ್ತಿಸಿರುವ ಅನುಬಂಧದಲ್ಲಿ ತಿಳಿಸಿರುವಂತೆ ಅಗತ್ಯವಿರುವ ಕಾರಾವಿ ಆಸ್ಪತ್ರೆ / ಚಿಕಿತ್ಸಾಲಯಗಳಿಗೆ ವರ್ಗಾಯಿಸುವ ಬಗ್ಗೆ ಪರಿಶೀಲಿಸಿ ನಿರ್ದೇಶಕರ ಹಂತದಲ್ಲಿಯೇ ಕ್ರಮ ತೆಗೆದುಕೊಳ್ಳುವುದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಹೆಚ್. ವಿಶ್ವನಾಥ

ಸರ್ಕಾರದ ಅಧೀನ ಕಾರ್ಯದರ್ಶಿ,

ಕಾರ್ಮಿಕ ಇಲಾಖೆ. (ಕಾರಾವಿ ಯೋ (ವೈ) ಸೇವೆಗಳು)

## ಕರ್ನಾಟಕ ವಿಧಾನ ಸಭೆ

| | |
|---|---|
| ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ | 2953 |
| ಮಾನ್ಯ ಸದಸ್ಯರ ಹೆಸರು | ಶ್ರೀ ವೆಂಕಟರಮಣಯ್ಯ.ಟಿ (ದೊಡ್ಡಬಳ್ಳಾಪುರ) |
| ಉತ್ತರಿಸಬೇಕಾದ ದಿನಾಂಕ | 18.03.2021 |
| ಉತ್ತರಿಸುವ ಸಚಿವರು | ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಹಾಗೂ ವೈದ್ಯಕೀಯ ಶಿಕ್ಷಣ ಸಚಿವರು |

| ಕ್ರ.ಸಂ | ಪ್ರಶ್ನೆ | ಉತ್ತರ |
|---|---|---|
| ಅ) | ದೊಡ್ಡಬಳ್ಳಾಪುರ ವಿಧಾನಸಭಾ ಕ್ಷೇತ್ರದ ತಾಲ್ಲೂಕು ಆಸ್ಪತ್ರೆ ಮತ್ತು ಪ್ರಾಥಮಿಕ ಆರೋಗ್ಯ ಕೇಂದ್ರಗಳಲ್ಲಿ ಮಂಜೂರಾದ ಸಿಬ್ಬಂದಿಗಳು ಎಷ್ಟು; ಹಾಲಿ ಕರ್ತವ್ಯ ನಿರ್ವಹಿಸುತ್ತಿರುವ ಸಿಬ್ಬಂದಿಗಳು ಎಷ್ಟು; (ವಿವರ ನೀಡುವುದು) | (ಕೆಳಗಿನ ಕೋಷ್ಟಕ) |
| ಆ) | ಕೊರತೆ ಇರುವ ಸಿಬ್ಬಂದಿಗಳನ್ನು ಭರ್ತಿ ಮಾಡಲು ಸರ್ಕಾರವು ಕೈಗೊಂಡಿರುವ ಕ್ರಮಗಳೇನು? | ಖಾಲಿ ಇರುವ ಹುದ್ದೆಗಳನ್ನು ಭರ್ತಿ ಮಾಡಲು ತೆಗೆದುಕೊಂಡ ಕ್ರಮದ ಬಗ್ಗೆ ಅನುಬಂಧದಲ್ಲಿ ನೀಡಲಾಗಿದೆ |

| | ಮಂಜೂರು | | ಕಾರ್ಯ ನಿರತ | | ಖಾಲಿ | |
|---|---|---|---|---|---|---|
| | ವೈದ್ಯರು | ಸಿಬ್ಬಂದಿ | ವೈದ್ಯರು | ಸಿಬ್ಬಂದಿ | ವೈದ್ಯರು | ಸಿಬ್ಬಂದಿ |
| ಸಾರ್ವಜನಿಕ ಆಸ್ಪತ್ರೆ, ದೊಡ್ಡಬಳ್ಳಾಪುರ | 14 | 81 | 14 | 40 | 0 | 41 |
| 15 ಒಟ್ಟು ಪ್ರಾಥಮಿಕ ಆರೋಗ್ಯ ಕೇಂದ್ರಗಳು | 15 | 177 | 15 | 89 | 0 | 88 |

**ಸಂಖ್ಯೆ: ಆಕುಕ ಆಕುಕ 29 ಹೆಚ್‌ಪಿಸಿ 2021**

(ಡಾ: ಕೆ. ಸುಧಾಕರ್)
ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಹಾಗೂ
ವೈದ್ಯಕೀಯ ಶಿಕ್ಷಣ ಸಚಿವರು

## ಚುಕ್ಕೆರಹಿತ ಪ್ರಶ್ನೆ ಸಂಖ್ಯೆ: 2953ಕ್ಕೆ ಅನುಬಂಧ

ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆಯಲ್ಲಿ ಖಾಲಿ ಇರುವ ತಜ್ಞರು/ ಸಾಮಾನ್ಯ ಕರ್ತವ್ಯ ವೈದ್ಯಾಧಿಕಾರಿ/ದಂತ ಆರೋಗ್ಯಾಧಿಕಾರಿ ಹುದ್ದೆಗಳನ್ನು ನೇರ ನೇಮಕಾತಿ ಮೂಲಕ ಭರ್ತಿ ಮಾಡುವ ಪ್ರಕ್ರಿಯೆ ಜಾರಿಯಲ್ಲಿದ್ದು, ವಿಶೇಷ ನೇಮಕಾತಿ ಸಮಿತಿಯಿಂದ ನೇರ ನೇಮಕಾತಿ ಮುಖಾಂತರ 1460 ತಜ್ಞ ವೈದ್ಯರುಗಳ ಹುದ್ದೆಗಳನ್ನು(636 ಬ್ಯಾಕ್‌ಲಾಗ್ ಒಳಗೊಂಡಂತೆ), 1265 ಸಾಮಾನ್ಯ ಕರ್ತವ್ಯ ವೈದ್ಯಾಧಿಕಾರಿಗಳ ಹುದ್ದೆಗಳನ್ನು(19 ಬ್ಯಾಕ್‌ಲಾಗ್ ಹುದ್ದೆಗಳು ಸೇರಿದಂತೆ) ಹಾಗೂ 90 ದಂತ ಆರೋಗ್ಯಾಧಿಕಾರಿಗಳ ಹುದ್ದೆಗಳನ್ನು (02 ಬ್ಯಾಕ್‌ಲಾಗ್ ಹುದ್ದೆಗಳು ಸೇರಿದಂತೆ) ಭರ್ತಿ ಮಾಡಲು ಈಗಾಗಲೇ ಅಧಿಸೂಚನೆ ಸಂಖ್ಯೆ:ಎಸ್‌ಆರ್‌ಸಿ/68/2019-20, ದಿ:10.09.2020 ನ್ನು ಹೊರಡಿಸಿ, ಅರ್ಹ ಅಭ್ಯರ್ಥಿಗಳಿಂದ ಅರ್ಜಿಯನ್ನು ಅಹ್ವಾನಿಸಲಾಗಿದ್ದು, ದಾಖಲೆಗಳ ಪರಿಶೀಲನೆ ಮುಗಿದಿರುತ್ತದೆ. ತಾತ್ಕಾಲಿಕ ಪಟ್ಟಿಯನ್ನು ಪ್ರಚುರಪಡಿಸುವ ಹಂತದಲ್ಲಿದೆ.

### ಕಿರಿಯ ಆರೋಗ್ಯ ಸಹಾಯಕರು:

ಆಕುಕ ಇಲಾಖೆಯಲ್ಲಿ ಒಟ್ಟು 9850 ಕಿರಿಯ ಆರೋಗ್ಯ ಸಹಾಯಕ ಹುದ್ದೆಗಳು ಮಂಜೂರಾಗಿದ್ದು, ಖಾಲಿಯಿದ್ದ ಹುದ್ದೆಗಳ ಪೈಕಿ 2124 ಹುದ್ದೆಗಳನ್ನು 2018ನೇ ಸಾಲಿನಲ್ಲಿ ವಿಶೇಷ ನೇಮಕಾತಿ ನಿಯಮಗಳಡಿಯಲ್ಲಿ ಭರ್ತಿ ಮಾಡಲಾಗಿದ್ದು, ಒಟ್ಟಾರೆ 7123 ಹುದ್ದೆಗಳಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದು, ಪ್ರಸ್ತುತ 2727 ಹುದ್ದೆಗಳು ಖಾಲಿಯಿರುತ್ತವೆ.

### ಶುಶ್ರೂಷಕರು:

ಆಕುಕ ಇಲಾಖೆಯಲ್ಲಿ ಒಟ್ಟು 8471 ಶುಶ್ರೂಷಕರ ಹುದ್ದೆಗಳು ಮಂಜೂರಾಗಿದ್ದು. ಖಾಲಿಯಿದ್ದ 4551 ಹುದ್ದೆಗಳ ಪೈಕಿ ಮೊದಲನೇ ಹಂತದಲ್ಲಿ 981 ಹುದ್ದೆಗಳನ್ನು ಭರ್ತಿ ಮಾಡಲಾಗಿರುತ್ತದೆ. ಜೊತೆಗೆ ಸರ್ಕಾರದ ಅಧಿಸೂಚನೆ ಸಂಖ್ಯೆ ಹೆಚ್‌ಎಫ್‌ಡಬ್ಲ್ಯೂ 550 ಹೆಚ್‌ಎಸ್‌ಹೆಚ್ 2016 ದಿನಾಂಕ 27.05.2017ರಲ್ಲಿ ಶುಶ್ರೂಷಕರು (ಡಿಪ್ಲಮೋ ನರ್ಸಿಂಗ್) – 889 ಹುದ್ದೆಗಳಿಗೆ ರಾಜ್ಯವಲಯದಡಿಯಲ್ಲಿ ಕಾರ್ಯನಿರ್ವಹಿಸುತ್ತಿರುವ ಗುತ್ತಿಗೆ ಶುಶ್ರೂಷಕರುಗಳಿಗೆ ಕೃಪಾಂಕ ಮತ್ತು ವಯೋಮಿತಿ ಸಡಿಲಿಕೆ ಸೌಲಭ್ಯಗಳನ್ನು ನೀಡಿ ಸರ್ಕಾರವು ವಿಶೇಷ ನೇಮಕಾತಿ ನಿಯಮಗಳನ್ನು ರಚಿಸಿ ದಿನಾಂಕ:16.07.2020ರಲ್ಲಿ ಅಂತಿಮ ಆಯ್ಕೆಪಟ್ಟಿಯನ್ನು ಪ್ರಚುರ ಪಡಿಸಲಾಗಿದ್ದು, ಅಂತಿಮ ಆಯ್ಕೆ ಪಟ್ಟಿಯಲ್ಲಿ ಆಯ್ಕೆಯಾದ ಅಭ್ಯರ್ಥಿಗಳ ಪೈಕಿ ನೈಜತೆ ವರದಿಗಳು ಸ್ವೀಕೃತವಾಗಿರುವ ಅಭ್ಯರ್ಥಿಗಳಿಗೆ ನೇಮಕಾತಿ ಆದೇಶವನ್ನು ನೀಡಲಾಗಿರುತ್ತದೆ. ಪ್ರಸ್ತುತ 5790 ಹುದ್ದೆಗಳಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದು, 2681 ಹುದ್ದೆಗಳು ಖಾಲಿಯಿರುತ್ತವೆ. ಇದರ ಜೊತೆಗೆ 5778 ಶುಶ್ರೂಷಕರನ್ನು ಎನ್.ಹೆಚ್.ಎಂ. ಮುಖಾಂತರ ಗುತ್ತಿಗೆ ಆಧಾರದ ಮೇಲೆ ನೇಮಿಸಿಕೊಳ್ಳಲಾಗಿದೆ.

### ಫಾರ್ಮಾಸಿಸ್ಟ್, ಕ್ಷ-ಕಿರಣ ತಂತ್ರಜ್ಞರು ಹಾಗೂ ಕಿರಿಯ ಪ್ರಯೋಗ ಶಾಲಾ ತಂತ್ರಜ್ಞರ ಹುದ್ದೆಗಳನ್ನು ಭರ್ತಿ ಮಾಡುವ ಬಗ್ಗೆ:

ಆಕುಕ ಇಲಾಖೆಯಲ್ಲಿ 2932 ಫಾರ್ಮಾಸಿಸ್ಟ್ ಹುದ್ದೆಗಳು ಮಂಜೂರಾಗಿದ್ದು, 1974 ಹುದ್ದೆಗಳಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದಾರೆ. ಹಾಗೂ 2411 ಕಿರಿಯ ಪ್ರಯೋಗ ಶಾಲಾ ತಂತ್ರಜ್ಞರ ಹುದ್ದೆಗಳು ಮಂಜೂರಾಗಿದ್ದು, 1821 ಹುದ್ದೆಗಳಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದಾರೆ. ಸರ್ಕಾರದ ಪತ್ರ ಸಂಖ್ಯೆ: ಆಕುಕ 709 ಹೆಚ್‌ಎಸ್‌ಎಂ 2017, ದಿನಾಂಕ:03.08.2019ರಲ್ಲಿ ಇಲಾಖೆಯಲ್ಲಿ ಪ್ರಸ್ತುತ ಖಾಲಿ ಇರುವ ಫಾರ್ಮಾಸಿಸ್ಟ್, ಕ್ಷ-ಕಿರಣ ತಂತ್ರಜ್ಞರು ಹಾಗೂ ಕಿರಿಯ ಪ್ರಯೋಗ ಶಾಲಾ ತಂತ್ರಜ್ಞರ ಹುದ್ದೆಗಳನ್ನು ಆರ್ಥಿಕ ಇಲಾಖೆ ಟಿಪ್ಪಣಿ ಸಂಖ್ಯೆ: ಆಇ 843 ವೆಚ್ಚ-5/2018, ದಿನಾಂಕ:26.07.2019ರಲ್ಲಿ ನೀಡಿರುವ ಸಹಮತಿ ಪ್ರಕಾರ ಈ ಕೆಳಕಂಡಂತೆ ಭರ್ತಿ ಮಾಡಲು ಅನುಮೋದನೆಯನ್ನು ನೀಡಿರುತ್ತಾರೆ.

--2

| Sl. No. | Designation | No. of Posts | | | | |
|---|---|---|---|---|---|---|
| | | 2019-20 | | 2020-21 | | Total |
| | | Regular | Outsource | Regular | Outsource | |
| 01. | Jr. Lab Technician | 150 | 150 | - | - | 300 |
| 02. | X-Ray Technician | 08 | - | - | - | 08 |
| 03. | Pharmacist | 200 | 200 | 200 | 200 | 800 |

ಸರ್ಕಾರದ ಆದೇಶದ ಪ್ರಕಾರ ಹೊರ ಗುತ್ತಿಗೆ ಆಧಾರದ ಮೇಲೆ 150 ಕಿರಿಯ ವೈದ್ಯಕೀಯ ಪ್ರಯೋಗಶಾಲಾ ತಂತ್ರಜ್ಞರು ಮತ್ತು 400 ಫಾರ್ಮಾಸಿಸ್ಟ್ ಹುದ್ದೆಗಳನ್ನು ಜಿಲ್ಲಾಧಿಕಾರಿಗಳ ಅಧ್ಯಕ್ಷತೆಯಲ್ಲಿ ಸಮಿತಿಯನ್ನು ರಚಿಸಿ ಭರ್ತಿ ಮಾಡಲು ಜಿಲ್ಲಾ ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಅಧಿಕಾರಿಗಳಿಗೆ ಸೂಚಿಸಲಾಗಿರುತ್ತದೆ. ಅಲ್ಲದೇ ಎನ್.ಹೆಚ್.ಎಂ. ಮುಖಾಂತರ 620 ಫಾರ್ಮಾಸಿಸ್ಟ್ ಹುದ್ದೆಗಳನ್ನು ಹಾಗೂ 1621 ಕಿರಿಯ ವೈದ್ಯಕೀಯ ಪ್ರಯೋಗಶಾಲಾ ತಂತ್ರಜ್ಞರನ್ನು ಗುತ್ತಿಗೆ ಆಧಾರದ ಮೇರೆಗೆ ನೇಮಕಾತಿ ಮಾಡಿಕೊಳ್ಳಲಾಗಿದೆ.

ಮುಂದುವರೆದು, ಇಲಾಖೆಯಲ್ಲಿ ಖಾಲಿ ಇರುವ 150 ಕಿರಿಯ ವೈದ್ಯಕೀಯ ಪ್ರಯೋಗ ಶಾಲಾ ತಂತ್ರಜ್ಞರು, 08 ಕ್ಷ-ಕಿರಣ ತಂತ್ರಜ್ಞರು ಹಾಗೂ 400 ಫಾರ್ಮಾಸಿಸ್ಟ್ ಹುದ್ದೆಗಳನ್ನು ನೇರ ನೇಮಕಾತಿ ಮುಖಾಂತರ ಭರ್ತಿ ಮಾಡಿಕೊಳ್ಳಲು ಪರಿಶೀಲಿಸಲಾಗುತ್ತಿದೆ.

ಹೈದ್ರಾಬಾದ್-ಕರ್ನಾಟಕ ಪ್ರದೇಶದಲ್ಲಿ ಖಾಲಿ ಇರುವ ಅರೆ ವೈದ್ಯಕೀಯ ಹುದ್ದೆಗಳನ್ನು ಭರ್ತಿ ಮಾಡುವ ಬಗ್ಗೆ.

ಹೈದ್ರಾಬಾದ್-ಕರ್ನಾಟಕ ಪ್ರದೇಶದಲ್ಲಿ ಖಾಲಿ ಇರುವ 293 ಅರೆ ವೈದ್ಯಕೀಯ ಹುದ್ದೆಗಳನ್ನು (ಗ್ರೂಪ್ 'ಬಿ' ವೃಂದದ 10 ಹುದ್ದೆಗಳು ಮತ್ತು ಗ್ರೂಪ್ 'ಸಿ' ವೃಂದದ 283 ಹುದ್ದೆಗಳು) ನೇರ ನೇಮಕಾತಿ ಮುಖೇನ ಭರ್ತಿ ಮಾಡಿಕೊಳ್ಳಲು ಪರಿಶೀಲಿಸಲಾಗುತ್ತದೆ.

<<<<<>>>>>

## District Wise RTE Applications Received Statistics - RTE 2020 As on 21/7/2020/11/25/21/756

| Sl No | District Name | Total Appl Revd | Public Domain | DDPI | BEO | AJSK | Karnataka One | Bangalore One |
|---|---|---|---|---|---|---|---|---|
| 1 | BAGALKOTE | 1052 | 1044 | 0 | 8 | 0 | 0 | 0 |
| 2 | BALLARI | 313 | 308 | 0 | 5 | 0 | 0 | 0 |
| 3 | BELAGAVI | 239 | 237 | 0 | 2 | 0 | 0 | 0 |
| 4 | BENGALURU NORTH | 209 | 209 | 0 | 0 | 0 | 0 | 0 |
| 5 | BENGALURU RURAL | 83 | 83 | 0 | 0 | 0 | 0 | 0 |
| 6 | BENGALURU SOUTH | 2044 | 2044 | 0 | 0 | 0 | 0 | 0 |
| 7 | BIDAR | 219 | 219 | 0 | 0 | 0 | 0 | 0 |
| 8 | CHAMARAJANAGAR | 45 | 44 | 0 | 1 | 0 | 0 | 0 |
| 9 | CHIKKABALLAPURA | 47 | 47 | 0 | 0 | 0 | 0 | 0 |
| 10 | CHIKKODI | 644 | 641 | 0 | 3 | 0 | 0 | 0 |
| 11 | CHIKMAGALUR | 50 | 46 | 0 | 4 | 0 | 0 | 0 |
| 12 | CHITRADURGA | 116 | 115 | 0 | 1 | 0 | 0 | 0 |
| 13 | DAKSHINA KANNADA | 55 | 55 | 0 | 0 | 0 | 0 | 0 |
| 14 | DAVANGERE | 676 | 676 | 0 | 0 | 0 | 0 | 0 |
| 15 | DHARWAD | 1755 | 1755 | 0 | 0 | 0 | 0 | 0 |
| 16 | GADAG | 293 | 293 | 0 | 0 | 0 | 0 | 0 |
| 17 | HASSAN | 65 | 64 | 0 | 1 | 0 | 0 | 0 |
| 18 | HAVERI | 270 | 257 | 0 | 13 | 0 | 0 | 0 |
| 19 | KALABURAGI | 543 | 541 | 0 | 2 | 0 | 0 | 0 |
| 20 | KODAGU | 7 | 4 | 0 | 3 | 0 | 0 | 0 |
| 21 | KOLAR | 183 | 183 | 0 | 0 | 0 | 0 | 0 |
| 22 | KOPPAL | 169 | 169 | 0 | 0 | 0 | 0 | 0 |
| 23 | MADHUGIRI | 11 | 11 | 0 | 0 | 0 | 0 | 0 |
| 24 | MANDYA | 53 | 53 | 0 | 0 | 0 | 0 | 0 |
| 25 | MYSURU | 836 | 836 | 0 | 0 | 0 | 0 | 0 |
| 26 | RAICHUR | 247 | 247 | 0 | 0 | 0 | 0 | 0 |
| 27 | RAMANAGARA | 58 | 58 | 0 | 0 | 0 | 0 | 0 |
| 28 | SHIVAMOGGA | 140 | 123 | 0 | 17 | 0 | 0 | 0 |
| 29 | SIRSI | 57 | 57 | 0 | 0 | 0 | 0 | 0 |
| 30 | TUMKUR | 169 | 167 | 0 | 2 | 0 | 0 | 0 |
| 31 | UDUPI | 47 | 46 | 0 | 1 | 0 | 0 | 0 |
| 32 | UTTARA KANNADA | 3 | 3 | 0 | 0 | 0 | 0 | 0 |
| 33 | VIJAYAPURA | 685 | 675 | 0 | 10 | 0 | 0 | 0 |
| 34 | YADAGIRI | 83 | 83 | 0 | 0 | 0 | 0 | 0 |
| | **Total** | **11466** | **11393** | **0** | **73** | **0** | **0** | **0** |

Department of Public Instruction - Karnataka

## District wise seats allocation, seats allotted and admitted details RTE 2020

| Sl.No. | District Name | 25 % seats | Total Allotted in | | | Total Admiited in | | |
|---|---|---|---|---|---|---|---|---|
| | | Total | First Round | Second Round | Total | First Round | Second Round | Total |
| 1 | BAGALKOTE | 1080 | 499 | 158 | 657 | 334 | 90 | 424 |
| 2 | BALLARI | 648 | 217 | 27 | 244 | 80 | 5 | 85 |
| 3 | BELAGAVI | 533 | 170 | 29 | 199 | 95 | 13 | 108 |
| 4 | BENGALURU NORTH | 634 | 152 | 42 | 194 | 4 | 1 | 5 |
| 5 | BENGALURU RURAL | 142 | 59 | 15 | 74 | 27 | 6 | 33 |
| 6 | BENGALURU SOUTH | 1214 | 763 | 189 | 952 | 405 | 58 | 463 |
| 7 | BIDAR | 1062 | 175 | 23 | 198 | 26 | 5 | 31 |
| 8 | CHAMARAJANAGAR | 195 | 34 | 4 | 38 | 13 | 0 | 13 |
| 9 | CHIKKABALLAPURA | 169 | 30 | 10 | 40 | 7 | 1 | 8 |
| 10 | CHIKKODI | 1430 | 427 | 101 | 528 | 276 | 68 | 344 |
| 11 | CHIKMAGALUR | 73 | 33 | 15 | 48 | 11 | 0 | 11 |
| 12 | CHITRADURGA | 317 | 67 | 31 | 98 | 11 | 5 | 16 |
| 13 | DAKSHINA KANNADA | 421 | 51 | 4 | 55 | 32 | 3 | 35 |
| 14 | DAVANGERE | 1085 | 375 | 72 | 447 | 288 | 41 | 329 |
| 15 | DHARWAD | 741 | 504 | 127 | 631 | 307 | 33 | 340 |
| 16 | GADAG | 389 | 174 | 68 | 242 | 63 | 38 | 101 |
| 17 | HASSAN | 203 | 34 | 29 | 63 | 3 | 0 | 3 |
| 18 | HAVERI | 457 | 189 | 60 | 249 | 123 | 24 | 147 |
| 19 | KALABURAGI | 1419 | 330 | 85 | 415 | 166 | 52 | 218 |
| 20 | KODAGU | 67 | 6 | 0 | 6 | 5 | 0 | 5 |
| 21 | KOLAR | 389 | 109 | 12 | 121 | 73 | 6 | 79 |
| 22 | KOPPAL | 309 | 136 | 19 | 155 | 60 | 6 | 66 |
| 23 | MADHUGIRI | 52 | 9 | 2 | 11 | 1 | 0 | 1 |
| 24 | MANDYA | 386 | 50 | 3 | 53 | 10 | 1 | 11 |
| 25 | MYSURU | 963 | 435 | 89 | 524 | 343 | 60 | 403 |
| 26 | RAICHUR | 376 | 140 | 48 | 188 | 49 | 15 | 64 |
| 27 | RAMANAGARA | 199 | 55 | 3 | 58 | 7 | 0 | 7 |
| 28 | SHIVAMOGGA | 472 | 107 | 23 | 130 | 42 | 8 | 50 |
| 29 | SIRSI | 118 | 52 | 5 | 57 | 44 | 5 | 49 |
| 30 | TUMKUR | 234 | 79 | 18 | 97 | 35 | 6 | 41 |
| 31 | UDUPI | 342 | 28 | 11 | 39 | 15 | 7 | 22 |
| 32 | UTTARA KANNADA | 16 | 3 | 0 | 3 | 1 | 0 | 1 |
| 33 | VIJAYAPURA | 1051 | 371 | 103 | 474 | 133 | 37 | 170 |
| 34 | YADAGIRI | 267 | 49 | 16 | 65 | 1 | 3 | 4 |
| | **State Total** | **17453** | **5912** | **1441** | **7353** | **3090** | **597** | **3687** |

ಮಾನ್ಯ ವಿಧಾನಸಭಾ ಸದಸ್ಯರಾದ ಶ್ರೀ ಪುಟ್ಟರಂಗಶೆಟ್ಟಿ ಸಿ ಇವರ ಚುಕ್ಕೆರಹಿತ ಪ್ರಶ್ನೆ 2653 ಕ್ಕೆ ಅನುಬಂಧ (ಅನುಬಂಧ -3)

'ಮಾಜ ಕಲ್ಯಾಣ ಇಲಾಖೆಯಿಂದ ನೀಡಲಾಗುತ್ತಿರುವ ವಿದ್ಯಾರ್ಥಿ ವೇತನದ ವಿವರಗಳು

1. **ಮೆಟ್ರಿಕ್ ಪೂರ್ವ ವಿದ್ಯಾರ್ಥಿವೇತನ (01 ರಿಂದ 08 ನೇ ತರಗತಿ)**
   ಪ.ಜಾತಿಯ ವಿದ್ಯಾರ್ಥಿಗಳು ತಮ್ಮ ಶಿಕ್ಷಣ ಮುಂದುವರೆಸಲು ಪ್ರೋತ್ಸಾಹಿಸಲು ವಿದ್ಯಾರ್ಥಿವೇತನ ನೀಡಲಾಗುತ್ತಿದೆ. ವಿದ್ಯಾರ್ಥಿಗಳ ಕುಟುಂಬದ ವಾರ್ಷಿಕ ಆದಾಯ ರೂ 6.00 ಲಕ್ಷಗಳ ಒಳಗಿರಬೇಕು. ವಿದ್ಯಾರ್ಥಿಗಳು ಶಾಲೆಗಳಲ್ಲಿ ದಾಖಲಾಗಿರಬೇಕು ಮತ್ತು ಪರಿಶಿಷ್ಟ ಜಾತಿಗೆ ಸೇರಿರಬೇಕು.

   ನೀಡಲಾಗುತ್ತಿರುವ ವಿದ್ಯಾರ್ಥಿವೇತನ: ರೂಗಳಲ್ಲಿ

| ತರಗತಿ | ಬಾಲಕರು | ಬಾಲಕಿಯರು |
|---|---|---|
| 01 ರಿಂದ 05 | ವಾರ್ಷಿಕ 1000/- | ವಾರ್ಷಿಕ 1100/- |
| 06 ಮತ್ತು 07 | ವಾರ್ಷಿಕ 1150/- | ವಾರ್ಷಿಕ 1250/- |
| 08 ನೇ ತರಗತಿ | ವಾರ್ಷಿಕ 1250/- | ವಾರ್ಷಿಕ 1350/- |

2. **ಮೆಟ್ರಿಕ್ ಪೂರ್ವ ವಿದ್ಯಾರ್ಥಿವೇತನ (09 ಮತ್ತು 10 ನೇ ತರಗತಿ)**
   ವಿದ್ಯಾರ್ಥಿಗಳ ಕುಟುಂಬದ ವಾರ್ಷಿಕ ಆದಾಯ ರೂ 2.50 ಲಕ್ಷಗಳ ಒಳಗಿರಬೇಕು. ವಿದ್ಯಾರ್ಥಿಗಳು ಶಾಲೆಗಳಲ್ಲಿ ದಾಖಲಾಗಿರಬೇಕು ಮತ್ತು ಪರಿಶಿಷ್ಟ ಜಾತಿಗೆ ಸೇರಿರಬೇಕು.
   ನೀಡಲಾಗುತ್ತಿರುವ ವಿದ್ಯಾರ್ಥಿವೇತನ: ರೂಗಳಲ್ಲಿ

| ವಿವರ | ಡೇ ಸ್ಕಾಲರ್ಸ್ | ಹಾಸ್ಟೆಲರ್ಸ್ |
|---|---|---|
| ನಿರ್ವಹಣಾ ವೆಚ್ಚ | ಮಾಹೆಯಾನ ರೂ 225/- ರಂತೆ 10 ತಿಂಗಳಿಗೆ ರೂ 2250/- | ಮಾಹೆಯಾನ ರೂ 525/- ರಂತೆ 10 ತಿಂಗಳಿಗೆ ರೂ 5250/- |
| ಅಡಾಕ್ ಅನುದಾನ | ವಾರ್ಷಿಕ ರೂ 750/- | ವಾರ್ಷಿಕ 1000/- |

3. **ಅನೈರ್ಮಲ್ಯ ವೃತ್ತಿಯಲ್ಲಿ ತೊಡಗಿರುವವರ ಮಕ್ಕಳಿಗೆ ಮೆಟ್ರಿಕ್ ಪೂರ್ವ ವಿದ್ಯಾರ್ಥಿವೇತನ**
   ಅನೈರ್ಮಲ್ಯ ವೃತ್ತಿಯಲ್ಲಿ ತೊಡಗಿರುವವರ (ಯಾವುದೇ ಜಾತಿ ಆಗಿದ್ದರೂ) ಮಕ್ಕಳಿಗೆ ವಿದ್ಯಾರ್ಥಿವೇತನ ನೀಡಲಾಗುತ್ತದೆ. ವಿದ್ಯಾರ್ಥಿಗಳು ಶಾಲೆಗಳಲ್ಲಿ ದಾಖಲಾಗಿರಬೇಕು ಮತ್ತು ಪೋಷಕರು ಅನೈಮಲ್ಯ ವೃತ್ತಿಯಲ್ಲಿ ತೊಡಗಿರುವ ಬಗ್ಗೆ ಸ್ಥಳೀಯ ಸಂಸ್ಥೆಗಳಿಂದ ಪ್ರಮಾಣಪತ್ರ ನೀಡಬೇಕಾಗುತ್ತದೆ.
   ನೀಡಲಾಗುತ್ತಿರುವ ವಿದ್ಯಾರ್ಥಿವೇತನ: ರೂಗಳಲ್ಲಿ

| ವಿವರ | ಡೇ ಸ್ಕಾಲರ್ಸ್ (01 ರಿಂದ 10 ನೇ ತರಗತಿ) | ಹಾಸ್ಟೆಲರ್ಸ್ (03 ರಿಂದ 10 ನೇ ತರಗತಿ) |
|---|---|---|
| ನಿರ್ವಹಣಾ ವೆಚ್ಚ | ಮಾಹೆಯಾನ ರೂ 225/- ರಂತೆ 10 ತಿಂಗಳಿಗೆ ರೂ 2250/- | ಮಾಹೆಯಾನ ರೂ 700/- ರಂತೆ 10 ತಿಂಗಳಿಗೆ ರೂ 7000/- |
| ಅಡಾಕ್ ಅನುದಾನ | ವಾರ್ಷಿಕ ರೂ 750/- | ವಾರ್ಷಿಕ 1000/- |

17/3

4. ಮೆಟ್ರಿಕ್ ನಂತರದ ವಿದ್ಯಾರ್ಥಿವೇತನ

ವಿದ್ಯಾರ್ಥಿಗಳ ಕುಟುಂಬದ ವಾರ್ಷಿಕ ಆದಾಯ ರೂ 2.50 ಲಕ್ಷಗಳ ಒಳಗಿರಬೇಕು. ವಿದ್ಯಾರ್ಥಿಗಳು ಕಾಲೇಜುಗಳಲ್ಲಿ (ಪ್ರಥಮ ಪಿಯುಸಿ ಇಂದ ಯಾವುದೇ ಉನ್ನತ ಶಿಕ್ಷಣದ ಕೋರ್ಸುಗಳು) ದಾಖಲಾಗಿರಬೇಕು ಮತ್ತು ಪರಿಶಿಷ್ಟ ಜಾತಿಗೆ ಸೇರಿರಬೇಕು. ವಿದ್ಯಾರ್ಥಿಗಳು ಕಾಲೇಜುಗಳಿಗೆ ಪಾವತಿಸಬೇಕಾಗಿರುವ ಕಡ್ಡಾಯ ಶುಲ್ಕಗಳ ಜೊತೆಗೆ ಕೆಳಕಂಡ ದರಗಳಲ್ಲಿ ನಿರ್ವಹಣಾ ಭತ್ಯೆಯನ್ನು ನೀಡಲಾಗುತ್ತದೆ.

| ಕೋರ್ಸುಗಳು | ಡೇಸ್ಕಾಲರ್ಸ್ | ಹಾಸ್ಟೆಲರ್ಸ್ |
|---|---|---|
| ಗ್ರೂಪ್-1<br>ಇಂಜಿನಿಯರಿಂಗ್. ಮೆಡಿಕಲ್, ಕೃಷಿ, ಪಶು ವಿಜ್ಞಾನ. ಎಂ.ಬಿ.ಎ. ಎಂ.ಸಿ.ಎ ಇತ್ಯಾದಿ. | ಮಾಸಿಕ ರೂ 550/- | ಮಾಸಿಕ ರೂ 1200/- |
| ಗ್ರೂಪ್-2<br>ಬಿ.ಫಾರ್ಮ. ನರ್ಸಿಂಗ್. ಹೋಟೆಲ್ ಮ್ಯಾನೇಜ್ ಮೆಂಟ್ ಇತ್ಯಾದಿ | ಮಾಸಿಕ ರೂ 530/- | ಮಾಸಿಕ ರೂ 820/- |
| ಗ್ರೂಪ್-3<br>ಇತರೇ ಪದವಿ ಮತ್ತು ಸ್ನಾತಕೋತ್ತರ ಪದವಿಗಳು | ಮಾಸಿಕ ರೂ 300/- | ಮಾಸಿಕ ರೂ 570/- |
| ಗ್ರೂಪ್-4<br>ಪಿ.ಯು.ಸಿ ಮತ್ತು ತತ್ಸಮಾನ | ಮಾಸಿಕ ರೂ 230/- | ಮಾಸಿಕ ರೂ 380/- |

ಆಯುಕ್ತರು

ಸಮಾಜ ಕಲ್ಯಾಣ ಇಲಾಖೆ, ಬೆಂಗಳೂರು.

ಅನುಬಂಧ- 4

ಮಾನ್ಯ ವಿಧಾನಸಭಾ ಸದಸ್ಯರಾದ ಶ್ರೀ ಶ್ರೀ ಪುಟ್ಟರಂಗಶೆಟ್ಟಿ ಸಿ (ಚಾಮರಾಜನಗರ) ಇವರ ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ: 2653 ಕ್ಕೆ ಅನುಬಂಧ

1. ಮೆಟ್ರಿಕ್ ಪೂರ್ವ ವಿದ್ಯಾರ್ಥಿವೇತನ:-

ಮಾನದಂಡಗಳು:-

ಅ) ವಿದ್ಯಾರ್ಥಿಗಳು ಹಿಂದುಳಿದ ವರ್ಗಗಳ ಪ್ರವರ್ಗ-1, 2ಎ, 3ಎ ಮತ್ತು 3ಬಿಗೆ ಸೇರಿದವರಾಗಿರಬೇಕು.

ಆ) ವಾರ್ಷಿಕ ಆದಾಯಮಿತಿ ಪ್ರವರ್ಗ-1ರ ವಿದ್ಯಾರ್ಥಿಗಳಿಗೆ ರೂ.1.00 ಲಕ್ಷ, ಪ್ರವರ್ಗ-2ಎ, 3ಎ, ಮತ್ತು 3ಬಿ ವಿದ್ಯಾರ್ಥಿಗಳಿಗೆ - ರೂ.44,500/- ನಿಗದಿಪಡಿಸಿದೆ. ಕೇಂದ್ರ ಪುರಸ್ಕೃತ ವಿದ್ಯಾರ್ಥಿವೇತನಕ್ಕೆ ವಾರ್ಷಿಕ ರೂ.2.50 ಲಕ್ಷ ಆದಾಯಮಿತಿ.

ಇ) ಸರ್ಕಾರದ/ಸರ್ಕಾರದಿಂದ ಮಾನ್ಯತೆ ಪಡೆದ ಅನುದಾನಿತ /ಅನುದಾನರಹಿತ ಶಾಲೆಗಳಲ್ಲಿ ವ್ಯಾಸಂಗ ಮಾಡುವ ಹಿಂದುಳಿದ ವರ್ಗಗಳ ವಿದ್ಯಾರ್ಥಿಗಳು ಅರ್ಹರು.

ಈ) ಸರ್ಕಾರದ/ಸರ್ಕಾರದ ಅನುದಾನಿತ ವಿದ್ಯಾರ್ಥಿನಿಲಯಗಳಲ್ಲಿ/ವಸತಿಶಾಲೆಗಳಲ್ಲಿ ವ್ಯಾಸಂಗ ಮಾಡುತ್ತಿರುವ ವಿದ್ಯಾರ್ಥಿಗಳು ವಿದ್ಯಾರ್ಥಿವೇತನ ಪಡೆಯಲು ಅರ್ಹರಿರುವುದಿಲ್ಲ.

ಉ) ಹಿಂದಿನ ತರಗತಿಯಲ್ಲಿ ಶೇ.75 ಕ್ಕಿಂತ ಹೆಚ್ಚು ಹಾಜರಾತಿ ಹೊಂದಿದವರು ಮಾತ್ರ ಅರ್ಹರು.

ಊ) ಹಿಂದಿನ ತರಗತಿಯಲ್ಲಿ ಅನುತ್ತೀರ್ಣರಾದ ವಿದ್ಯಾರ್ಥಿಗಳು, ವಿದ್ಯಾರ್ಥಿವೇತನ ಪಡೆಯಲು ಅರ್ಹರಿರುವುದಿಲ್ಲ.

ಮೆಟ್ರಿಕ್-ಪೂರ್ವ ವಿದ್ಯಾರ್ಥಿವೇತನದ ದರಗಳು:-

| ತರಗತಿ | ಬಾಲಕ/ಬಾಲಕಿ | Adhoc Grant | ಒಟ್ಟು |
|---|---|---|---|
| 1 ರಿಂದ 5 | 250/- | 500/- | 750/- |
| 6 ರಿಂದ 8 | 400/- | 500/- | 900/- |
| 9 ರಿಂದ 10 | 500/- | 500/- | 1000/- |

2. ಮೆಟ್ರಿಕ್ ನಂತರದ ವಿದ್ಯಾರ್ಥಿವೇತನ:-

ಮಾನದಂಡಗಳು:-

ಅ) ಭಾರತದ ಪ್ರಜೆಯಾಗಿದ್ದು, ಕರ್ನಾಟಕದ ಖಾಯಂ ನಿವಾಸಿಯಾಗಿರಬೇಕು ಹಾಗೂ ಭಾರತ ಸರ್ಕಾರ ಅಥವಾ ರಾಜ್ಯ ಸರ್ಕಾರ ಅಧಿಸೂಚಿಸಿರುವ ಹಿಂದುಳಿದ ವರ್ಗಗಳ ಪಟ್ಟಿಯಲ್ಲಿ ಸೇರಿರಬೇಕು.

ಆ) ಕರ್ನಾಟಕದ ಶಾಸನಬದ್ಧ ವಿಶ್ವವಿದ್ಯಾಲಯಗಳ ಅಧೀನಕ್ಕೆ ಒಳಪಡುವ ಸರ್ಕಾರಿ/ಸ್ಥಳೀಯ ಸಂಸ್ಥೆ/ಅನುದಾನಿತ ಸಂಸ್ಥೆ/ಮಾನ್ಯತೆ ಪಡೆದ ಅನುದಾನರಹಿತ ಖಾಸಗಿ ಸಂಸ್ಥೆಗಳಲ್ಲಿ ಮೆಟ್ರಿಕ್-ನಂತರದ ಶಿಕ್ಷಣವನ್ನು ಪಡೆಯುತ್ತಿರುವ ಹಿಂದುಳಿದ ವರ್ಗಗಳ ವಿದ್ಯಾರ್ಥಿಗಳು ಮೆಟ್ರಿಕ್-ನಂತರದ ವಿದ್ಯಾರ್ಥಿವೇತನ ಪಡೆಯಲು ಅರ್ಹರಿರುತ್ತಾರೆ.

ಇ) ಸರ್ಕಾರದ ವಿದ್ಯಾರ್ಥಿನಿಲಯಗಳಲ್ಲಿ/ವಸತಿ ಕಾಲೇಜುಗಳಲ್ಲಿ ಪ್ರವೇಶ ಪಡೆದಿರುವ ವಿದ್ಯಾರ್ಥಿಗಳು ಮೆಟ್ರಿಕ್-ನಂತರದ ವಿದ್ಯಾರ್ಥಿವೇತನವನ್ನು ಪಡೆಯಲು ಅರ್ಹರಿರುವುದಿಲ್ಲ.

ಈ) ವಾರ್ಷಿಕ ಆದಾಯಮಿತಿ ಪ್ರವರ್ಗ-1ರ ವಿದ್ಯಾರ್ಥಿಗಳಿಗೆ ರೂ.2.50 ಲಕ್ಷ, ಪ್ರವರ್ಗ-2ಎ, 3ಎ, ಮತ್ತು 3ಬಿ ವಿದ್ಯಾರ್ಥಿಗಳಿಗೆ - ರೂ.1.00 ಲಕ್ಷ ನಿಗದಿಪಡಿಸಿದೆ.

ಉ) ಹೊಸ ಮತ್ತು ನವೀಕರಣ ವಿದ್ಯಾರ್ಥಿಗಳಿಗೆ ವಿದ್ಯಾರ್ಥಿವೇತನಕ್ಕಾಗಿ ಹಿಂದಿನ ತರಗತಿಗಳಲ್ಲಿ ನಿಗದಿಪಡಿಸಿರುವ ಕನಿಷ್ಠ ಅಂಕ

| ಕ್ರ ಸಂ. | ಪ್ರವರ್ಗ | ಹೊಸ | ನವೀಕರಣ |
|---|---|---|---|
| 1 | ಪ್ರವರ್ಗ-1 | 40% | 50% |
| 2 | ಪ್ರವರ್ಗ-2ಎ, 3ಎ ಮತ್ತು 3ಬಿ | 50% | 60% |

ಊ) ಸಮಾನ ಕೋರ್ಸುಗಳಲ್ಲಿ ಒಂದಕ್ಕಿಂತ ಹೆಚ್ಚು ಬಾರಿ ವ್ಯಾಸಂಗ ಮಾಡುತ್ತಿದ್ದಲ್ಲಿ, ವಿದ್ಯಾರ್ಥಿವೇತನಕ್ಕೆ ಅರ್ಹರಿರುವುದಿಲ್ಲ.

ಋ) ಒಂದೇ ಕುಟುಂಬದ ಇಬ್ಬರು ಗಂಡು ಮಕ್ಕಳು ಮಾತ್ರ ಈ ಯೋಜನೆಗೆ ಅರ್ಹರು. ಈ ನಿರ್ಬಂಧ ಹೆಣ್ಣು ಮಕ್ಕಳಿಗೆ ಅನ್ವಯಿಸುವುದಿಲ್ಲ.

ಎ) ವಿವಿಧ ಕೋರ್ಸುಗಳಲ್ಲಿ ವ್ಯಾಸಂಗ ಮಾಡುತ್ತಿರುವ ಮೆಟ್ರಿಕ್-ನಂತರದ ವಿದ್ಯಾರ್ಥಿಗಳಿಗೆ ಕೋರ್ಸಿನ ಗುಂಪುವಾರು ಪ್ರತಿ ತಿಂಗಳಿಗೆ ಮೆಟ್ರಿಕ್-ನಂತರದ ವಿದ್ಯಾರ್ಥಿವೇತನವನ್ನು 10 ತಿಂಗಳ ಅವಧಿಗೆ ಅರ್ಹತೆ ಮತ್ತು ಆದಾಯಮಿತಿಯನ್ನು ಪರಿಗಣಿಸಿ, ಮಂಜೂರು ಮಾಡಲಾಗುವುದು.

<u>ಮೆಟ್ರಿಕ್-ನಂತರದ ವಿದ್ಯಾರ್ಥಿವೇತನದ ದರಗಳು:-</u>

| ಕ್ರ ಸಂ. | ಗುಂಪು | ಮಂಜೂರು ಮಾಡಲಾಗುವ ವಿದ್ಯಾರ್ಥಿವೇತನದ ದರ (ವಾರ್ಷಿಕ) |
|---|---|---|
| 1 | ಗುಂಪು-ಎ | 3500/- |
| 2 | ಗುಂಪು-ಬಿ | 3350/- |
| 3 | ಗುಂಪು-ಸಿ | 2100/- |
| 4 | ಗುಂಪು-ಡಿ | 1600/- |

3. <u>ಶುಲ್ಕ ವಿನಾಯಿತಿ</u>

<u>ಮಾನದಂಡಗಳು:-</u>

ಅ) ಭಾರತದ ಪ್ರಜೆಯಾಗಿದ್ದು, ಕರ್ನಾಟಕದ ಖಾಯಂ ನಿವಾಸಿಯಾಗಿರಬೇಕು ಹಾಗೂ ಭಾರತ ಸರ್ಕಾರ ಅಥವಾ ರಾಜ್ಯ ಸರ್ಕಾರ ಅಧಿಸೂಚಿಸಿರುವ ಹಿಂದುಳಿದ ವರ್ಗಗಳ ಪಟ್ಟಿಯಲ್ಲಿ ಸೇರಿರಬೇಕು.

ಆ) ಕರ್ನಾಟಕದ ಶಾಸನಬದ್ಧ ವಿಶ್ವ ವಿದ್ಯಾಲಯಗಳ ಅಧೀನಕ್ಕೆ ಒಳಪಡುವ ಸರ್ಕಾರಿ / ಸ್ಥಳೀಯ ಸಂಸ್ಥೆ/ ಅನುದಾನಿತ ಸಂಸ್ಥೆ / ಮಾನ್ಯತೆ ಪಡೆದ ಅನುದಾನರಹಿತ ಖಾಸಗಿ ಸಂಸ್ಥೆಗಳಲ್ಲಿ – ಮೆಟ್ರಿಕ್-ನಂತರದ ಕೋರ್ಸುಗಳಲ್ಲಿ ವ್ಯಾಸಂಗ ಮಾಡುತ್ತಿರುವ ವಿದ್ಯಾರ್ಥಿಗಳಾಗಿರಬೇಕು.

ಇ) ಈ ಸೌಲಭ್ಯವನ್ನು ಪಡೆಯಲು ವಿದ್ಯಾರ್ಥಿಯ ತಂದೆ-ತಾಯಿ/ಪೋಷಕರ ಕುಟುಂಬದ ವಾರ್ಷಿಕ ವರಮಾನ ಈ ಕೆಳಗೆ ನಿಗದಿಪಡಿಸಿದ ಗರಿಷ್ಠ ಮಿತಿಯೊಳಗೆ ಇರಬೇಕು.

i) ಪ್ರವರ್ಗ-1ರ ವಿದ್ಯಾರ್ಥಿಗಳಿಗೆ ರೂ.2.50 ಲಕ್ಷ ಹಾಗೂ

ii) ಭಾರತ ಸರ್ಕಾರ ಅಥವಾ ರಾಜ್ಯ ಸರ್ಕಾರ ಅಧಿಸೂಚಿಸಿರುವ ಇತರೆ ಹಿಂದುಳಿದ ವರ್ಗಗಳ ಪಟ್ಟಿಯಲ್ಲಿ ಸೇರಿದ ಮತ್ತು ಎಲ್ಲಾ ಧರ್ಮಗಳ, ಜಾತಿಗಳ ಹಾಗೂ ಸಮುದಾಯಗಳ ವಿದ್ಯಾರ್ಥಿಗಳಿಗೆ ರೂ.1.00 ಲಕ್ಷ

iii) ಸಮಾಜ ಕಲ್ಯಾಣ/ ಪರಿಶಿಷ್ಟ ವರ್ಗಗಳ ಕಲ್ಯಾಣ ಮತ್ತು ಅಲ್ಪಸಂಖ್ಯಾತರ ಕಲ್ಯಾಣ ಇಲಾಖೆಗಳ ವ್ಯಾಪ್ತಿಗೆ ಬರುವ ವಿದ್ಯಾರ್ಥಿಗಳು ಹಿಂದುಳಿದ ವರ್ಗಗಳ ಕಲ್ಯಾಣ ಇಲಾಖೆಯಿಂದ ಈ ಸೌಲಭ್ಯಗಳನ್ನು ಪಡೆಯಲು ಅರ್ಹರಿರುವುದಿಲ್ಲ.

ಈ) ಹೊಸ ಮತ್ತು ನವೀಕರಣ ವಿದ್ಯಾರ್ಥಿಗಳಿಗೆ ವಿದ್ಯಾರ್ಥಿವೇತನಕ್ಕಾಗಿ ಈ ಹಿಂದಿನ ವರ್ಷದ ವಾರ್ಷಿಕ ಪರೀಕ್ಷೆಯಲ್ಲಿ ಈ ಕೆಳಗಿನಂತೆ ಕನಿಷ್ಠ ಅಂಕಗಳನ್ನು ಪಡೆದು ಉತ್ತೀರ್ಣರಾಗಿರಬೇಕು.

| ಕ್ರ ಸಂ. | ಪ್ರವರ್ಗ | ಹೊಸ | ನವೀಕರಣ |
|---|---|---|---|
| 1 | ಪ್ರವರ್ಗ-1 ಮತ್ತು ಅಂಧ ವಿದ್ಯಾರ್ಥಿಗಳು | 40% | 50% |
| 2 | ಪ್ರವರ್ಗ-2ಎ, 3ಎ ಮತ್ತು 3ಬಿ | 50% | 60% |

ಉ) i) ಸಮಾನ ಕೋರ್ಸುಗಳಲ್ಲಿ ಒಂದಕ್ಕಿಂತ ಹೆಚ್ಚು ಬಾರಿ ವ್ಯಾಸಂಗ ಮಾಡುತ್ತಿದ್ದಲ್ಲಿ, ಅಂತಹವರು ಅರ್ಹರಿರುವುದಿಲ್ಲ.

ii) ಸ್ನಾತಕೋತ್ತರ, ವೈದ್ಯಕೀಯ ಕೋರ್ಸುಗಳಲ್ಲಿ ವ್ಯಾಸಂಗ ಮಾಡುವ ವಿದ್ಯಾರ್ಥಿಗಳು ಕೋರ್ಸಿನ ಅವಧಿಯಲ್ಲಿ ಮೆಡಿಕಲ್ ಪ್ರಾಕ್ಟೀಸ್ ಮಾಡುತ್ತಿದ್ದಲ್ಲಿ, ಈ ಸೌಲಭ್ಯಕ್ಕೆ ಅರ್ಹರಿರುವುದಿಲ್ಲ.

iii) ಕಲೆ, ವಿಜ್ಞಾನ ಹಾಗೂ ವಾಣಿಜ್ಯ ಕೋರ್ಸುಗಳ, ಪದವಿ ಅಥವಾ ಸ್ನಾತಕೋತ್ತರ ಪದವಿಗಳಲ್ಲಿ ಉತ್ತೀರ್ಣ / ಅನುತ್ತೀರ್ಣರಾದವರು ಅಂಗೀಕೃತ ವೃತ್ತಿಪರ ಅಥವಾ ತಾಂತ್ರಿಕ ಸರ್ಟಿಫಿಕೇಟ್, ಡಿಪ್ಲೋಮಾ, ಪದವಿ ಕೋರ್ಸುಗಳಲ್ಲಿ ವ್ಯಾಸಂಗ ಮಾಡಿದ್ದಲ್ಲಿ ಹಾಗೂ ಇತರೆ ರೀತಿ ಅರ್ಹರಿದ್ದಲ್ಲಿ ಅವರು ಈ ಯೋಜನೆಯ ಅಡಿ ಸೌಲಭ್ಯಗಳಿಗೆ ಅರ್ಹರಿರುತ್ತಾರೆ. ಒಂದಕ್ಕಿಂತ ಹೆಚ್ಚು ಬಾರಿ ಕೋರ್ಸುಗಳ ಬದಲಾವಣೆ ಮಾಡಿಕೊಂಡವರು ಅರ್ಹರಿರುವುದಿಲ್ಲ.

iv) ಒಂದೇ ಕುಟುಂಬದ ಇಬ್ಬರು ಗಂಡು ಮಕ್ಕಳು ಮಾತ್ರ ಈ ಯೋಜನೆಗೆ ಅರ್ಹರು. ಆದರೆ, ಈ ನಿರ್ಬಂಧ ಹೆಣ್ಣು ಮಕ್ಕಳಿಗೆ ಅನ್ವಯಿಸುವುದಿಲ್ಲ.

ಶುಲ್ಕ ವಿನಾಯಿತಿಯಡಿ ನೀಡುವ ವಿದ್ಯಾರ್ಥಿವೇತನ:-

ಅ) ಶುಲ್ಕ ವಿನಾಯಿತಿಗೆ ಅರ್ಹ ಇರುವ ಶುಲ್ಕಗಳು:

ರಾಜ್ಯಮಟ್ಟದ ಸಮಿತಿಯು ನಿಗದಿಪಡಿಸುವ ದರಗಳಂತೆ ಈ ಕೆಳಗಿನ ಐದು ಶುಲ್ಕಗಳಿಗೆ ಮಾತ್ರ ವಿನಾಯಿತಿ ನೀಡಲಾಗುವುದು.

i) ಬೋಧನಾ ಶುಲ್ಕ

ii) ಪ್ರಯೋಗಾಲಯ ಶುಲ್ಕ (ಯಾವ ಕೋರ್ಸುಗಳಲ್ಲಿ ಪ್ರಯೋಗಾಲಯ ಕಡ್ಡಾಯವಿದೆಯೋ ಆ ಕೋರ್ಸುಗಳಿಗೆ ಮಾತ್ರ)

iii) ಪರೀಕ್ಷಾ ಶುಲ್ಕ

iv) ಕ್ರೀಡಾ ಶುಲ್ಕ

v) ಗ್ರಂಥಾಲಯ ಶುಲ್ಕ

ಆ) Readers Charges ದರಗಳು:

ಮೆಟ್ರಿಕ್-ನಂತರದ ಕೋರ್ಸುಗಳಲ್ಲಿ ವ್ಯಾಸಂಗ ಮಾಡುತ್ತಿರುವ ಅಂಧ ವಿದ್ಯಾರ್ಥಿಗಳಿಗೆ ಮೇಲಿನ ದರಗಳಂತೆ ಶುಲ್ಕ ವಿನಾಯಿತಿ ನೀಡುವುದರ ಜೊತೆಗೆ ಈ ಕೆಳಗಿನಂತೆ Readers Charges ಅನ್ನು ಸಹ ಪಾವತಿಸಲಾಗುವುದು.

| ಕೋರ್ಸಿನ ಗುಂಪು | Readers Charges (10 ತಿಂಗಳಿಗೆ)(ರೂ.ಗಳಲ್ಲಿ) |
|---|---|
| ಗುಂಪು-ಎ, ಬಿ | 1750/- |
| ಗುಂಪು-ಸಿ | 1300/- |
| ಗುಂಪು-ಡಿ | 900/- |

ಇ) ಪೂರ್ಣ ಶುಲ್ಕಗಳ ಪಾವತಿ:-

ವಿವಿಧ ಕೋರ್ಸುಗಳಲ್ಲಿ ಅತ್ಯಂತ ಹೆಚ್ಚಿನ ಅಂಕಗಳನ್ನು ಪಡೆದ ವಿದ್ಯಾರ್ಥಿಗಳಿಗೆ ಶಿಕ್ಷಣವನ್ನು ಮುಂದುವರೆಸಲು ಸರ್ಕಾರವು ಸರ್ಕಾರಿ ಸಂಸ್ಥೆಗಳಿಗೆ ನಿಗದಿಪಡಿಸಿರುವ ದರಗಳಲ್ಲಿ 5 ಶುಲ್ಕಗಳ ಜೊತೆಗೆ ಪೂರ್ಣ ಶುಲ್ಕಗಳನ್ನು ಪಾವತಿಸಲಾಗುತ್ತದೆ. ನಿಗದಿಪಡಿಸಿರುವ ಕನಿಷ್ಠ ಶೇಕಡಾವಾರು ಅಂಕಗಳ ವಿವರ ಕೆಳಕಂಡಂತಿವೆ.

| ಪ್ರವರ್ಗ | ನಿಗದಿಪಡಿಸಿದ ಕನಿಷ್ಠ ಶೇಕಡಾ ಅಂಕಗಳು |
|---|---|
| ಪ್ರವರ್ಗ-1 ಮತ್ತು ಎಲ್ಲಾ ಪ್ರವರ್ಗಗಳ ಅಂಧ ವಿದ್ಯಾರ್ಥಿಗಳು | 65% |
| ಹಿಂದುಳಿದ ವರ್ಗಗಳ ಇತರೆ ಪ್ರವರ್ಗಗಳು ಮತ್ತು ಇತರೆಯವರು | 70% |

4. ವಿದ್ಯಾಸಿರಿ- ಊಟ ಮತ್ತು ವಸತಿ ಸಹಾಯ ಯೋಜನೆ:-

ಮಾನದಂಡಗಳು:-

ಅ) i) ಭಾರತದ ಪ್ರಜೆಯಾಗಿದ್ದು, ಕರ್ನಾಟಕದ ಖಾಯಂ ನಿವಾಸಿ ಆಗಿರಬೇಕು.

ii) ಭಾರತ ಸರ್ಕಾರ್ಥ ಅಥವಾ ರಾಜ್ಯ ಸರ್ಕಾರ ಅಧಿಸೂಚಿಸಿರುವ, ಇತರೆ ಹಿಂದುಳಿದ ವರ್ಗಗಳ ಪಟ್ಟಿಯಲ್ಲಿ ಸೇರಿರಬೇಕು.

iii) ಕರ್ನಾಟಕದ ಶಾಸನಬದ್ಧ ವಿಶ್ವವಿದ್ಯಾಲಯಗಳ ಅಧೀನಕ್ಕೆ ಒಳಪಡುವ, ಸರ್ಕಾರಿ / ಸ್ಥಳೀಯ ಸಂಸ್ಥೆ/ ಅನುದಾನಿತ ಸಂಸ್ಥೆಗಳು / ಮಾನ್ಯತೆ ಪಡೆದ ಅನುದಾನ ರಹಿತ ಖಾಸಗಿ ಸಂಸ್ಥೆಗಳಲ್ಲಿ - ಮೆಟ್ರಿಕ್ ನಂತರದ ಕೋರ್ಸುಗಳಲ್ಲಿ ವ್ಯಾಸಂಗ ಮಾಡುತ್ತಿರುವ ವಿದ್ಯಾರ್ಥಿಗಳಾಗಿರಬೇಕು.

ಆ) ಯಾವುದೇ ಇಲಾಖೆಯ ಸರ್ಕಾರಿ / ಸರ್ಕಾರಿ ಅನುದಾನಿತ ವಿದ್ಯಾರ್ಥಿನಿಲಯ / ವಸತಿ ಕಾಲೇಜುಗಳಲ್ಲಿ, ಪ್ರವೇಶ ದೊರೆಯದ ಹಾಗೂ ಮೆಟ್ರಿಕ್-ನಂತರದ ಕೋರ್ಸುಗಳಲ್ಲಿ ವ್ಯಾಸಂಗ ಮಾಡುವ, ಹಿಂದುಳಿದ ವರ್ಗಗಳ ವಿದ್ಯಾರ್ಥಿಗಳಿಗೆ, ವಿದ್ಯಾಸಿರಿ- ಊಟ ಮತ್ತು ವಸತಿ ಕಾರ್ಯಕ್ರಮದಲ್ಲಿ ಮಂಜೂರಾತಿ ನೀಡಲಾಗುವುದು.

ಇ) ಈ ಯೋಜನೆಯಡಿ ಆಯ್ಕೆಯಾದ ವಿದ್ಯಾರ್ಥಿಗಳಿಗೆ, ಪ್ರತಿ ತಿಂಗಳಿಗೆ ರೂ.1500/-ರಂತೆ, ಶೈಕ್ಷಣಿಕ ಅವಧಿಯ 10 ತಿಂಗಳಿಗೆ ಒಟ್ಟು ರೂ.15,000/- ಸಹಾಯಧನವನ್ನು, ಇತರೆ ನಿಬಂಧನೆಗಳಿಗೊಳಪಟ್ಟು, ವಿದ್ಯಾರ್ಥಿಗಳು ಯಾವುದಾದರೂ ಕೋರ್ ಬ್ಯಾಂಕಿಂಗ್ ವ್ಯವಸ್ಥೆ ಇರುವ ಬ್ಯಾಂಕಿನಲ್ಲಿ ತೆರೆದಿರುವ ಬ್ಯಾಂಕ್ ಖಾತೆಗೆ, ಆನ್‌ಲೈನ್ ಮೂಲಕ ಜಮಾ ಮಾಡಲಾಗುವುದು.

ಉ) ವಿದ್ಯಾರ್ಥಿಗಳು (i)ವಿದ್ಯಾರ್ಥಿ ನಿಲಯದಲ್ಲಿ ಪ್ರವೇಶ, (ii) ಊಟ ಮತ್ತು ವಸತಿ ಸಹಾಯ ಯೋಜನೆ ಮತ್ತು (iii) ಮೆಟ್ರಿಕ್ ನಂತರದ ವಿದ್ಯಾರ್ಥಿ ವೇತನ - ಇವುಗಳಲ್ಲಿ ಯಾವುದಾದರೂ ಒಂದು ಸೌಲಭ್ಯಕ್ಕೆ ಮಾತ್ರ ಅರ್ಹರಿರುತ್ತಾರೆ.

ಊ) ಈ ಯೋಜನೆಯಡಿ ಸೌಲಭ್ಯ ಪಡೆಯಲು ಅರ್ಹರಾದವರು, ಆನ್‌ಲೈನ್ (Online) ಮೂಲಕ ಅರ್ಜಿ ಸಲ್ಲಿಸಬೇಕು.

ಊ) 1) ಈ ಮೇಲಿನ ಸೌಲಭ್ಯ ಪಡೆಯಲು ವಿದ್ಯಾರ್ಥಿಯ, ತಂದೆ-ತಾಯಿ/ಪೋಷಕರ ಕುಟುಂಬದ, ಒಟ್ಟು ವಾರ್ಷಿಕ ವರಮಾನ (Gross Annual Income) ಈ ಕೆಳಗೆ ನಿಗದಿಪಡಿಸಿದ ಮಿತಿಯೊಳಗೆ ಇರಬೇಕು.

(i) ಪ್ರವರ್ಗ-1 ರ ವಿದ್ಯಾರ್ಥಿಗಳಿಗೆ ರೂ.2.50 ಲಕ್ಷ

(ii) ಪ್ರವರ್ಗ-2ಎ, 3ಎ ಮತ್ತು 3ಬಿ ವಿದ್ಯಾರ್ಥಿಗಳಿಗೆ ರೂ.1.00 ಲಕ್ಷ

2) ವಿದ್ಯಾರ್ಥಿಗಳು ಗ್ರಾಮೀಣ ಪ್ರದೇಶದವಾಗಿರಬೇಕು ಹಾಗೂ ವ್ಯಾಸಂಗ ಮಾಡುವ ಕಾಲೇಜಿನಿಂದ ಕನಿಷ್ಠ 5 ಕಿ.ಮೀ. ದೂರದವರಾಗಿರಬೇಕು. ಆದರೆ, ವಿದ್ಯಾರ್ಥಿಯ ಸ್ವಂತ ಸ್ಥಳ, ನಗರ/ಪಟ್ಟಣ ಆಗಿದ್ದು, ಅವರು ಬೇರೆ ನಗರ/ಪಟ್ಟಣದಲ್ಲಿ ಇರುವ ಕಾಲೇಜುಗಳಲ್ಲಿ ವ್ಯಾಸಂಗ ಮಾಡುತ್ತಿದ್ದಲ್ಲಿ, ಅಂತಹವರು ಈ ಸೌಲಭ್ಯಕ್ಕೆ ಅರ್ಹರಿರುತ್ತಾರೆ.

3) ಹೊಸ ಮತ್ತು ನವೀಕರಣ ವಿದ್ಯಾರ್ಥಿಗಳು ಈ ಸೌಲಭ್ಯ ಪಡೆಯಲು ಈ ಹಿಂದಿನ ವರ್ಷದ ವಾರ್ಷಿಕ ಪರೀಕ್ಷೆಯಲ್ಲಿ ಈ ಕೆಳಗಿನಂತೆ ಕನಿಷ್ಠ ಅಂಕಗಳನ್ನು ಪಡೆದು ಉತ್ತೀರ್ಣರಾಗಿರಬೇಕು.

| ಕ್ರ ಸಂ. | ಪ್ರವರ್ಗ | ಹೊಸ | ನವೀಕರಣ |
|---|---|---|---|
| 1 | ಪ್ರವರ್ಗ-1 | 40% | 50% |
| 2 | ಪ್ರವರ್ಗ-2ಎ, 3ಎ ಮತ್ತು 3ಬಿ | 50% | 60% |

ಋ) i) ಸಮಾನ ಕೋರ್ಸುಗಳಲ್ಲಿ ಒಂದಕ್ಕಿಂತ ಹೆಚ್ಚು ಬಾರಿ ವ್ಯಾಸಂಗ ಮಾಡುತ್ತಿದ್ದಲ್ಲಿ, ಅಂತಹವರು ಅರ್ಹರಿರುವುದಿಲ್ಲ. (ಉದಾ: ಬಿ.ಎ ನಂತರ ಬಿ.ಕಾಂ, ಎಂ.ಎ (ಕನ್ನಡ) ನಂತರ ಎಂ.ಎ (ಇಂಗ್ಲೀಷ್), ಬಿ.ಎಡ್ ನಂತರ ಎಲ್.ಎಲ್.ಬಿ, ಇತ್ಯಾದಿಗಳಿಗೆ ಪ್ರವೇಶ ಪಡೆದಿದ್ದಲ್ಲಿ)

ii) ಸ್ನಾತಕೋತ್ತರ ವೈದ್ಯಕೀಯ ಕೋರ್ಸುಗಳಲ್ಲಿ ವ್ಯಾಸಂಗ ಮಾಡುವ ವಿದ್ಯಾರ್ಥಿಗಳು, ಕೋರ್ಸಿನ ಅವಧಿಯಲ್ಲಿ ಮೆಡಿಕಲ್ ಪ್ರಾಕ್ಟೀಸ್ ಮಾಡುತ್ತಿದ್ದಲ್ಲಿ, ಈ ಸೌಲಭ್ಯಕ್ಕೆ ಅರ್ಹರಿರುವುದಿಲ್ಲ.

iii) ಕಲೆ, ವಿಜ್ಞಾನ, ಹಾಗೂ ವಾಣಿಜ್ಯ ಕೋರ್ಸುಗಳ, ಪದವಿ ಅಥವಾ ಸ್ನಾತಕೋತ್ತರ ಪದವಿಗಳಲ್ಲಿ ಉತ್ತೀರ್ಣ/ಅನುತ್ತೀರ್ಣರಾದವರು ಅಂಗೀಕೃತ ವೃತ್ತಿಪರ ಅಥವಾ ತಾಂತ್ರಿಕ ಸರ್ಟಿಫಿಕೇಟ್, ಡಿಪ್ಲೋಮ, ಪದವಿ ಕೋರ್ಸುಗಳಲ್ಲಿ ವ್ಯಾಸಂಗ ಮಾಡಿದ್ದಲ್ಲಿ, ಹಾಗೂ ಇತರೆ ರೀತಿ ಅರ್ಹರಿದ್ದಲ್ಲಿ ಅವರು ಈ ಯೋಜನೆಯ ಅಡಿ ಸೌಲಭ್ಯಗಳಿಗೆ ಅರ್ಹರಿರುತ್ತಾರೆ. ಒಂದಕ್ಕಿಂತ ಹೆಚ್ಚು ಬಾರಿ ಕೋರ್ಸುಗಳ ಬದಲಾವಣೆ ಮಾಡಿಕೊಂಡವರು ಅರ್ಹರಿರುವುದಿಲ್ಲ.

iv) ಒಂದೇ ಕುಟುಂಬದ ಇಬ್ಬರು ಗಂಡು ಮಕ್ಕಳು ಮಾತ್ರ ಈ ಯೋಜನೆಗೆ ಅರ್ಹರು. ಆದರೆ, ಈ ನಿರ್ಬಂಧ ಹೆಣ್ಣು ಮಕ್ಕಳಿಗೆ ಅನ್ವಯಿಸುವುದಿಲ್ಲ.

ವಿದ್ಯಾಸಿರಿ ದರಗಳು:

ಪ್ರತಿ ತಿಂಗಳಿಗೆ ರೂ.1500/-ರಂತೆ, ಶೈಕ್ಷಣಿಕ ಅವಧಿಯ 10 ತಿಂಗಳಿಗೆ ಒಟ್ಟು ರೂ.15,000/- ಸಹಾಯಧನವನ್ನು ನೀಡಲಾಗುವುದು.

ಆಯುಕ್ತರು,
ಹಿಂದುಳಿದ ವರ್ಗಗಳ ಕಲ್ಯಾಣ ಇಲಾಖೆ
ಬೆಂಗಳೂರು.

## ಕರ್ನಾಟಕ ವಿಧಾನ ಸಭೆ

| | |
|---|---|
| ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ | 2642 |
| ಸದಸ್ಯರ ಹೆಸರು | ಡಾ ॥ ಶ್ರೀ ಅಜಯ್ ಧರ್ಮ ಸಿಂಗ್ (ಜೇವರ್ಗಿ) |
| ಉತ್ತರಿಸಬೇಕಾದ ದಿನಾಂಕ | 18-03-2021 |
| ಉತ್ತರಿಸಬೇಕಾದ ಸಚಿವರು | ಪ್ರಾಥಮಿಕ ಮತ್ತು ಪ್ರೌಢ ಶಿಕ್ಷಣ ಹಾಗೂ ಸಕಾಲ ಸಚಿವರು |

| ಪ್ರಶ್ನೆ | ಉತ್ತರ |
|---|---|
| ಅ) ಶಾಲಾ ಶುಲ್ಕ ಪಾವತಿಸದ ವಿದ್ಯಾರ್ಥಿಗಳಿಗೆ ಆನ್‌ಲೈನ್ ಶಿಕ್ಷಣವನ್ನು ಸ್ಥಗಿತಗೊಳಿಸುವುದಾಗಿ ಖಾಸಗಿ ಶಿಕ್ಷಣ ಸಂಸ್ಥೆಗಳು ಪೋಷಕರಿಗೆ ಎಚ್ಚರಿಸಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; (ವಿವರ ನೀಡುವುದು)<br><br>ಆ) ಬಂದಿದ್ದಲ್ಲಿ, ಅಂತಹ ಶಿಕ್ಷಣ ಸಂಸ್ಥೆಗಳ ವಿರುದ್ಧ ಸರ್ಕಾರ ಯಾವ ಕ್ರಮ ಜರುಗಿಸಲು ಉದ್ದೇಶಿಸಿದೆ; (ಮಾಹಿತಿ ಒದಗಿಸುವುದು) | ಬಂದಿದೆ,<br><br>ಆನ್‌ಲೈನ್ ಶಿಕ್ಷಣದ ವಿಷಯವಾಗಿ ಕರ್ನಾಟಕ ರಾಜ್ಯ ಉಚ್ಚ ನ್ಯಾಯಾಲಯದ ಆದೇಶದ ಹಿನ್ನೆಲೆಯಲ್ಲಿ ಮಾನವ ಸಂಪನ್ಮೂಲ ಅಭಿವೃದ್ಧಿ ಸಚಿವಾಲಯ ಮಾರ್ಗದರ್ಶಿ 'ಪ್ರಗ್ಯಾತಾ'ಅನ್ನು ಅನುಸರಿಸುವ ಕುರಿತು ಸರ್ಕಾರದ ಆದೇಶ ಸಂಖ್ಯೆ: ಇಪಿ 139 ಪಿಜಿಸಿ 2020, ದಿನಾಂಕ:27-06-2020ರಲ್ಲಿ ಸೂಚನೆಗಳನ್ನು ಹೊರಡಿಸಿದ್ದು, ಕೋವಿಡ್-19ರ ಹಿನ್ನೆಲೆಯಲ್ಲಿ ನಿಯಮಿತ ಶಿಕ್ಷಣಕ್ಕೆ ಪೂರಕವಾಗಿ ಆನ್‌ಲೈನ್ ಶಿಕ್ಷಣ ಒದಗಿಸಬೇಕಾಗಿ ಬಂದಿರುವುದರಿಂದ. ಆನ್‌ಲೈನ್ ಶಿಕ್ಷಣಕ್ಕಾಗಿ ಯಾವುದೇ ಹೆಚ್ಚುವರಿ ಶುಲ್ಕ ವಿಧಿಸಬಾರದಾಗಿ ತಿಳಿಸಿದೆ. ಇದಕ್ಕಾಗಿ ತಗಲುವ ವೆಚ್ಚವನ್ನು ನಿಯಮಿತ ವಾರ್ಷಿಕ ಬೋಧನಾ ಶುಲ್ಕದಿಂದಲೇ ಭರಿಸತಕ್ಕದೆಂದು ಆದೇಶಿಸಿದೆ. (ಅನುಬಂಧದಲ್ಲಿರಿಸಿದೆ)<br><br>ವಿದ್ಯಾರ್ಥಿಗಳನ್ನು ಆನ್‌ಲೈನ್ ಶಿಕ್ಷಣದಿಂದ ವಂಚಿತಗೊಳಿಸಿದ ಪ್ರಕರಣಗಳು ಕಂಡುಬಂದಲ್ಲಿ ಸಂಬಂಧಿಸಿದ ಕ್ಷೇತ್ರ ಶಿಕ್ಷಣಾಧಿಕಾರಿಗಳು ಸೂಕ್ತ ಕ್ರಮ ಜರುಗಿಸಲು ಸೂಚಿಸಲಾಗಿದೆ. |
| ಇ) ಸದರಿ ಖಾಸಗಿ ಸಂಸ್ಥೆಗಳು, ಶಿಕ್ಷಣವನ್ನು ಸ್ಥಗಿತಗೊಳಿಸಿದ್ದಲ್ಲಿ ಅಂತಹ ಶಾಲಾ ವಿದ್ಯಾರ್ಥಿಗಳ ಶೈಕ್ಷಣಿಕ ವಿಷಯಗಳಿಗೆ ಸರ್ಕಾರ ಕೈಗೊಳ್ಳಲಿರುವ ಪರ್ಯಾಯ ಕ್ರಮಗಳೇನು (ವಿವರ ನೀಡುವುದು) | ಆನ್‌ಲೈನ್ ಶಿಕ್ಷಣದಿಂದ ವಂಚಿತರಾದ ವಿದ್ಯಾರ್ಥಿಗಳಿಗಾಗಿಯೇ ರಾಜ್ಯ ಶಿಕ್ಷಣ ಸಂಶೋಧನೆ ಮತ್ತು ತರಬೇತಿ ಇಲಾಖೆ, ಬೆಂಗಳೂರು ಮುಖಾಂತರ ಚಂದನ ವಾಹಿನಿಯಲ್ಲಿ ಸಂಯೋಜನಾ ಕಾರ್ಯಕ್ರಮವನ್ನು ಹಮ್ಮಿಕೊಂಡು ಮಕ್ಕಳಿಗೆ ಶಿಕ್ಷಣವನ್ನು ಮುಂದುವರೆಸಲಾಗುತ್ತಿದೆ. |

ಇಪಿ 105 ಪಿಜಿಸಿ 2021

[ ಎಸ್.ಸುರೇಶ್ ಕುಮಾರ್]
ಪ್ರಾಥಮಿಕ ಮತ್ತು ಪ್ರೌಢ ಶಿಕ್ಷಣ ಹಾಗೂ

## ಕರ್ನಾಟಕ ಸರ್ಕಾರದ ನಡವಳಿಗಳು

**ವಿಷಯ** : ರಾಜ್ಯದಲ್ಲಿ ಎಲ್.ಕೆ.ಜಿ, ಯು.ಕೆ.ಜಿ ಮತ್ತು 1 ರಿಂದ 10ನೇ ತರಗತಿಯ ವಿದ್ಯಾರ್ಥಿಗಳಿಗೆ ಆನ್‌ಲೈನ್/ಆಫ್‌ಲೈನ್ ತರಗತಿಗಳನ್ನು ನಡೆಸಲು ಸಮಿತಿ ರಚಿಸುವ ಬಗ್ಗೆ.

**ಓದಲಾಗಿದೆ** : 1) ಆಯುಕ್ತರು, ಸಾರ್ವಜನಿಕ ಶಿಕ್ಷಣ ಇಲಾಖೆ, ರವರ ದಿನಾಂಕ:02.06.2020ರಂದು ನಡೆದ ಸಭೆಯ ನಡವಳಿ.

2) ಮಾನ್ಯ ಪ್ರಾಥಮಿಕ ಮತ್ತು ಪ್ರೌಢ ಶಿಕ್ಷಣ ಹಾಗೂ ಸಕಾಲ ಸಚಿವರು ರವರ ಟಿಪ್ಪಣಿ ಸಂಖ್ಯೆ: ಪ್ರಾ.ಪ್ರೌ.ಸ.ಸ/4841/2019-20, ದಿನಾಂಕ:11.06.2020.

3) ಆಯುಕ್ತರು, ಸಾರ್ವಜನಿಕ ಶಿಕ್ಷಣ ಇಲಾಖೆ, ಇವರ ಏಕ ಕಡತ ಸಂಖ್ಯೆ: CPIBM-49-EV-2020

**ಪ್ರಸ್ತಾವನೆ :**

ಮೇಲೆ ಓದಲಾದ ಕ್ರಮ ಸಂಖ್ಯೆ(1)ರ ಸಭಾ ನಡವಳಿಯಲ್ಲಿ ಆಯುಕ್ತರು, ಸಾರ್ವಜನಿಕ ಶಿಕ್ಷಣ ಇಲಾಖೆ ರವರು ದಿನಾಂಕ:02.06.2020ರಂದು ವಿವಿಧ ಸಂಘ ಸಂಸ್ಥೆಗಳು, ಶಾಲಾ ಆಡಳಿತ ಮಂಡಳಿಗಳು ಮತ್ತು ಶಿಕ್ಷಣ ತಜ್ಞರೊಂದಿಗೆ ಸಭೆಯನ್ನು ನಡೆಸಿ, ಸುಧೀರ್ಘವಾಗಿ ಚರ್ಚಿಸಿ ಪೂರ್ವ ಪ್ರಾಥಮಿಕ, ಪ್ರಾಥಮಿಕ ಮತ್ತು ಪ್ರೌಢ ಶಿಕ್ಷಣ ಪಡೆಯುವ ವಿದ್ಯಾರ್ಥಿಗಳ ಸಂಬಂಧದಲ್ಲಿ ಶಿಕ್ಷಣವನ್ನು ಒದಗಿಸುವ ನಿಟ್ಟಿನಲ್ಲಿ, ವಯೋಮಾನಕ್ಕನುಗುಣವಾಗಿ ವಿದ್ಯಾರ್ಥಿಗಳನ್ನು ಕಲಿಕಾ ಪ್ರಕ್ರಿಯೆಯಲ್ಲಿ ತೊಡಗಿಸಿಕೊಳ್ಳಲು ಆನ್ ಲೈನ್ ಮೂಲಕ ತರಗತಿಗಳನ್ನು ನಡೆಸುವ ಬಗ್ಗೆ ನಿರ್ಣಯಿಸಲಾಗಿದೆ.

ಮೇಲೆ ಓದಲಾದ ಕ್ರಮ ಸಂಖ್ಯೆ(2)ರ ಟಿಪ್ಪಣಿಯಲ್ಲಿ ಕೋವಿಡ್-19 ವೈರಸ್ ಸೋಂಕು ರಾಜ್ಯದಲ್ಲಿ ಹರಡುತ್ತಿರುವ ಹಿನ್ನಲೆಯಲ್ಲಿ 2020-21ನೇ ಸಾಲಿಗೆ ಶಾಲೆಗಳು ಪ್ರಾರಂಭವಾಗದಿರುವ ಹಿನ್ನಲೆಯಲ್ಲಿ, ಮಕ್ಕಳು ಕಲಿಕೆಯ ಅವಕಾಶಗಳಿಂದ ವಂಚಿತರಾಗದಂತೆ ಹಾಗೂ ಈ ಸನ್ನಿವೇಶದಲ್ಲಿ ವಯೋಮಾನಕ್ಕನುಗುಣವಾಗಿ ಮತ್ತು ಸರ್ಕಾರದ ನೀತಿಗೆ ಅನುಸಾರವಾಗಿ ಶಿಕ್ಷಣ ವನ್ನು ನೀಡಲು ಕೆಲವು ಮಾರ್ಗೋಪಾಯಗಳನ್ನು ಸೂಚಿಸಿರುತ್ತಾರೆ.

ಮೇಲೆ ಓದಲಾದ ಕ್ರಮ ಸಂಖ್ಯೆ(3)ರ ಏಕ ಕಡತದಲ್ಲಿ ಮಾನ್ಯ ಶಿಕ್ಷಣ ಸಚಿವರ ದಿನಾಂಕ:11.06.2020ರ ಟಿಪ್ಪಣಿ ಹಾಗೂ ದಿನಾಂಕ:02.06.2020ರ ಆಯುಕ್ತರು, ಸಾರ್ವಜನಿಕ ಶಿಕ್ಷಣ ಇಲಾಖೆ ರವರ ನಡವಳಿಯನ್ವಯ ಪರಿಶೀಲಿಸಿ, ಕಿರಿಯ ವಯಸ್ಸಿನ ವಿದ್ಯಾರ್ಥಿಗಳಿಗೆ ಆನ್ ಲೈನ್ ತರಗತಿಗಳನ್ನು ನಡೆಸುವ ಬಗ್ಗೆ ನಿಮ್ಹಾನ್ಸ್ ಸಂಸ್ಥೆಯಿಂದ ಸಾದಕ ಬಾದಕಗಳ ಬಗ್ಗೆ ಅಭಿಪ್ರಾಯ ಪಡೆದು, ರಾಜ್ಯದಲ್ಲಿನ ರಾಜ್ಯ ಪಠ್ಯಕ್ರಮ ಹಾಗೂ ಇನ್ನಿತರೆ ಪಠ್ಯಕ್ರಮಗಳಾದ ಐ.ಸಿ.ಎಸ್.ಇ/ಸಿ.ಬಿ.ಎಸ್.ಇ/ಆಂತರಾಷ್ಟ್ರೀಯ ಪಠ್ಯಕ್ರಮ ಸೇರಿದಂತೆ ಎಲ್ಲಾ ಶಾಲೆಗಳು ಎಲ್.ಕೆ.ಜಿ ಯಿಂದ 5ನೇ ತರಗತಿಯವರೆಗೆ ಆನ್ ಲೈನ್ ಬೋಧನೆಯನ್ನು ಮಾಡುವುದು ಸೂಕ್ತವಲ್ಲವೆಂದು ಹಾಗೂ ಒಂದು ವೇಳೆ ಈಗಾಗಲೇ ಆನ್ ಲೈನ್ ತರಗತಿಗಳನ್ನು ಪ್ರಾರಂಭಿಸಿದಲ್ಲಿ ತಕ್ಷಣದಿಂದ ಸ್ಥಗಿತಗೊಳಿಸಲು ಮತ್ತು 6-10ನೇ ತರಗತಿಯವರೆಗೆ ಆನ್ ಲೈನ್ ಶಿಕ್ಷಣವನ್ನು ವಯೋಮಾನಕ್ಕನುಗುಣವಾಗಿ, ವೈಜ್ಞಾನಿಕವಾಗಿ ಅಳವಡಿಸಿಕೊಳ್ಳಲು ಈ ಸಂಬಂಧ ಮಾರ್ಗಸೂಚಿಗಳನ್ನು ಸಿದ್ಧಪಡಿಸಲು ವಿವಿಧ ತಜ್ಞರು ಹಾಗೂ ಅಧಿಕಾರಿಗಳನ್ನೊಳಗೊಂಡ ಒಂದು ಸಮಿತಿಯನ್ನು ರಚಿಸಿ, ಅದರ ಶಿಫಾರಸ್ಸುಗಳನ್ನು ಪಡೆದು, ಪರಿಶೀಲಿಸುವುದು ಸೂಕ್ತವೆಂದು ಪ್ರಸ್ತಾಪಿಸಿ, ಈ ಸಂಬಂಧ ಸರ್ಕಾರದಿಂದ ಸೂಕ್ತ ಆದೇಶ ಹೊರಡಿಸಲು ಪ್ರಸ್ತಾವನೆಯನ್ನು ಸರ್ಕಾರಕ್ಕೆ ಸಲ್ಲಿಸಿರುತ್ತಾರೆ.

ಪ್ರಸ್ತಾವನೆಯಲ್ಲಿ ಒದಗಿಬಂದ ದಾಖಲೆಗಳನ್ನು ಕೂಲಂಕಷವಾಗಿ ಪರಿಶೀಲಿಸಿ, ಮಕ್ಕಳ ವಯೋಮಾನಕ್ಕನುಗುಣವಾಗಿ ಮತ್ತು ಮಕ್ಕಳು ಕಲಿಕೆಯ ಅವಕಾಶದಿಂದ ವಂಚಿತರಾಗದಂತೆ ಹಾಗೂ ಮಕ್ಕಳ ಆಯಾ ವಯೋಮಾನಕ್ಕನುಗುಣವಾಗಿ ನಿಗಧಿತ ಸ್ಕ್ರೀನ್ ಸಮಯದಲ್ಲಿ ಮಾತ್ರ ತಂತ್ರಜ್ಞಾನ ಸಾಧನಗಳನ್ನು ಬಳಸುವಂತೆ ಪ್ರೇರೆಪಿಸಲು ಅನುಕೂಲವಾಗುವಂತೆ ಹಾಗೂ ವಿದ್ಯಾರ್ಥಿಗಳು ಮೊಬೈಲ್/ಲ್ಯಾಪ್ ಟಾಪ್ ಹಾಗೂ ವಿವಿಧ ತಂತ್ರಜ್ಞಾನ ಪರಿಕರಗಳಿಗೆ ವ್ಯಸನವಾಗದಂತೆ ಎಚ್ಚರಿಕೆ ವಹಿಸಿ ಎಲ್ಲಾ ಶಾಲೆಗಳ ಎಲ್.ಕೆ.ಜಿ ಯಿಂದ 5ನೇ ತರತಗತಿಯವರೆಗೆ ಆನ್ ಲೈನ್ ಬೋಧನೆಯನ್ನು ಸ್ಥಗಿತಗೊಳಿಸಲು ಹಾಗೂ 6-10ನೇ ತರಗತಿಯವರೆಗೆ ಆನ್ ಲೈನ್ ಶಿಕ್ಷಣವನ್ನು ವಯೋಮಾನಕ್ಕನುಗುಣವಾಗಿ ವೈಜ್ಞಾನಿಕವಾಗಿ ಅಳವಡಿಸಿಕೊಳ್ಳಲು ಈ ಸಂಬಂಧ ಮಾರ್ಗಸೂಚಿಗಳನ್ನು ಸಿದ್ಧಪಡಿಸಲು ಒಂದು ಸಮಿತಿಯನ್ನು ರಚಿಸಲು ಹಾಗೂ ಆನ್ ಲೈನ್ ಬೊಧನೆಯ ಹೆಸರಿನಲ್ಲಿ ಯಾವುದೇ ಶುಲ್ಕವನ್ನು ವಸೂಲಾತಿ ಮಾಡದಿರುವಂತೆ ಎಲ್ಲಾ ಶಿಕ್ಷಣ ಸಂಸ್ಥೆಗಳಿಗೆ ನಿರ್ದೇಶನ ನೀಡಲು ಸರ್ಕಾರವು ನಿರ್ಣಯಿಸಿದೆ. ಅದರಂತೆ, ಈ ಆದೇಶ.

**ಸರ್ಕಾರದ ಆದೇಶ ಸಂಖ್ಯೆ : ಇಪಿ 139 ಪಿಜಿಸಿ 2020, ಬೆಂಗಳೂರು ದಿನಾಂಕ :15-06-2020**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ, ಕರ್ನಾಟಕ ಶಿಕ್ಷಣ ಕಾಯ್ದೆ 1983ರ ಸೆಕ್ಷನ್ (7)ರಡಿಯಲ್ಲಿ ಅಧಿಕಾರ ಪ್ರತ್ಯಾಯೋಜಿಸಿ, ರಾಜ್ಯದಲ್ಲಿನ ರಾಜ್ಯ ಪಠ್ಯಕ್ರಮ ಹಾಗೂ ಇನ್ನಿತರೇ ಪಠ್ಯಕ್ರಮಗಳಾದ ಐಸಿಎಸ್‌ಇ/ಸಿಬಿಎಸ್‌ಇ/ಅಂತರಾಷ್ಟ್ರೀಯ ಪಠ್ಯಕ್ರಮ ಸೇರಿದಂತೆ ಎಲ್ಲಾ ಶಾಲೆಗಳು ಎಲ್‌ಕೆಜಿ ಯಿಂದ 05ನೇ ತರಗತಿಯವರೆಗೆ ಆನ್‌ಲೈನ್ /ಆಫ್ ಲೈನ್ ಬೋಧನೆಯನ್ನು ಸರ್ಕಾರದ ಮಾರ್ಗಸೂಚಿಗಳು ಬರುವವರೆಗು ಮಾಡತಕ್ಕದ್ದಲ್ಲ. ಅಂತೆಯೇ ಎಲ್.ಕೆ.ಜಿ ಯಿಂದ 05ನೇ ತರಗತಿಯವರೆಗೆ ಆನ್‌ಲೈನ್ /ಆಫ್ ಲೈನ್ ಹೊರತುಪಡಿಸಿ ಸಮೂಹ ಮಾಧ್ಯಮಗಳು, ತಂತ್ರಜ್ಞಾನ ಆಧಾರಿತವಾದ ಬೋಧನೆಯನ್ನು ಅಳವಡಿಸಿಕೊಳ್ಳುವ ಕುರಿತಂತೆ ಮಾರ್ಗಸೂಚಿಗಳು ರಚನೆಯಾಗಬೇಕಿರುವುದರಿಂದ, ಈಗಾಗಲೇ ಒಂದು ವೇಳೆ ಆನ್‌ಲೈನ್ ತರಗತಿಗಳನ್ನು ಪ್ರಾರಂಭಿಸಿದ್ದಲ್ಲಿ ತಕ್ಷಣದಿಂದಲೇ ಸ್ಥಗಿತಗೊಳಿಸಲು ಹಾಗೂ ಆನ್ ಲೈನ್ ಬೋಧನೆಯ ಹೆಸರಿನಲ್ಲಿ ಯಾವುದೇ ಶುಲ್ಕವನ್ನು ವಸೂಲಾತಿ ಮಾಡದಂತೆ ಎಲ್ಲಾ ಸರ್ಕಾರಿ/ಅನುದಾನಿತ/ಅನುದಾನರಹಿತ ಶಿಕ್ಷಣ ಸಂಸ್ಥೆಗಳಿಗೆ ಆದೇಶಿಸಿದೆ.

ಮುಂದುವರೆದು, 06 ರಿಂದ 10ನೇ ತರಗತಿಯವರೆಗೆ ಆನ್‌ಲೈನ್ ಶಿಕ್ಷಣವನ್ನು ವಯೋಮಾನಕ್ಕೆ ಅನುಗುಣವಾಗಿ, ವೈಜ್ಞಾನಿಕವಾಗಿ ಅಳವಡಿಸಿಕೊಳ್ಳಲು ಈ ಸಂಬಂಧ ಮಾರ್ಗಸೂಚಿಗಳನ್ನು ಸಿದ್ಧಪಡಿಸಲು ಈ ಕೆಳಕಂಡ ಸಮಿತಿಯನ್ನು ರಚಿಸಲಾಗಿದೆ :

| ಕ್ರಮ ಸಂಖ್ಯೆ | ಹೆಸರು ಮತ್ತು ಪದನಾಮ/ಪ್ರಾಧಿಕಾರ | ಪದನಾಮ |
|---|---|---|
| 1. | ಡಾ \|\| ಎಂ.ಕೆ. ಶ್ರೀಧರ್,<br>ರಾಷ್ಟ್ರೀಯ ಶಿಕ್ಷಣ ನೀತಿ ನಿರೂಪನಾ ಸಮಿತಿಯ ಸದಸ್ಯ ಕಾರ್ಯದರ್ಶಿ ಹಾಗೂ ಶಿಕ್ಷಣ ತಜ್ಞರು | ಅಧ್ಯಕ್ಷರು |
| 2. | ಡಾ\|\| ಗುರುರಾಜ್ ಕರ್ಜಗಿ,<br>ಶಿಕ್ಷಣ ತಜ್ಞರು | ಸದಸ್ಯರು |
| 3. | ಡಾ\|\| ವಿ.ಪಿ. ನಿರಂಜನಾರಾಧ್ಯ,<br>ಶಿಕ್ಷಣ ತಜ್ಞರು ಹಾಗೂ ಮುಖ್ಯಸ್ಥರು, ಮಗು ಮತ್ತು ಕಾನೂನು ಕೇಂದ್ರ, ರಾಷ್ಟ್ರೀಯ ಕಾನೂನು ಶಾಲೆ | ಸದಸ್ಯರು |

| 4. | ಶ್ರೀ. ಹೃಷಿಕೇಶ್,<br>ಅಜೀಮ್ ಪ್ರೇಮ್ ಜಿ ಫೌಂಡೇಷನ್ | ಸದಸ್ಯರು |
|---|---|---|
| 5. | ನಿಮ್ಹಾನ್ಸ್ ಸಂಸ್ಥೆಯ ಮುಖ್ಯಸ್ಥರು ಹಾಗೂ ಆ ಸಂಸ್ಥೆಯ ಮಕ್ಕಳ ಮಾನಸಿಕ ತಜ್ಞರು | ಸದಸ್ಯರು |
| 6. | ಅರ್ಲಿ ಚೈಲ್ಡ್ ಹುಡ್ ಸಂಘಟನೆಯ ಪ್ರತಿನಿಧಿಗಳು | ಸದಸ್ಯರು |
| 7. | ರಾಜ್ಯ / ಐಸಿಎಸ್‌ಇ / ಸಿಬಿಎಸ್‌ಇ / ಅಂತರಾಷ್ಟ್ರೀಯ ಪಠ್ಯಕ್ರಮವನ್ನು ಬೋಧಿಸುವ ಖಾಸಗಿ ಶಾಲಾ ಆಡಳಿತ ಮಂಡಳಿಗಳ ಸಂಘಟನೆಗಳ ಪ್ರತಿನಿಧಿಗಳು ಹಾಗೂ ಪೋಷಕರು / ವಿದ್ಯಾರ್ಥಿಗಳ ಪ್ರತಿನಿಧಿಗಳು | ಸದಸ್ಯರು |
| 8. | ಡಾ|| ಕೆ.ಜಿ. ಜಗದೀಶ್,<br>ಆಯುಕ್ತರು, ಸಾರ್ವಜನಿಕ ಶಿಕ್ಷಣ ಇಲಾಖೆ | ಸದಸ್ಯರು |
| 9. | ಶ್ರೀ. ಗೋಪಾಲಕೃಷ್ಣ,<br>ನಿರ್ದೇಶಕರು (ಗುಣಮಟ್ಟ), ಸಮಗ್ರ ಶಿಕ್ಷಣ – ಕರ್ನಾಟಕ | ಸದಸ್ಯರು |
| 10 | ಎಂ.ಆರ್. ಮಾರುತಿ,<br>ನಿರ್ದೇಶಕರು, ಡಿ.ಎಸ್.ಇ.ಆರ್.ಟಿ | ಸದಸ್ಯರು |
| 11. | ಡಾ|| ಎಂ.ಟಿ. ರೇಜು, ಭಾ.ಆ.ಸೇ.,<br>ರಾಜ್ಯ ಯೋಜನಾ ನಿರ್ದೇಶಕರು, ಸಮಗ್ರ ಶಿಕ್ಷಣ ಕರ್ನಾಟಕ - ಸದಸ್ಯ ಕಾರ್ಯದರ್ಶಿ | ಸದಸ್ಯ ಕಾರ್ಯದರ್ಶಿ |

**ಸಮಿತಿಯ ಜವಾಬ್ದಾರಿಗಳು:**

- 6 ರಿಂದ 10ನೇ ತರಗತಿಯವರೆಗೆ ಆನ್‌ಲೈನ್ ಶಿಕ್ಷಣವನ್ನು ವಯೋಮಾನಕ್ಕೆ ಅನುಗುಣವಾಗಿ, ವೈಜ್ಞಾನಿಕವಾಗಿ ಅಳವಡಿಸಿಕೊಳ್ಳುವಲ್ಲಿ ಮಾರ್ಗಸೂಚಿಗಳನ್ನು ರಚಿಸುವುದು.
- ಎಲ್.ಕೆ.ಜಿ ಯಿಂದ 05ನೇ ತರಗತಿಯವರೆಗೆ ಆನ್‌ಲೈನ್ ಹೊರತುಪಡಿಸಿ ಸಮೂಹ ಮಾಧ್ಯಮಗಳು, ತಂತ್ರಜ್ಞಾನಾಧಾರಿತವಾದ ಬೋಧನೆಯನ್ನು ಅಳವಡಿಸಿಕೊಳ್ಳುವ ಕುರಿತಂತೆ ಮಾರ್ಗಸೂಚಿಗಳನ್ನು ರಚಿಸುವುದು.
- ಶಿಕ್ಷಣದಲ್ಲಿ ತಂತ್ರಜ್ಞಾನವನ್ನು ಯಾವ ರೀತಿ ಬಳಸಬೇಕು, ಸಾಂಪ್ರದಾಯಕ ತರಗತಿಗಳಿಗೆ ಪರ್ಯಾಯ ಎನ್ನುವ ಭಾವನೆ ಮೂಡದಂತೆ ಮಕ್ಕಳ ಕಲಿಕೆಗೆ ಪ್ರೇರೇಪಣೆ ಹಾಗೂ ಮಕ್ಕಳ ಜ್ಞಾನಾರ್ಜನೆಗೆ ಪೂರಕವಾಗಿ ತಂತ್ರಜ್ಞಾನ ಬಳಕೆ ಹೇಗಿರಬೇಕು. ವಯೋಮಾನಕ್ಕನುಗುಣವಾಗಿ ವಿದ್ಯಾರ್ಥಿಯ ಏಕಾಗ್ರತಾ ಸಾಮರ್ಥ್ಯ, ತಂತ್ರಜ್ಞಾನ ಉಪಕರಣಗಳ ಬಳಕೆಯಿಂದ ಉಂಟಾಗುವ ಆರೋಗ್ಯದ ಮೇಲಿನ ಪರಿಣಾಮಗಳು, ವಿಶೇಷವಾಗಿ ರಾಜ್ಯದ ನಗರ ಹಾಗೂ

ಗ್ರಾಮೀಣ ಪ್ರದೇಶಗಳ ವಿದ್ಯಾರ್ಥಿ/ಪೋಷಕರ ಸಾಮಾಜಿಕ ಸ್ಥಿತಿಗತಿಗಳ ಅಂತರದ ಹಿನ್ನೆಲೆಯಲ್ಲಿ ಈ ರೀತಿಯ ನೀತಿ ನಿರೂಪಣೆಗಳ ಕಾರಣ ಯಾವುದೇ ವಿದ್ಯಾರ್ಥಿಯು ಕಲಿಕೆಯಿಂದ ವಂಚಿತರಾಗದೆ ಮುಖ್ಯ ವಾಹಿನಿಯಲ್ಲಿ ಒಳಗೊಳ್ಳುವುದು. ದೂರದರ್ಶನ ಹಾಗೂ ಸಮೂಹ ಮಾಧ್ಯಮಗಳ ಮುಖಾಂತರವಾದ ಬೋಧನೆ ಹಾಗೂ ಕಲಿಕಾ ಮಾನದಂಡಗಳ ಅನುಪಾಲನೆಯ ಅಂಶವೂ ಸೇರಿದಂತೆ ಈ ಕೋವಿಡ್ ಸಂದರ್ಭದಲ್ಲಿನ ಪರ್ಯಾಯ ಬೋಧನಾ ಕ್ರಮದ ಸಾಧಕ ಬಾಧಕಗಳನ್ನು ಚರ್ಚಿಸಿ, ಮಾರ್ಗಸೂಚಿಗಳನ್ನು ರಚಿಸುವುದು.

- ಈ ಸಮಿತಿಯು ಕೋವಿಡ್-19 ಸಂದರ್ಭದಲ್ಲಿ ಮೇಲ್ಕಂಡಂತೆ ಅವಶ್ಯಕವಿರುವ ತುರ್ತು ತಂತ್ರಜ್ಞಾನಾಧಿರತವಾದ ಬೋಧನಾ ಕ್ರಮಗಳ ಕುರಿತಾದ ಸಲಹೆಯ ಜೊತೆಜೊತೆಗೆ ಮುಂದಿನ ದಿನಗಳಲ್ಲಿ ಈ ಮಾದರಿಯ ಬೋಧನೆಯನ್ನು ಶಿಕ್ಷಣ ವ್ಯವಸ್ಥೆಯಲ್ಲಿ ಅಳವಡಿಸಿಕೊಳ್ಳುವ ಸಂಬಂಧ ದೂರದರ್ಶಿತ್ವದ ಸಲಹಾತ್ಮಕ ಜವಾಬ್ದಾರಿಯನ್ನು ನಿರ್ವಹಿಸುವಲ್ಲಿ ಕೆಲಸ ಮಾಡುವ ವ್ಯವಸ್ಥೆಯನ್ನು ರೂಪಿಸುವುದು.
- ಸಮಿತಿಗೆ ಅಗತ್ಯವಾದ ಕೊಠಡಿ, ಅಗತ್ಯ ಪರಿಕರಗಳನ್ನು ಆಯುಕ್ತರು, ಸಾರ್ವಜನಿಕ ಶಿಕ್ಷಣ ಇಲಾಖೆ ರವರು ಒದಗಿಸತಕ್ಕದ್ದು.
- ಸಮಿತಿಯು ಕಡ್ಡಾಯವಾಗಿ 10 ದಿನಗಳೊಳಗಾಗಿ ಸರ್ಕಾರಕ್ಕೆ ವರದಿ ಸಲ್ಲಿಸತಕ್ಕದ್ದು.
- ಸಮಿತಿಯ ಸರ್ಕಾರೇತರ ಸದಸ್ಯರುಗಳಿಗೆ ಗೌರವ ಸಂಭಾವನೆ ನೀಡುವ ಬಗ್ಗೆ ಪ್ರತ್ಯೇಕ ಆದೇಶ ಹೊರಡಿಸಲಾಗುವುದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ
ಮತ್ತು ಅವರ ಹೆಸರಿನಲ್ಲಿ

(ಎಂ.ಶರಣಬಸಪ್ಪ)
ಸರ್ಕಾರದ ಅಧೀನ ಕಾರ್ಯದರ್ಶಿ,
ಶಿಕ್ಷಣ ಇಲಾಖೆ (ಪ್ರಾಥಮಿಕ)

ಇವರಿಗೆ:

1) ಮಹಾಲೇಖಪಾಲಕರು, ಎ & ಇ, ಬೆಂಗಳೂರು.
2) ಆಯುಕ್ತರು, ಸಾರ್ವಜನಿಕ ಶಿಕ್ಷಣ ಇಲಾಖೆ, ಬೆಂಗಳೂರು - ಸಮಿತಿಗೆ ಸಂಬಂಧ ಪಟ್ಟ ಪ್ರಾಧಿಕಾರ/ಮಂಡಳಿಗಳಿಂದ ಮಾಹಿತಿ ಅಗತ್ಯವೆನಿಸಿದಲ್ಲಿ ನೇರವಾಗಿ ಸಮಿತಿಗೆ ಮಾಹಿತಿ ಒದಗಿಸುವಂತೆ ಕೋರಿದೆ.
3) ನಿರ್ದೇಶಕರು, ಸಮಗ್ರ ಶಿಕ್ಷಣ ಕರ್ನಾಟಕ, ಬೆಂಗಳೂರು.
4) ಅಪರ ಆಯುಕ್ತರು, ಕಲಬುರಗಿ/ಧಾರವಾಡ.
5) ನಿರ್ದೇಶಕರು (ಪ್ರಾಥಮಿಕ/ಪ್ರೌಢ), ಸಾರ್ವಜನಿಕ ಶಿಕ್ಷಣ ಇಲಾಖೆ, ಬೆಂಗಳೂರು.
6) ನಿರ್ದೇಶಕರು(ಗುಣಮಟ್ಟ), ಸಮಗ್ರ ಶಿಕ್ಷಣ-ಕರ್ನಾಟಕ, ಬೆಂಗಳೂರು.
7) ಸಮಿತಿ ಸದಸ್ಯರಿಗೆ-ಆಯುಕ್ತರು, ಸಾರ್ವಜನಿಕ ಶಿಕ್ಷಣ ಇಲಾಖೆ, ಬೆಂಗಳೂರು ಇವರ ಮುಖಾಂತರ.
8) ಖಾಸಗಿ ಅನುದಾನಿತ/ಅನುದಾನರಹಿತ ಶಾಲಾ ಆಡಳಿತ ಮಂಡಳಿಗಳು/ಸಂಘ ಸಂಸ್ಥೆಗಳು- ಆಯುಕ್ತರು, ಸಾರ್ವಜನಿಕ ಶಿಕ್ಷಣ ಇಲಾಖೆ, ಬೆಂಗಳೂರು ಇವರ ಮುಖಾಂತರ.
9) ಶಾಖಾ ರಕ್ಷಾಕಡತ.

## ಕರ್ನಾಟಕ ವಿಧಾನ ಸಭೆ

| | |
|---|---|
| ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ | 2623 |
| ಸದಸ್ಯರ ಹೆಸರು | ಶ್ರೀಮತಿ ಸೌಮ್ಯ ರೆಡ್ಡಿ (ಜಯನಗರ) |
| ಉತ್ತರಿಸಬೇಕಾದ ದಿನಾಂಕ | 18-03-2021 |
| ಉತ್ತರಿಸಬೇಕಾದ ಸಚಿವರು | ಪ್ರಾಥಮಿಕ ಮತ್ತು ಪ್ರೌಢ ಶಿಕ್ಷಣ ಹಾಗೂ ಸಕಾಲ ಸಚಿವರು |

| ಪ್ರಶ್ನೆ | ಉತ್ತರ |
|---|---|
| ಅ) ವಿದ್ಯಾಗಮ ಯೋಜನೆಯಡಿಯಲ್ಲಿ 6, 7ನೇ ತರತಿಗಳು ಮತ್ತು ಪ್ರೌಢ ಶಾಲೆಗಳು ಆರಂಭವಾಗಿದ್ದು, ಮಕ್ಕಳಿಗೆ ಸರಿಯಾದ ಟ್ಯಾಬ್, ಸ್ಮಾರ್ಟ್ ಫೋನ್‌ಗಳ ವ್ಯವಸ್ಥೆ ಇಲ್ಲದಿರುವುದರಿಂದ ಈ ಬಗ್ಗೆ ಸರ್ಕಾರದಿಂದ ಯಾವ ಕ್ರಮವನ್ನು ಜರುಗಿಸಲಾಗಿದೆ; | • ಟ್ಯಾಬ್, ಸ್ಮಾರ್ಟ್ ಫೋನ್‌ಗಳ ವ್ಯವಸ್ಥೆ ಇಲ್ಲದಿರುವ ಮಕ್ಕಳಿಗಾಗಿ ಡಿ.ಎಸ್.ಇ.ಆರ್.ಟಿ ವತಿಯಿಂದ ಸಂವೇದ ಕಾರ್ಯಕ್ರಮದ ಮೂಲಕ ಚಂದನವಾಹಿನಿಯಲ್ಲಿ ಪ್ರತಿದಿನವೂ ಪಠ್ಯಕ್ರಮವನ್ನು ಬೋಧಿಸಲಾಗುತ್ತಿದೆ.<br>• ವಿದ್ಯಾಗಮ ಎಂಬ ವಿನೂತನ ಕಾರ್ಯಕ್ರಮದ ಮೂಲಕ ಬೋಧಿಸಲಾಗುತ್ತಿದೆ.<br>• ಈ ಮಕ್ಕಳಿಗೆ ಟ್ಯಾಬ್, ಸ್ಮಾರ್ಟ್ ಫೋನ್ ಇತ್ಯಾದಿಗಳ ಅವಶ್ಯಕತೆಯಿರುವುದಿಲ್ಲ.<br>ಫೆಬ್ರವರಿ 2021 ರಿಂದ 6-9ನೇ ತರಗತಿಗಳನ್ನು ನಡೆಸಲು 'ವಿದ್ಯಾಗಮ' ಕಾರ್ಯಕ್ರಮದಡಿ ನಡೆಸಲು ಅವಕಾಶ ಕಲ್ಪಿಸಲಾಗಿತ್ತು.<br>ಈ ಕಾರ್ಯಕ್ರಮದಲ್ಲಿ ಶಿಕ್ಷಕರು ವಿದ್ಯಾರ್ಥಿಗಳ ಸಣ್ಣ ಸಣ್ಣ ತಂಡಗಳನ್ನು ಅನೌಪಚಾರಿಕವಾಗಿ ಬೋಧನಾ ಕಲಿಕಾ ಚಟುವಟಿಕೆಗಳಲ್ಲಿ ತೊಡಗಿಸಿಕೊಳ್ಳುತ್ತಿದ್ದರು. 22-02-2021 ರಿಂದ 6-9ನೇ ತರಗತಿಯವರೆಗಿನ ವಿದ್ಯಾರ್ಥಿಗಳಿಗೆ ಶಾಲೆಗಳಲ್ಲಿಯೇ ತರಗತಿಗಳನ್ನು ನಡೆಸಲಾಗುತ್ತಿದೆ. ಜನವರಿ 2021 ರಿಂದ 10ನೇ ತರಗತಿಗಳು ಶಾಲೆಗಳಲ್ಲಿಯೇ ನಡೆಯುತ್ತಿದ್ದು, ಈ ಸನ್ನಿವೇಶದಲ್ಲಿ ಪ್ರಸ್ತುತ ವಿದ್ಯಾರ್ಥಿಗಳಿಗೆ ಟ್ಯಾಬ್, ಸ್ಮಾರ್ಟ್ ಫೋನ್‌ಗಳ ಅಗತ್ಯವಿರುವುದಿಲ್ಲ. |
| ಆ) ಎಸ್.ಎಸ್.ಎಲ್.ಸಿ ಪರೀಕ್ಷೆಗೆ ಹಾಗೂ ದ್ವಿತೀಯ ಪಿಯುಸಿ ಪರೀಕ್ಷೆಗಳಿಗೆ ಯಾವ ಯಾವ ವ್ಯವಸ್ಥೆಗಳನ್ನು ಮಾಡಿಕೊಳ್ಳಲಾಗಿದೆ? (ವಿವರ ನೀಡುವುದು) | ಎಸ್.ಎಸ್.ಎಲ್.ಸಿ ಪರೀಕ್ಷೆಗೆ ಹಾಗೂ ದ್ವಿತೀಯ ಪಿಯುಸಿ ಪರೀಕ್ಷೆಗಳಿಗೆ ಈ ಕೆಳಕಂಡ ವ್ಯವಸ್ಥೆಗಳನ್ನು ಮಾಡಿಕೊಳ್ಳಲಾಗಿದೆ:-<br>• ಎಸ್.ಎಸ್.ಎಲ್.ಸಿ ವಿದ್ಯಾರ್ಥಿಗಳಿಗೆ ದಿನಾಂಕ: 01-01-2021 ರಿಂದ ಪೂರ್ಣ ಪ್ರಮಾಣದಲ್ಲಿ ತರಗತಿಗಳನ್ನು ನಡೆಸುತ್ತಿದ್ದು, ಎಲ್ಲಾ ಬೋಧನಾ ಕ್ರಮಗಳನ್ನು ಹಮ್ಮಿಕೊಳ್ಳಲಾಗಿದೆ.<br>• ಎಸ್.ಎಸ್.ಎಲ್.ಸಿ ವಾರ್ಷಿಕ ಪರೀಕ್ಷೆಯನ್ನು ಜೂನ್/ಜುಲೈ-2021ರಲ್ಲಿ ನಡೆಸಲು ದಿನಾಂಕ:19-01-2021ರಂದು ಮಂಡಳಿಯಿಂದ ಅಧಿಸೂಚನೆಯನ್ನು ಹೊರಡಿಸಲಾಗಿದೆ. |

| | |
|---|---|
| | • ಎಸ್.ಎಸ್.ಎಲ್.ಸಿ ಪರೀಕ್ಷೆಯನ್ನು ದಿನಾಂಕ:21–06–2021 ರಿಂದ 05–07–2021ರವರೆಗೆ ನಡೆಸಲು ವೇಳಾಪಟ್ಟಿ ಪ್ರಕಟಿಸಲಾಗಿದೆ.<br>• ಕೋವಿಡ್–19 ಸಾಂಕ್ರಾಮಿಕ ರೋಗದ ಹಿನ್ನೆಲೆಯಲ್ಲಿ ಶೇಕಡ 30ರಷ್ಟು ಪಠ್ಯಕ್ರಮವನ್ನು ಕಡಿತಗೊಳಿಸಿದ ಕಾರಣ ಪ್ರಶ್ನೆ ಪತ್ರಿಕೆಯನ್ನು ಮರುವಿನ್ಯಾಸಗೊಳಿಸಲಾಗಿದೆ ಹಾಗೂ 02 ಮಾದರಿ ಪ್ರಶ್ನೆ ಪತ್ರಿಕೆಗಳನ್ನು ಮಂಡಳಿಯ ಜಾಲತಾಣದಲ್ಲಿ ಪ್ರಕಟಿಸಲಾಗಿದೆ.<br>• ಕೋವಿಡ್–19 ಸಾಂಕ್ರಾಮಿಕ ರೋಗದ ಹಿನ್ನೆಲೆಯಲ್ಲಿ ಮುಂಜಾಗ್ರತಾ ಕ್ರಮವಾಗಿ ಪರೀಕ್ಷಾ ಕೇಂದ್ರಗಳಲ್ಲಿ ಅಂತರವನ್ನು ಕಾಯ್ದುಕೊಳ್ಳಲು ಸೂಕ್ತ ರೀತಿಯಲ್ಲಿ ಪರೀಕ್ಷಾ ಕೇಂದ್ರಗಳ ಸಂಖ್ಯೆಯನ್ನು ಹೆಚ್ಚಿಸಲಾಗಿದೆ.<br>• ಮಂಡಳಿಯು ಅಧಿಸೂಚನೆಯಂತೆ ಎಸ್.ಎಸ್.ಎಲ್.ಸಿ ವಿದ್ಯಾರ್ಥಿಗಳಿಂದ ಆನ್‌ಲೈನ್ ಮೂಲಕ ಪರೀಕ್ಷೆಗೆ ಅರ್ಜಿ ನೋಂದಾಯಿಸಲು ಕೊನೆಯ ದಿನಾಂಕ:15–03–2021ರವರೆಗೆ ನಿಗದಿಪಡಿಸಿದ್ದು, ಒಟ್ಟು 8,71,465 ವಿದ್ಯಾರ್ಥಿಗಳು ನೋಂದಾಯಿಸಿರುತ್ತಾರೆ.<br>• ಪರೀಕ್ಷೆ ನಡೆಸಲು ಅಗತ್ಯವಾದ ಇತರೆ ಪೂರ್ವಭಾವಿ ಕಾರ್ಯಗಳನ್ನು ಕೈಗೊಳ್ಳಲಾಗಿದೆ. |

ಇಪಿ 104 ಪಿಜಿಸಿ 2021

[ ಎಸ್.ಸುರೇಶ್ ಕುಮಾರ್]
ಪ್ರಾಥಮಿಕ ಮತ್ತು ಪ್ರೌಢ ಶಿಕ್ಷಣ ಹಾಗೂ
ಸಕಾಲ ಸಚಿವರು.

# ಕರ್ನಾಟಕ ವಿಧಾನಸಭೆ

1) ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 1575

2) ಸದಸ್ಯರ ಹೆಸರು : ಶ್ರೀ ನರೇಂದ್ರ. ಆರ್. (ಹನೂರು)

3) ಉತ್ತರಿಸುವ ದಿನಾಂಕ : 18.03.2021

4) ಉತ್ತರಿಸುವವರು : ಅರಣ್ಯ, ಕನ್ನಡ ಮತ್ತು ಸಂಸ್ಕೃತಿ ಸಚಿವರು

| ಕ್ರ ಸಂ | ಪ್ರಶ್ನೆ | ಉತ್ತರ |
|---|---|---|
| ಅ) | ಚಾಮರಾಜನಗರ ಜಿಲ್ಲೆಯ ಅರಣ್ಯದಂಚಿನ ಹೊಲಗದ್ದೆಗಳು ಹಾಗೂ ತೋಟಗಳಲ್ಲಿನ ಬೆಳೆಗಳನ್ನು ಕಾಡು ಪ್ರಾಣಿಗಳು ನಾಶ ಮಾಡುತ್ತಿರುವುದು ಹಾಗೂ ಅಲ್ಲಿನ ನಿವಾಸಿಗಳ ಪ್ರಾಣಹಾನಿ ಮಾಡುತ್ತಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; | ಬಂದಿದೆ. |
| ಆ) | ಬಂದಿದ್ದಲ್ಲಿ, ಕಳೆದ ಮೂರು ವರ್ಷಗಳಲ್ಲಿ ಜಿಲ್ಲೆಯಾದ್ಯಂತ ಕಾಡು ಪ್ರಾಣಿಗಳ ಹಾವಳಿಯಿಂದ ಎಷ್ಟು ಹೆಕ್ಟೇರ್ ವಿಸ್ತೀರ್ಣದಲ್ಲಿ ಬೆಳೆಯು ಹಾನಿಯಾಗಿದೆ ಹಾಗೂ ಎಷ್ಟು ಜನರ ಪ್ರಾಣ ಹಾನಿಯಾಗಿದೆ; | ಚಾಮರಾಜನಗರ ಜಿಲ್ಲಾ ವ್ಯಾಪ್ತಿಯಲ್ಲಿ ಕಳೆದ ಮೂರು ವರ್ಷಗಳಲ್ಲಿ ಕಾಡುಪ್ರಾಣಿಗಳ ಹಾವಳಿಯಿಂದ ಉಂಟಾದ ಬೆಳೆಹಾನಿ ಹಾಗೂ ಮಾನವ ಪ್ರಾಣಹಾನಿ ಪ್ರಕರಣಗಳ ವಿವರ ಕೆಳಕಂಡಂತಿದೆ: |

| ಕ್ರ ಸಂ | ವರ್ಷ | ವಿಭಾಗ | ಬೆಳೆ ಹಾನಿ ಯಾಗಿರುವ ವಿಸ್ತೀರ್ಣ (ಹೆ.ಗಳಲ್ಲಿ) | ಮಾನವ ಪ್ರಾಣ ಹಾನಿ ಪ್ರಕರಣ ಸಂಖ್ಯೆ |
|---|---|---|---|---|
| 1 | 2017–18 | ಬಿ.ಆರ್.ಟಿ ಹುಲಿ ಸಂರಕ್ಷಿತ ಪ್ರದೇಶ, ಚಾಮರಾಜನಗರ. | 19.00 | 01 |
| | | ಕಾವೇರಿ ವನ್ಯಜೀವಿ ವಿಭಾಗ, ಕೊಳ್ಳೇಗಾಲ. | 18.63 | 01 |
| | | ಮಲೈ ಮಹದೇಶ್ವರ ವನ್ಯಜೀವಿ ವಿಭಾಗ, ಕೊಳ್ಳೇಗಾಲ. | 195.35 | – |
| | | ಬಂಡೀಪುರ ಹುಲಿ ಸಂರಕ್ಷಿತ | 380.00 | – |
| | | **ಒಟ್ಟು:** | **612.98** | **02** |
| 2 | 2018–19 | ಬಿ.ಆರ್.ಟಿ ಹುಲಿ ಸಂರಕ್ಷಿತ ಪ್ರದೇಶ, ಚಾಮರಾಜನಗರ. | 30.00 | 02 |
| | | ಕಾವೇರಿ ವನ್ಯಜೀವಿ ವಿಭಾಗ, ಕೊಳ್ಳೇಗಾಲ. | 113.44 | – |
| | | ಮಲೈ ಮಹದೇಶ್ವರ ವನ್ಯಜೀವಿ ವಿಭಾಗ, ಕೊಳ್ಳೇಗಾಲ. | 203.62 | 01 |
| | | ಬಂಡೀಪುರ ಹುಲಿ ಸಂರಕ್ಷಿತ | 630.00 | 01 |
| | | **ಒಟ್ಟು:** | **977.06** | **04** |

| ಕ್ರ ಸಂ | ಪ್ರಶ್ನೆ | ಉತ್ತರ |
|---|---|---|

| | | | | |
|---|---|---|---|---|
| 3 | 2019–20 | ಬಿ.ಆರ್.ಟಿ ಹುಲಿ ಸಂರಕ್ಷಿತ ಪ್ರದೇಶ, ಚಾಮರಾಜನಗರ. | 40.00 | 01 |
| | | ಕಾವೇರಿ ವನ್ಯಜೀವಿ ವಿಭಾಗ, ಕೊಳ್ಳೇಗಾಲ. | 123.33 | 01 |
| | | ಮಲೈ ಮಹದೇಶ್ವರ ವನ್ಯಜೀವಿ ವಿಭಾಗ, ಕೊಳ್ಳೇಗಾಲ. | 147.11 | 04 |
| | | ಬಂಡೀಪುರ ಹುಲಿ ಸಂರಕ್ಷಿತ | 750.00 | 03 |
| | | **ಒಟ್ಟು:** | **1060.44** | **09** |

ಇ) ಸದರಿ ಹಾನಿ ಪ್ರಕರಣಗಳಿಗೆ ವಿತರಿಸಲಾದ ಪರಿಹಾರದ ಮೊತ್ತವೆಷ್ಟು; (ವಿಧಾನ ಸಭಾ ಕ್ಷೇತ್ರವಾರು ವಿವರ ನೀಡುವುದು);

ಸದರಿ ಹಾನಿ ಪ್ರಕರಣಗಳಿಗೆ ವಿತರಿಸಲಾದ ಪರಿಹಾರದ ವಿವರ ಕೆಳಕಂಡಂತೆ ಇರುತ್ತದೆ.

(ರೂ.ಗಳಲ್ಲಿ)

| ಕ್ರ. ಸಂ | ವರ್ಷ | ವಿಭಾಗ | ವಿಧಾನ ಸಭಾ ಕ್ಷೇತ್ರ | ಬೆಳೆ ಹಾನಿ ಪ್ರಕರಣಕ್ಕೆ ವಿತರಿಸಲಾದ ಪರಿಹಾರ ಮೊತ್ತ | ಮಾನವ ಪ್ರಾಣ ಹಾನಿ ಪ್ರಕರಣಕ್ಕೆ ವಿತರಿಸಲಾದ ಪರಿಹಾರ ಮೊತ್ತ |
|---|---|---|---|---|---|
| 1 | 2017–18 | ಬಿ.ಆರ್.ಟಿ ಹುಲಿ ಸಂರಕ್ಷಿತ ಪ್ರದೇಶ, ಚಾಮರಾಜನಗರ. | ಚಾಮರಾಜನಗರ | 1,49,901/– | 5,00,000/– |
| | | | ಕೊಳ್ಳೇಗಾಲ | 4,42,333/– | – |
| | | ಕಾವೇರಿ ವನ್ಯಜೀವಿ ವಿಭಾಗ, ಕೊಳ್ಳೇಗಾಲ. | ಹನೂರು | 7,11,292/– | 5,00,000/– |
| | | ಮಲೈ ಮಹದೇಶ್ವರ ವನ್ಯಜೀವಿ ವಿಭಾಗ, ಕೊಳ್ಳೇಗಾಲ. | ಕೊಳ್ಳೇಗಾಲ | 97,150/– | – |
| | | | ಹನೂರು | 18,33,866/– | – |
| | | ಬಂಡೀಪುರ ಹುಲಿ ಸಂರಕ್ಷಿತ | ಗುಂಡ್ಲುಪೇಟೆ | 28,60,069/– | – |
| | | | **ಒಟ್ಟು:** | **60,94,611/–** | **10,00,000/–** |
| 2 | 2018–19 | ಬಿ.ಆರ್.ಟಿ ಹುಲಿ ಸಂರಕ್ಷಿತ ಪ್ರದೇಶ, ಚಾಮರಾಜನಗರ. | ಚಾಮರಾಜನಗರ | 1,89,743/– | 5,00,000/– |
| | | | ಕೊಳ್ಳೇಗಾಲ | 9,89,880/– | 5,00,000/– |
| | | | ಹನೂರು | 33,350/– | – |
| | | ಕಾವೇರಿ ವನ್ಯಜೀವಿ ವಿಭಾಗ, ಕೊಳ್ಳೇಗಾಲ. | ಹನೂರು | 2,38,993/– | – |
| | | ಮಲೈ ಮಹದೇಶ್ವರ ವನ್ಯಜೀವಿ ವಿಭಾಗ, ಕೊಳ್ಳೇಗಾಲ. | ಕೊಳ್ಳೇಗಾಲ | 3,59,075/– | – |
| | | | ಹನೂರು | 16,53,650/– | 5,00,000/– |
| | | ಬಂಡೀಪುರ ಹುಲಿ ಸಂರಕ್ಷಿತ | ಗುಂಡ್ಲುಪೇಟೆ | 56,55,378/– | 5,00,000/– |
| | | | **ಒಟ್ಟು:** | **91,20,069/–** | **20,00,000/–** |

| ಕ್ರ ಸಂ | ಪ್ರಶ್ನೆ | ಉತ್ತರ |
|---|---|---|

| | | | | | |
|---|---|---|---|---|---|
| 3 | 2019–20 | ಬಿ.ಆರ್.ಟಿ ಹುಲಿ ಸಂರಕ್ಷಿತ ಪ್ರದೇಶ, ಚಾಮರಾಜನಗರ. | ಚಾಮರಾಜನಗರ | 4,14,260/– | 5,00,000/– |
| | | | ಕೊಳ್ಳೇಗಾಲ | 14,01,650/– | – |
| | | | ಹನೂರು | 58,156/– | – |
| | | ಕಾವೇರಿ ವನ್ಯಜೀವಿ ವಿಭಾಗ,ಕೊಳ್ಳೇಗಾಲ. | ಹನೂರು | 12,59,079/– | 5,00,000/– |
| | | ಮಲೈ ಮಹದೇಶ್ವರ ವನ್ಯಜೀವಿ ವಿಭಾಗ, ಕೊಳ್ಳೇಗಾಲ. | ಕೊಳ್ಳೇಗಾಲ | 1,82,434/– | – |
| | | | ಹನೂರು | 12,71,762/– | 20,00,000/– |
| | | ಬಂಡೀಪುರ ಹುಲಿ ಸಂರಕ್ಷಿತ | ಗುಂಡ್ಲುಪೇಟೆ | 82,19,065/– | 15,00,000/– |
| | | | **ಒಟ್ಟು:** | **128,06,406/–** | **45,00,000/–** |

| ಕ್ರ ಸಂ | ಪ್ರಶ್ನೆ | ಉತ್ತರ |
|---|---|---|
| ಇ) | ಈ ಕಾಡು ಪ್ರಾಣಿಗಳ ದಾಳಿಯನ್ನು ತಡೆಗಟ್ಟಲು ಸರ್ಕಾರವು ತೆಗೆದುಕೊಂಡಿರುವ ಕ್ರಮಗಳೇನು? (ಸಂಪೂರ್ಣ ವಿವರ ನೀಡುವುದು); | ಚಾಮರಾಜನಗರ ಜಿಲ್ಲೆಯ ವ್ಯಾಪ್ತಿಯಲ್ಲಿ ಕಾಡು ಪ್ರಾಣಿಗಳ ದಾಳಿಯನ್ನು ತಡೆಗಟ್ಟಲು ಈ ಕೆಳಕಂಡ ಕ್ರಮಗಳನ್ನು ಕೈಗೊಳ್ಳಲಾಗುತ್ತಿದೆ.<br>1. ಅರಣ್ಯ ಪ್ರದೇಶಗಳಲ್ಲಿ ದಟ್ಟವಾಗಿ ಬೆಳೆದ ಲಂಟಾನ ಮತ್ತು ಯುಪಟೋರಿಯಂ ಕಳೆಗಳನ್ನು ಹಂತ ಹಂತವಾಗಿ ಕಿತ್ತು ಸ್ವಚ್ಛಗೊಳಿಸಿ ಅರಣ್ಯಕ್ಕೆ ಪೂರಕವಾದ ಹುಲ್ಲು ಬೆಳೆಯಲು ಅವಕಾಶ ಮಾಡಲಾಗಿದೆ.<br>2. ಕಾಡು ಪ್ರಾಣಿಗಳಿಗೆ ಕಾಡಿನಲ್ಲಿ ನೀರಿನ ಸೌಲಭ್ಯ ಒದಗಿಸಲು ಹೊಸ ಕೆರೆಗಳನ್ನು ನಿರ್ಮಾಣ ಮಾಡುವುದು, ಹಾಲಿ ಇರುವ ಕೆರೆಗಳ ಹೂಳೆತ್ತುವುದು, ತಾತ್ಕಾಲಿಕ ನೀರಿನ ಪಾಂಡ್‌ಗಳ ನಿರ್ಮಾಣ, ಚೆಕ್‌ಡ್ಯಾಂಗಳ ನಿರ್ಮಾಣ ಕಾರ್ಯ ಕೈಗೊಳ್ಳಲಾಗಿದೆ.<br>3. ಆನೆ ತಡೆ ಕಂದಕ ಮತ್ತು ಜಾನುವಾರು ತಡೆ ಕಂದಕಗಳನ್ನು ನಿರ್ಮಾಣ ಮತ್ತು ನಿರ್ವಹಣೆ ಮಾಡಲಾಗುತ್ತಿದೆ.<br>4. ಸೋಲಾರ್ ತಂತಿ ಬೇಲಿ ನಿರ್ಮಾಣ ಮತ್ತು ನಿರ್ವಹಣೆ ಮಾಡಲಾಗುತ್ತಿದೆ.<br>5. ಆನೆ ಹಿಮ್ಮೆಟ್ಟಿಸುವ ತಂಡಗಳನ್ನು ನೇಮಿಸಿ ಆನೆಗಳನ್ನು ಕಾಡಿಗೆ ಓಡಿಸಲು ಕ್ರಮಕೈಗೊಳ್ಳಲಾಗುತ್ತಿದೆ<br>6. ಉಪಯೋಗಿಸಿದ ರೈಲು ಹಳಿಗಳನ್ನು ಉಪಯೋಗಿಸಿ ರೈಲ್ವೆ ಬ್ಯಾರಿಕೇಡ್ ನಿರ್ಮಾಣ ಕಾಮಗಾರಿಯನ್ನು ಕೈಗೊಳ್ಳಲಾಗಿದೆ.<br>7. ಅರಣ್ಯದಂಚಿನಲ್ಲಿ ಬರುವಂತಹ ಹಿಡುವಳಿ ಜಮೀನುಗಳಲ್ಲಿ ಬೆಳೆದ ಬೆಳೆಗಳನ್ನು ಕಾಡು ಪ್ರಾಣಿಗಳ ದಾಳಿಯಿಂದ ರಕ್ಷಿಸಲು ರೈತರಿಗೆ ಶೇ. 50 ರಷ್ಟು ಸಬ್ಸಿಡಿ ಆಧಾರಿತ ಸೋಲಾರ್ ತಂತಿ ಬೇಲಿ ನಿರ್ಮಾಣ ಕಾರ್ಯಗಳನ್ನು ಕೈಗೊಳ್ಳಲಾಗಿರುತ್ತದೆ. |

ಸಂಖ್ಯೆ: ಅಪಜೀ 52 ಎಫ್‌ಡಬ್ಲ್ಯೂಎಲ್ 2021

(ಅರವಿಂದ ಲಿಂಬಾವಳಿ)
ಅರಣ್ಯ, ಕನ್ನಡ ಮತ್ತು ಸಂಸ್ಕೃತಿ ಸಚಿವರು

# ಕರ್ನಾಟಕ ವಿಧಾನ ಸಭೆ

ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 2775
ಸದಸ್ಯರ ಹೆಸರು : ಶ್ರೀ ಮಹದೇವ ಕೆ. (ಪಿರಿಯಾಪಟ್ಟಣ)
ಉತ್ತರಿಸಬೇಕಾದ ದಿನಾಂಕ : 18.03.2021
ಉತ್ತರಿಸುವವರು : ಅರಣ್ಯ, ಕನ್ನಡ ಮತ್ತು ಸಂಸ್ಕೃತಿ ಸಚಿವರು

| ಕ್ರ.ಸಂ | ಪ್ರಶ್ನೆ | ಉತ್ತರ |
| --- | --- | --- |
| ಅ) | ಪಿರಿಯಾಪಟ್ಟಣ ಮತ ಕ್ಷೇತ್ರದ ವ್ಯಾಪ್ತಿಯಲ್ಲಿ ಎಷ್ಟು ಅರಣ್ಯ ಪ್ರದೇಶವಿದೆ; | ಪಿರಿಯಾಪಟ್ಟಣ ಮತ ಕ್ಷೇತ್ರದಲ್ಲಿ 10152.755 ಹೆಕ್ಟೇರ್ ಅರಣ್ಯ ಪ್ರದೇಶವಿರುತ್ತದೆ. |
| ಆ) | ಈ ಮತ ಕ್ಷೇತ್ರದ ಗ್ರಾಮಗಳಾದ ಪಂಚವಳ್ಳಿ, ಆನೆಚೌಕೂರು, ಐಲಾಪುರ, ಅಬ್ಬಳತ್ತಿ, ಕೋಗಿಲಾವಡಿ, ಬೂದಿತಿಟ್ಟು ಗ್ರಾಮಗಳಿಗೆ ಆನೆಗಳು ನುಗ್ಗಿ ರೈತರ ಬೆಳೆನಾಶ ಮಾಡಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; | ಬಂದಿದೆ.<br><br>ಕಳೆದ 2 ವರ್ಷಗಳಲ್ಲಿ ಪಂಚವಳ್ಳಿ, ಆನೆಚೌಕೂರು, ಐಲಾಪುರ, ಅಬ್ಬಳತ್ತಿ, ಕೋಗಿಲಾವಡಿ, ಬೂದಿತಿಟ್ಟು ಗ್ರಾಮಗಳ ವ್ಯಾಪ್ತಿಯಲ್ಲಿ ಕಾಡಾನೆಗಳ ಹಾವಳಿಯಿಂದ ರೈತರ ಬೆಳೆನಾಶ ಪ್ರಕರಣಗಳು ಹಾಗೂ ಪಾವತಿಸಿದ ದಯಾತ್ಮಕ ಧನದ ಗ್ರಾಮವಾರು ವಿವರವನ್ನು **ಅನುಬಂಧ-1ರಲ್ಲಿ** ಒದಗಿಸಿದೆ. |
| ಇ) | ರೈತರ ಬೆಳೆನಷ್ಟಕ್ಕೆ ಈವರೆಗೆ ಎಷ್ಟು ರೈತರಿಗೆ ಪರಿಹಾರ ನೀಡಲಾಗಿದೆ; (ಗ್ರಾಮವಾರು ರೈತರ ವಿವರ ನೀಡುವುದು) | |
| ಈ) | ಈ ಮತ ಕ್ಷೇತ್ರದ ಅರಣ್ಯದಂಚಿನ ವ್ಯಾಪ್ತಿಯಲ್ಲಿ ವಾಸ ಮಾಡುವ ಗ್ರಾಮಗಳಲ್ಲಿ ಮಾನವ ಆನೆ ಸಂಘರ್ಷ ನಡೆದಿವೆಯೇ; ಹಾಗಿದ್ದಲ್ಲಿ, ಎಷ್ಟು ಪ್ರಕರಣಗಳು ದಾಖಲಾಗಿವೆ; (ವಿವರ ನೀಡುವುದು) | ಪಿರಿಯಾಪಟ್ಟಣ ಮತ ಕ್ಷೇತ್ರದ ಅರಣ್ಯದಂಚಿನ ಗ್ರಾಮಗಳ ವ್ಯಾಪ್ತಿಯಲ್ಲಿ ಪ್ರಸಕ್ತ ಸಾಲಿನಲ್ಲಿ ಯಾವುದೇ ಮಾನವ ಆನೆ ಸಂಘರ್ಷ ಪ್ರಕರಣ ದಾಖಲಾಗಿರುವುದಿಲ್ಲ. ಆದರೆ, ಕಾಡಾನೆಗೊಳಗೊಂಡಂತೆ ಇತರೆ ವನ್ಯಪ್ರಾಣಿಗಳಿಂದ ಬೆಳೆಹಾನಿಗೀಡಾದ ಕುರಿತು 2019-20ನೇ ಸಾಲಿನಲ್ಲಿ 18 ಪ್ರಕರಣಗಳು ಮತ್ತು 2020-21ನೇ ಸಾಲಿನಲ್ಲಿ 42 ಪ್ರಕರಣಗಳು ದಾಖಲಾಗಿರುತ್ತದೆ. |
| ಉ) | ಮಾನವ-ಆನೆ ಸಂಘರ್ಷವನ್ನು ತಡೆಯಲು 2019-20ನೇ ಸಾಲಿನ ಆಯವ್ಯಯದ ಕಂಡಿಕೆ 108 ರಲ್ಲಿ ರೈಲು ಕಂಬಿ ತಡೆಗೋಡೆ ನಿರ್ಮಾಣ ಯೋಜನೆಯನ್ನು ಸರ್ಕಾರವು ಘೋಷಣೆ ಮಾಡಿದ್ದು, ಪಿರಿಯಾಪಟ್ಟಣ ಮತ ಕ್ಷೇತ್ರದಲ್ಲಿ ಈ ಯೋಜನೆ ಯಾವಾಗ ಅನುಷ್ಠಾನಗೊಳ್ಳುವುದು; (ವಿವರ ನೀಡುವುದು) | 2019-20ನೇ ಸಾಲಿನ ಆಯವ್ಯಯ ಭಾಷಣದಲ್ಲಿ **"ಉಪಯೋಗಿಸಿದ ರೈಲು ಹಳಿ ತಡೆಗೋಡೆಯಿಂದ ಮಾನವ-ಆನೆ ಸಂಘರ್ಷ ನಿಯಂತ್ರಣ"** ಎಂಬ ಹೊಸ ಯೋಜನೆಯನ್ನು ಅನುಷ್ಠಾನಗೊಳಿಸಲಾಗಿದ್ದು, ಸರ್ಕಾರದ ಆದೇಶ ಸಂಖ್ಯೆ: ಅಪಜೀ 35 ಎಫ್‌ಎಪಿ 2019 ದಿನಾಂಕ:16.10.2019 ರಲ್ಲಿ ರಾಜ್ಯದಲ್ಲಿ 118 ಕಿ.ಮೀ. ರೈಲ್ವೆ ಬ್ಯಾರಿಕೇಡ್ ನಿರ್ಮಾಣಕ್ಕಾಗಿ ರೂ.100.00 ಕೋಟಿಗಳ ವೆಚ್ಚಕ್ಕೆ ಆಡಳಿತಾತ್ಮಕ ಮಂಜೂರಾತಿ ನೀಡಲಾಗಿರುತ್ತದೆ. ಅದರನ್ವಯ ಸೂಕ್ಷ್ಮ ಪ್ರದೇಶಗಳಲ್ಲಿ ರೈಲ್ವೆ ಬ್ಯಾರಿಕೇಡ್ ನಿರ್ಮಾಣಕ್ಕಾಗಿ ಭೌತಿಕ / ಆರ್ಥಿಕ ಗುರಿಯನ್ನು ನಿಗದಿಪಡಿಸಲಾಗಿರುತ್ತದೆ. 2019-20ನೇ ಸಾಲಿಗೆ ರೂ.50.00 ಕೋಟಿಗಳನ್ನು ಬಿಡುಗಡೆ ಮಾಡಲಾಗಿರುತ್ತದೆ. ಪ್ರಸಕ್ತ ಸಾಲಿಗೆ ರೂ.50.00 ಕೋಟಿಗಳ ಅನುದಾನ ನಿಗದಿಪಡಿಸಿದ್ದು, ಇದು ಮುಂದುವರೆದ ಕಾಮಗಾರಿ ಆಗಿದ್ದರಿಂದ ಪೂರ್ಣಗೊಂಡ ಕಾಮಗಾರಿಗಳಿಗೆ ವೆಚ್ಚ ಭರಿಸಲು ಕ್ರಮಕೈಗೊಳ್ಳಲಾಗಿದೆ.<br><br>ಅಲ್ಲದೇ, 2020-21ನೇ ಸಾಲಿಗೆ ಯಾವುದೇ ಹೊಸ ಕಾಮಗಾರಿಗೆ ಅನುದಾನ ಬಿಡುಗಡೆಯಾಗದೇ ಇರುವುದರಿಂದ ಪ್ರಸ್ತುತ ಭೌತಿಕ ಗುರಿಯನ್ನು ನಿಗದಿಪಡಿಸಿರುವುದಿಲ್ಲ. ಪ್ರಸ್ತುತ ಪಿರಿಯಾಪಟ್ಟಣ ವಲಯ ವ್ಯಾಪ್ತಿಯಲ್ಲಿ ರೈಲ್ವೆ ಬ್ಯಾರಿಕೇಡ್ ನಿರ್ಮಾಣದ ಕುರಿತು ಪ್ರಸ್ತಾಪ ಇರುವುದಿಲ್ಲ. |
| ಊ) | ಈ ಯೋಜನೆ ಅನುಷ್ಠಾನವಾದರೆ ಪಿರಿಯಾಪಟ್ಟಣ ಮತ ಕ್ಷೇತ್ರದಲ್ಲಿ ಎಷ್ಟು ಕಿ.ಮೀ. ತಡೆಗೋಡೆ ನಿರ್ಮಾಣ ಮಾಡಲಾಗುವುದು? (ವಿವರ ನೀಡುವುದು) | |

ಸಂಖ್ಯೆ: ಅಪಜೀ 32 ಎಫ್‌ಎಫ್ 2021

(ಅರವಿಂದ ಲಿಂಬಾವಳಿ)
ಅರಣ್ಯ, ಕನ್ನಡ ಮತ್ತು ಸಂಸ್ಕೃತಿ ಸಚಿವರು

ವಿಧಾನ ಸಭೆಯ ಸದಸ್ಯರು: ಶ್ರೀ ಕೆ.ಮಹದೇವ (ಪಿರಿಯಾಪಟ್ಟಣ)

ವಿಧಾನ ಸಭೆ ಪ್ರಶ್ನೆ ಸಂಖ್ಯೆ: 2775

ಅನುಬಂಧ-1

| ಕ್ರಸಂ | ರೈತರ ವಿವರ | ಗ್ರಾಮ | ಹಾನಿ ಸ್ವರೂಪ | ಪರಿಹಾರ ಮೊತ್ತ |
|---|---|---|---|---|
| **2019-20 ನೇ ಸಾಲಿನಲ್ಲಿ ದಾಖಲಾಗಿರುವ ಪ್ರಕರಣಗಳ ವಿವರ** | | | | |
| 1 | ಪಿ.ಎನ್.ಚಂದ್ರಪ್ಪ | ಪಂಚವಳ್ಳಿ | ಬೆಳೆಹಾನಿ | 7620.00 |
| 2 | ಮಾದೇಶ | ಪಂಚವಳ್ಳಿ | ಬೆಳೆಹಾನಿ | 7620.00 |
| 3 | ಶಂಕರ್‌ಗುರು | ಕೋಗಿಲವಾಡಿ | ಬೆಳೆಹಾನಿ | 2640.00 |
| 4 | ಸುಧಾ ಕೆ.ಹೆಚ್ | ಕೋಗಿಲವಾಡಿ | ಬೆಳೆಹಾನಿ | 3720.00 |
| 5 | ನಟರಾಜ್ | ಕೋಗಿಲವಾಡಿ | ಬೆಳೆಹಾನಿ | 1980.00 |
| 6 | ರಾಜಶೇಖರ | ಕೋಗಿಲವಾಡಿ | ಬೆಳೆಹಾನಿ | 3720.00 |
| 7 | ಜ್ಯೋತಿ | ಕೋಗಿಲವಾಡಿ | ಬೆಳೆಹಾನಿ | 1320.00 |
| 8 | ಸುಕನ್ಯ | ಕೋಗಿಲವಾಡಿ | ಬೆಳೆಹಾನಿ | 2640.00 |
| 9 | ಪಾಪೇಗೌಡ | ಕೋಗಿಲವಾಡಿ | ಬೆಳೆಹಾನಿ | 5280.00 |
| 10 | ಕಮಲಮ್ಮ | ಕೋಗಿಲವಾಡಿ | ಬೆಳೆಹಾನಿ | 2640.00 |
| 11 | ಶಿವಣ್ಣೇಗೌಡ | ಕೋಗಿಲವಾಡಿ | ಬೆಳೆಹಾನಿ | 6600.00 |
| 12 | ಮಾಚಯ್ಯ | ಕೋಗಿಲವಾಡಿ | ಬೆಳೆಹಾನಿ | 7710.00 |
| 13 | ಚಿಕ್ಕೇಗೌಡ | ಕೋಗಿಲವಾಡಿ | ಬೆಳೆಹಾನಿ | 7710.00 |
| 14 | ಕೆ.ಎ.ನಾಗರಾಜ್ | ಕೋಗಿಲವಾಡಿ | ಬೆಳೆಹಾನಿ | 2640.00 |
| 15 | ಮಾದೇಗೌಡ | ಕೋಗಿಲವಾಡಿ | ಬೆಳೆಹಾನಿ | 2640.00 |
| 16 | ರಮೇಶನಾಯಕ | ಕೋಗಿಲವಾಡಿ | ಬೆಳೆಹಾನಿ | 2640.00 |
| 17 | ಕೆ.ಸಿ.ಪುಟ್ಟೇಗೌಡ | ಕೋಗಿಲವಾಡಿ | ಬೆಳೆಹಾನಿ | 2640.00 |
| 18 | ಸರೋಜಮ್ಮ | ಕೋಗಿಲವಾಡಿ | ಬೆಳೆಹಾನಿ | 1200.00 |
| **2020-21 ನೇ ಸಾಲಿನಲ್ಲಿ ದಾಖಲಾಗಿರುವ ಪ್ರಕರಣ** | | | | |
| 1 | ಸೋಮಪ್ಪ | ಪಂಚವಳ್ಳಿ | ಬೆಳೆಹಾನಿ | 2480.00 |

# ಕರ್ನಾಟಕ ವಿಧಾನ ಸಭೆ

ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 2662
ಸದಸ್ಯರ ಹೆಸರು : ಶ್ರೀ ನಂಜೇಗೌಡ ಕೆ.ವೈ. (ಮಾಲೂರು)
ಉತ್ತರಿಸಬೇಕಾದ ದಿನಾಂಕ : 18.03.2021
ಉತ್ತರಿಸುವವರು : ಅರಣ್ಯ, ಕನ್ನಡ ಮತ್ತು ಸಂಸ್ಕೃತಿ ಸಚಿವರು

| ಕ್ರಸಂ | ಪ್ರಶ್ನೆ | ಉತ್ತರ |
|---|---|---|
| ಅ) | ರಾಜ್ಯದಲ್ಲಿ ರಸ್ತೆಗಳ ಅಭಿವೃದ್ಧಿ ಮಾಡುವಾಗ ಅರಣ್ಯ ಇಲಾಖೆಯ ಮರಗಳನ್ನು ಕಟಾವು ಮಾಡಲು ಅನುಮತಿ ನೀಡದಿರುವುದರಿಂದ ರಸ್ತೆಗಳ ಅಭಿವೃದ್ಧಿ ತ್ವರಿತವಾಗಿ ಆಗದೇ ತಡವಾಗುತ್ತಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; | ರಸ್ತೆ ಅಭಿವೃದ್ಧಿ ಮಾಡುವಾಗ ಕಾಮಗಾರಿಗೆ ಅಡ್ಡಿಯಾಗುವ ರಸ್ತೆ ಬದಿ ಮರಗಳನ್ನು ತೆರವುಗೊಳಿಸಲು ಸರ್ಕಾರದ ಆದೇಶ ಸಂಖ್ಯೆ: ಅಪಜೀ 168 ಎಫ್‌ಡಿಪಿ 2017, ದಿನಾಂಕ 06.12.2018 ಮತ್ತು ತಿದ್ದುಪಡಿ ದಿನಾಂಕ: 07.12.2018 ರಲ್ಲಿನ ಸೂಚನೆಗಳಂತೆ ಕ್ರಮ ಕೈಗೊಳ್ಳಲಾಗುತ್ತಿದೆ. ಉಪಯೋಗಿ ಸಂಸ್ಥೆಯು ಸರ್ಕಾರದ ಆದೇಶದನ್ವಯ ರಸ್ತೆ ಬದಿ ನೆಡುತೋಪು ನಿರ್ಮಾಣದ ವೆಚ್ಚ ಹಾಗೂ ಇತರೆ ನಿಗದಿತ ಶುಲ್ಕವನ್ನು ಪಾವತಿಸಿದಲ್ಲಿ ಮರಗಳನ್ನು ತೆರವುಗೊಳಿಸಲು ಅವಕಾಶ ಮಾಡಿಕೊಡಲಾಗುತ್ತಿದೆ. ಈ ಕುರಿತು ಅರಣ್ಯ ಇಲಾಖೆಯಿಂದ ವಿಳಂಬವಾಗದಂತೆ ತುರ್ತು ಕ್ರಮ ವಹಿಸಲಾಗುತ್ತಿದೆ. ಅರಣ್ಯ ಇಲಾಖೆ ಅನುಮತಿ ನೀಡದಿರುವುದರಿಂದ ರಸ್ತೆಗಳ ಅಭಿವೃದ್ಧಿ ತ್ವರಿತವಾಗಿ ಆಗದೇ ತಡವಾಗುತ್ತಿರುವ ಪ್ರಕರಣಗಳು ವರದಿಯಾಗಿರುವುದಿಲ್ಲ. |
| ಆ) | ಬಂದಿದ್ದಲ್ಲಿ, ಈ ಸಮಸ್ಯೆಯನ್ನು ಪರಿಹರಿಸಲು ಸರ್ಕಾರವು ಕೈಗೊಂಡಿರುವ ಕ್ರಮಗಳೇನು; (ವಿವರ ಒದಗಿಸುವುದು) | ಮೇಲಿನ ಅಂಶಗಳ ಹಿನ್ನೆಲೆಯಲ್ಲಿ ಕ್ರಮ ಕೈಗೊಳ್ಳುವ ಪ್ರಶ್ನೆ ಉದ್ಭವಿಸುವುದಿಲ್ಲ. |
| ಇ) | ಮಾಲೂರು ವಿಧಾನಸಭಾಕ್ಷೇತ್ರದಲ್ಲಿ ರಸ್ತೆ ಅಗಲೀಕರಣ ಮಾಡಲು ಅರಣ್ಯ ಇಲಾಖೆಯ ಮರಗಳಿಗೆ ಹಣ ಪಾವತಿ ಮಾಡಿದ್ದರೂ ಸಹ, ಮರಗಳನ್ನು ಕಟಾವು ಮಾಡದೇ ರಸ್ತೆ ಅಭಿವೃದ್ಧಿ ಕಾರ್ಯ ಕುಂಠಿತವಾಗಿದ್ದು, ಈ ಸಮಸ್ಯೆಯನ್ನು ಯಾವ ಕಾಲಮಿತಿಯಲ್ಲಿ ಪರಿಹರಿಸಲಾಗುವುದು? (ವಿವರ ಒದಗಿಸುವುದು) | ಮಾಲೂರು ವಿಧಾನ ಸಭಾಕ್ಷೇತ್ರದಲ್ಲಿ ರಸ್ತೆ ಅಗಲೀಕರಣ ಮಾಡಲು ಅರಣ್ಯ ಇಲಾಖೆಗೆ ಕಾರ್ಯಪಾಲಕ ಅಭಿಯಂತರರು, ಲೋಕೋಪಯೋಗಿ ಇಲಾಖೆ, ಕೋಲಾರ ಇವರಿಂದ ಈ ಕೆಳಕಂಡಂತೆ 2 ಪ್ರಸ್ತಾವನೆಗಳು ಸ್ವೀಕೃತಿಯಾಗಿರುತ್ತದೆ.<br><br>1) ಮಾಲೂರು ತಾಲ್ಲೂಕು, ಕೋಲಾರ–ಮಾಲೂರು–ಹೊಸೂರು ರಸ್ತೆ–ಹೆಚ್. ಹೊಸಕೋಟೆ ಕ್ರಾಸ್ ಇಂದ ಸಂಪಂಗೆರೆ (ರಾಜ್ಯಗಡಿ) ಚೈನೇಜ್ 29.00ಕಿ.ಮೀ ಇಂದ 40.00 ಕಿ.ಮೀವರೆಗೆ–11.00ಕಿ.ಮೀ.<br>2) ಮಾಲೂರು ತಾಲ್ಲೂಕು, ಮಾಲೂರು–ವೇಮಗಲ್‌ರಸ್ತೆ (ದೊಡ್ಡಶಿವಾರ ಕ್ರಾಸ್‌ನಿಂದ ನರಸಾಪುರ ಕೈಗಾರಿಕಾ ಪ್ರದೇಶ–ಸರಪಳಿ 0.00 ಇಂದ 7.50ಕಿ.ಮೀವರೆಗೆ–7.50ಕಿ.ಮೀ.<br><br>ಮೇಲ್ಕಂಡ ರಸ್ತೆ ಅಭಿವೃದ್ಧಿಗಾಗಿ ಕ್ರಮವಾಗಿ 219 ಮರಗಳು ಮತ್ತು 138 ಮರಗಳನ್ನು ತೆರವುಗೊಳಿಸಲು ಪ್ರಸ್ತಾವನೆ ಸಲ್ಲಿಸಲಾಗಿದ್ದು, ಸದರಿ ಮರಗಳನ್ನು ದಿನಾಂಕ: 06.12.2018ರ ಸರ್ಕಾರದ ಆದೇಶದಲ್ಲಿನ ಮಾರ್ಗಸೂಚಿಗಳನ್ವಯ ಇ–ಟೆಂಡರ್ ಮುಖಾಂತರ ವಿಲೇಗೊಳಿಸಲಾಗಿರುತ್ತದೆ. ಈ ಕುರಿತು ಟೆಂಡರ್‌ನಲ್ಲಿ ಯಶಸ್ವಿ ಬಿಡ್‌ದಾರರ ಟೆಂಡರ್ ಅಂಗೀಕರಿಸಿ ಕಾರ್ಯಾದೇಶ ನೀಡಲಾಗಿರುತ್ತದೆ. ಮರಗಳ ತೆರವು ಪ್ರಕ್ರಿಯೆ ಪ್ರಗತಿಯಲ್ಲಿರುತ್ತದೆ. |

ಸಂಖ್ಯೆ: ಅಪಜೀ 33 ಎಫ್‌ಎಫ್ 2021

(ಅರವಿಂದ ಲಿಂಬಾವಳಿ)
ಅರಣ್ಯ, ಕನ್ನಡ ಮತ್ತು ಸಂಸ್ಕೃತಿ ಸಚಿವರು

# ಕರ್ನಾಟಕ ವಿಧಾನಸಭೆ

(15ನೇ ವಿಧಾನಸಭೆ, 9ನೇ ಅಧಿವೇಶನ)

1) ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 2654

2) ಸದಸ್ಯರ ಹೆಸರು : ಶ್ರೀ ಪುಟ್ಟರಂಗಶೆಟ್ಟಿ .ಸಿ (ಚಾಮರಾಜನಗರ)

3) ಉತ್ತರಿಸುವ ದಿನಾಂಕ : 18-03-2021

4) ಉತ್ತರಿಸುವವರು : ಅರಣ್ಯ, ಕನ್ನಡ ಮತ್ತು ಸಂಸ್ಕೃತಿ ಸಚಿವರು

| ಕ್ರ ಸಂ | ಪ್ರಶ್ನೆ | ಉತ್ತರ |
|---|---|---|
| ಅ) | ರಾಜ್ಯದಲ್ಲಿರುವ ಒಟ್ಟಾರೆ ರಾಷ್ಟ್ರೀಯ ಉದ್ಯಾನವನಗಳೆಷ್ಟು; (ಜಿಲ್ಲಾವಾರು ಮಾಹಿತಿ ನೀಡುವುದು) | ರಾಜ್ಯದಲ್ಲಿ ಒಟ್ಟು ಐದು ರಾಷ್ಟ್ರೀಯ ಉದ್ಯಾನವನಗಳಿದ್ದು, ವಿವರ ಈ ಕೆಳಕಂಡಂತಿದೆ: |

| ಕ್ರ ಸಂ | ಜಿಲ್ಲೆ | ವಿಭಾಗ | ರಾಷ್ಟ್ರೀಯ ಉದ್ಯಾನವನ |
|---|---|---|---|
| 1 | ಚಾಮರಾಜನಗರ | ಬಂಡೀಪುರ ಹುಲಿ ಯೋಜನೆ | ಬಂಡೀಪುರ ರಾಷ್ಟ್ರೀಯ ಉದ್ಯಾನವನ |
| 2 | ಕೊಡಗು ಮತ್ತು ಮೈಸೂರು | ನಾಗರಹೊಳೆ ಹುಲಿ ಯೋಜನೆ | ರಾಜೀವ್‌ಗಾಂಧಿ ರಾಷ್ಟ್ರೀಯ ಉದ್ಯಾನವನ, |
| 3 | ಉಡುಪಿ, ದಕ್ಷಿಣ ಕನ್ನಡ ಮತ್ತು ಚಿಕ್ಕಮಗಳೂರು | ವನ್ಯಜೀವಿ ವಿಭಾಗ, ಕಾರ್ಕಳ | ಕುದುರೆಮುಖ ರಾಷ್ಟ್ರೀಯ ಉದ್ಯಾನವನ |
| 4 | ಬೆಂಗಳೂರು ನಗರ ಮತ್ತು ರಾಮನಗರ | ವನ್ಯಜೀವಿ ವಿಭಾಗ, ಬನ್ನೇರುಘಟ್ಟ | ಬನ್ನೇರುಘಟ್ಟ ರಾಷ್ಟ್ರೀಯ ಉಧ್ಯಾನವನ |
| 5 | ಉತ್ತರಕನ್ನಡ | ಕಾಳಿ ಹುಲಿ ಯೋಜನೆ | ಅಣಶಿ ರಾಷ್ಟ್ರೀಯ ಉದ್ಯಾನವನ |

| ಕ್ರ ಸಂ | ಪ್ರಶ್ನೆ | ಉತ್ತರ |
|---|---|---|
| ಆ) | ರಾಷ್ಟ್ರೀಯ ಉದ್ಯಾನವನಗಳಿಗೆ ಕೇಂದ್ರ ಸರ್ಕಾರದಿಂದ ಬಿಡುಗಡೆಯಾದ ಅನುದಾನವೆಷ್ಟು; ಪ್ರತಿ ವರ್ಷ ಎಷ್ಟು ಅನುದಾನ ಮಂಜೂರಾಗುತ್ತದೆ; (ವಿವರ ನೀಡುವುದು) | ರಾಷ್ಟ್ರೀಯ ಉದ್ಯಾನವನಗಳಿಗೆ ಕೇಂದ್ರ ಸರ್ಕಾರದಿಂದ ಕಳೆದ ಮೂರು ವರ್ಷಗಳಿಂದ ಮಂಜೂರಾದ/ಬಿಡುಗಡೆಯಾದ ಅನುದಾನದ ವಿವರ ಈ ಕೆಳಗಿನಂತಿದೆ: |

(ರೂ. ಲಕ್ಷಗಳಲ್ಲಿ)

| ವರ್ಷ | ಮಂಜೂರಾದ ಅನುದಾನ | ಬಿಡುಗಡೆಯಾದ ಮೊತ್ತ |
|---|---|---|
| ಬಂಡೀಪುರ ರಾಷ್ಟ್ರೀಯ ಉದ್ಯಾನವನ | | |
| 2018-19 | 1549.52 | 1549.52 |
| 2019-20 | 1390.18 | 1302.41 |
| 2020-21 | 1874.61 | 1384.34 |

| | | |
|---|---|---|
| **ರಾಜೀವ್‌ಗಾಂಧಿ ರಾಷ್ಟ್ರೀಯ ಉದ್ಯಾನವನ** | | |
| 2018-19 | 890.72 | 869.5 |
| 2019-20 | 1289.61 | 937.52 |
| 2020-21 | 1593.33 | 1180.33 |
| **ಕುದುರೆಮುಖ ರಾಷ್ಟ್ರೀಯ ಉದ್ಯಾನವನ** | | |
| 2018-19 | 60.1035 | 40.62 |
| 2019-20 | 69.043 | 33.25 |
| 2020-21 | - | - |
| **ಬನ್ನೇರುಘಟ್ಟ ರಾಷ್ಟ್ರೀಯ ಉಧ್ಯಾನವನ** | | |
| 2018-19 | 124.94 | 89.84 |
| 2019-20 | 120.40 | 102.20 |
| 2020-21 | 210.10 | 124.07 |
| **ಅಣಶಿ ರಾಷ್ಟ್ರೀಯ ಉದ್ಯಾನವನ** | | |
| 2018-19 | 172.91 | 172.91 |
| 2019-20 | 139.04 | 139.01 |
| 2020-21 | 85.15 | 85.15 |

ಇ) ರಾಜ್ಯದ ಅರಣ್ಯ ಪ್ರದೇಶಗಳಲ್ಲಿ ಕಾಡಾನೆಗಳ ಹಾವಳಿಗಳಿಂದ ಮೃತಪಟ್ಟವರ ಸಂಖ್ಯೆ ಎಷ್ಟು; (ವಿವರ ನೀಡುವುದು)

ಈ) ಕಳೆದ 3 ವರ್ಷಗಳಿಂದಲೂ ಕಾಡಾನೆ ದಾಳಿಯಿಂದ ಮೃತಪಟ್ಟ ಕುಟುಂಬದವರಿಗೆ ನೀಡಿದ ಪರಿಹಾರವೇನು; ಎಷ್ಟು ಮೊತ್ತದ ಪರಿಹಾರ ನೀಡಲಾಗಿದೆ; (ವಿವರ ನೀಡುವುದು)

ರಾಜ್ಯದಲ್ಲಿ ಕಳೆದ 3 ವರ್ಷಗಳಲ್ಲಿ ಕಾಡಾನೆಗಳ ದಾಳಿಯಿಂದ ಮೃತಪಟ್ಟವರ ಸಂಖ್ಯೆ ಮತ್ತು ಪಾವತಿಸಿದ ದಯಾತ್ಮಕಧನದ ವಿವರ ಕೆಳಕಂಡಂತಿದೆ:

(ರೂ.ಲಕ್ಷಗಳಲ್ಲಿ)

| ಕ್ರ.ಸಂ | ವರ್ಷ | ಪ್ರಕರಣ | ಮೊತ್ತ |
|---|---|---|---|
| 1 | 2017-18 | 22 | 110.00 |
| 2 | 2018-19 | 12 | 60.00 |
| 3 | 2019-20 | 29 | 160.00 |
| 4 | 2020-21 | 20 | 150.00 |

ಉ) ಕಾಡಾನೆಗಳ ದಾಳಿಯಿಂದಾದ ಬೆಳೆಗಳ ನಷ್ಟವೆಷ್ಟು;

ಕಾಡಾನೆ ಒಳಗೊಂಡಂತೆ ವನ್ಯಪ್ರಾಣಿಗಳ ಹಾವಳಿಯಿಂದ ಉಂಟಾದ ಬೆಳೆ ಹಾನಿ ಪ್ರಕರಣ ಹಾಗೂ ಪಾವತಿಸಿದ ದಯಾತ್ಮಕಧನದ ವಿವರ ಈ ಕೆಳಕಂಡಂತಿದೆ:

(ರೂ.ಗಳಲ್ಲಿ)

| ಕ್ರ.ಸಂ | ವರ್ಷ | ಪ್ರಕರಣ | ಮೊತ್ತ |
|---|---|---|---|
| 1 | 2017-18 | 27525 | 13,69,16,590 |
| 2 | 2018-19 | 19913 | 10,28,13,410 |
| 3 | 2019-20 | 20951 | 11,22,90,000 |
| 4 | 2020-21 (ಜನವರಿ 2021ರ ವರೆಗೆ) | 10316 | 6,20,85,721 |

<table>
<tr><td>ಊ)</td><td>ಕಳೆದ 3 ವರ್ಷಗಳಲ್ಲಿ ನಷ್ಟವಾದ ಬೆಳೆಗಳು ಯಾವುವು;</td><td rowspan="2">ರಾಜ್ಯದಲ್ಲಿ ವನ್ಯಪ್ರಾಣಿ ಹಾವಳಿಯಿಂದ ಉಂಟಾಗುವ ಬೆಳೆ ಹಾನಿ ಪ್ರಕರಣಗಳಿಗೆ ಆದೇಶ ಸಂಖ್ಯೆ:ಅಪಜೀ 130 ಎಫ್‌ಡಬ್ಲ್ಯೂಎಲ್ 2016, ದಿನಾಂಕ: 19–9–2016ರಲ್ಲಿ ನಮೂದಿಸಿರುವ ಬೆಳೆಗಳ ಪರಿಮಾಣಕ್ಕೆ ಅನುಸಾರವಾಗಿ ನಿಗದಿಪಡಿಸಲಾದ ದರಗಳನ್ವಯ Ex-gratia ವನ್ನು ಪಾವತಿಸಲಾಗುತ್ತಿರುತ್ತದೆ.<br>(ಆದೇಶದ ಪ್ರತಿ ಒದಗಿಸಿದೆ)<br><br>ಸದರಿ ಆದೇಶದಲ್ಲಿ ನಿಗದಿಪಡಿಸಲಾಗಿರುವ ದರಗಳನ್ವಯ ಉಂಟಾಗಿರಬಹುದಾದ ಹಾನಿಯನ್ನು ನಿಯಮಾನುಸಾರ ಅಂದಾಜಿಸಿ "ಇ–ಪರಿಹಾರ" ತಂತ್ರಾಂಶದ ಮೂಲಕ ನೇರವಾಗಿ ಅರ್ಜಿದಾರರ ಬ್ಯಾಂಕ್ ಖಾತೆಗೆ ಪಾವತಿಸಲಾಗುತ್ತಿದೆ.</td></tr>
<tr><td>ಋ)</td><td>ಆ ಪೈಕಿ ಬೆಳೆಗಳ ನಷ್ಟದ ಅಂದಾಜು ಮೊತ್ತವೆಷ್ಟು? (ವಿವರ ನೀಡುವುದು)</td></tr>
</table>

**ಸಂಖ್ಯೆ: ಅಪಜೀ 56 ಎಫ್‌ಡಬ್ಲ್ಯೂಎಲ್ 2021**

(ಅರವಿಂದ ಲಿಂಬಾವಳಿ)
ಅರಣ್ಯ, ಕನ್ನಡ ಮತ್ತು ಸಂಸ್ಕೃತಿ ಸಚಿವರು

## ಕರ್ನಾಟಕ ವಿಧಾನ ಸಭೆ

ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 3019
ಸದಸ್ಯರ ಹೆಸರು : ಶ್ರೀ ರಾಜೇಗೌಡ ಟಿ.ಡಿ (ಶೃಂಗೇರಿ)
ಉತ್ತರಿಸುವ ದಿನಾಂಕ : 18-03-2021
ಉತ್ತರಿಸುವ ಸಚಿವರು : ಮಾನ್ಯ ಅರಣ್ಯ, ಕನ್ನಡ ಮತ್ತು ಸಂಸ್ಕೃತಿ ಸಚಿವರು

| ಕ್ರ.ಸಂ. | ಪ್ರಶ್ನೆ | ಉತ್ತರ |
|---|---|---|
| ಅ) | ಚಿಕ್ಕಮಗಳೂರು ಜಿಲ್ಲೆ, ಎನ್.ಆರ್.ಪುರ ತಾಲ್ಲೂಕು, ನಾಗಲಾಪುರ ಗ್ರಾಮದ ಸ.ನಂ.194ರಲ್ಲಿ ಅರಣ್ಯ ಇಲಾಖೆಯ ವಶದಲ್ಲಿರುವ 15 ಎಕರೆ ಕಂದಾಯ ಭೂಮಿಯನ್ನು ಪಟ್ಟಣ ಪಂಚಾಯಿತಿಗೆ ಆಶ್ರಯ ನಿವೇಶನಗಳಿಗೆ ಮಂಜೂರು ಮಾಡಲು ತೀರ್ಮಾನಿಸಲಾಗಿದ್ದರೂ ಅರಣ್ಯ ಇಲಾಖೆಯು ಆ ಜಾಗವನ್ನು ಬಿಟ್ಟುಕೊಡಲು ಆಕ್ಷೇಪ ವ್ಯಕ್ತಪಡಿಸುತ್ತಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; (ವಿವರ ನೀಡುವುದು) | ಚಿಕ್ಕಮಗಳೂರು ಜಿಲ್ಲೆ, ಎನ್.ಆರ್.ಪುರ ತಾಲ್ಲೂಕು, ನಾಗಲಾಪುರ ಗ್ರಾಮದ ಸ.ನಂ.194ರಲ್ಲಿ 13.82 ಹೆಕ್ಟೇರ್ (34.14 ಎಕರೆ) ಪ್ರದೇಶವು ಡೀಮ್ಡ್ ಫಾರೆಸ್ಟ್ ವ್ಯಾಪ್ತಿಯಲ್ಲಿ ಸೇರ್ಪಡೆಗೊಂಡಿರುತ್ತದೆ.<br>ಪ್ರಸ್ತಾಪಿತ ಸರ್ವೆ ನಂಬರಿನಲ್ಲಿ ಪ್ರಸ್ತುತ ಸರ್ಕಾರಿ ನಾಟಾ ಸಂಗ್ರಹಾಲಯವಿರುತ್ತದೆ. ಅನುಮೋದಿತ ಕಾರ್ಯ ಯೋಜನೆಯಂತೆ ಅಕೇಶಿಯಾ ನೆಡುತೋಪುಗಳನ್ನು ಮತ್ತು ಸತ್ತು ಬಿದ್ದ ಮರಗಳನ್ನು ಕಡಿತಲೆ ಮಾಡಿ ನಾಟಾ ಸಂಗ್ರಹಾಲಯದಲ್ಲಿ ನಾಟಾ ಮತ್ತು ಇತರ ಅರಣ್ಯ ಉತ್ಪನ್ನಗಳನ್ನು ದಾಸ್ತಾನು ಮಾಡಲಾಗಿರುತ್ತದೆ. ಸದರಿ ಸರ್ವೆ ನಂಬರಿನಲ್ಲಿ ಚಿಕ್ಕಗ್ರಹಾರ ಅರಣ್ಯ ವಲಯ, ಕಛೇರಿ, ಸರ್ಕಾರಿ ನಾಟಾ ಸಂಗ್ರಹಾಲಯದ ಕಛೇರಿಗಳು ಹಾಗೂ ಇಲಾಖಾ ವಸತಿ ಗೃಹಗಳು ಇರುತ್ತವೆ.<br>ಪ್ರಸ್ತಾಪಿತ ಪ್ರದೇಶವು ಪರಿಭಾವಿತ ಅರಣ್ಯ ಪ್ರದೇಶ (ಡೀಮ್ಡ್ ಫಾರೆಸ್ಟ್) ವ್ಯಾಪ್ತಿಗೆ ಒಳಪಡುತ್ತಿರುವುದರಿಂದ ಸದರಿ ಪ್ರದೇಶವನ್ನು ಅರಣ್ಯೇತರ ಉದ್ದೇಶಕ್ಕಾಗಿ ಉಪಯೋಗಿಸಲು ಅರಣ್ಯ ಸಂರಕ್ಷಣಾ ಕಾಯ್ದೆ 1980ರಡಿಯಲ್ಲಿ ಪೂರ್ವಾನುಮೋದನೆಯನ್ನು ಪಡೆಯುವುದು ಅವಶ್ಯವಿರುತ್ತದೆ.<br>ಉಪಯೋಗಿ ಸಂಸ್ಥೆಯು ಸದರಿ ಪ್ರದೇಶವನ್ನು ಅರಣ್ಯೇತರ ಉದ್ದೇಶಕ್ಕಾಗಿ ಉಪಯೋಗಿಸಲು ಅರಣ್ಯ ಸಂರಕ್ಷಣಾ ಕಾಯ್ದೆ 1980ರಡಿಯಲ್ಲಿ ಪೂರ್ವಾನುಮೋದನೆಯನ್ನು ಪಡೆಯಲು ಪ್ರಸ್ತಾವನೆಯನ್ನು ಕೇಂದ್ರ ಸರ್ಕಾರದ ವೆಬ್ ಪೋರ್ಟಲ್ (www.parivesh.nic.in) ಮೂಲಕ ಇದುವರೆಗೆ ಸಲ್ಲಿಸಿರುವುದಿಲ್ಲ. |
| ಆ) | ಬಂದಿದ್ದಲ್ಲಿ, ಯಾವ ಕಾಲಮಿತಿಯೊಳಗೆ ಸದರಿ ಸಮಸ್ಯೆಯನ್ನು ಬಗೆಹರಿಸಿ, ಕಂದಾಯ ಭೂಮಿಯನ್ನು ಬಿಟ್ಟುಕೊಡಲಾಗುವುದು? | ಅನ್ವಯಿಸುವುದಿಲ್ಲ. |

ಸಂಖ್ಯೆ: ಅಪಜೀ 21 ಎಫ್‌ಎಪಿ 2021

(ಅರವಿಂದ ಲಿಂಬಾವಳಿ)
ಅರಣ್ಯ, ಕನ್ನಡ ಮತ್ತು ಸಂಸ್ಕೃತಿ ಸಚಿವರು

# ಕರ್ನಾಟಕ ವಿಧಾನಸಭೆ

1) ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 3013

2) ಸದಸ್ಯರ ಹೆಸರು : ಶ್ರೀ ಸುಕುಮಾರ್ ಶೆಟ್ಟಿ ಬಿ.ಎಂ (ಬೈಂದೂರು)

3) ಉತ್ತರಿಸುವ ದಿನಾಂಕ : 18.03.2021

4) ಉತ್ತರಿಸುವವರು : ಅರಣ್ಯ, ಕನ್ನಡ ಮತ್ತು ಸಂಸ್ಕೃತಿ ಸಚಿವರು

| ಕ್ರ.ಸಂ | ಪ್ರಶ್ನೆ | ಉತ್ತರ |
|---|---|---|
| ಅ) | ಉಡುಪಿ ಜಿಲ್ಲೆಗೆ ಕಳೆದ ಮೂರು ವರ್ಷಗಳಲ್ಲಿ ಅರಣ್ಯ ಇಲಾಖೆಗಾಗಿ ಬಿಡುಗಡೆಯಾದ ಅನುದಾನವೆಷ್ಟು; ಆ ಪೈಕಿ ಖರ್ಚು ಮಾಡಿರುವ ವೆಚ್ಚವೆಷ್ಟು; | ಉಡುಪಿ ಜಿಲ್ಲೆಗೆ ಕಳೆದ ಮೂರು ವರ್ಷಗಳಲ್ಲಿ ಅರಣ್ಯ ಇಲಾಖೆಗೆ ಬಿಡುಗಡೆಯಾದ ಅನುದಾನ ಖರ್ಚು ಮಾಡಿರುವ ವೆಚ್ಚ, ಅಭಿವೃದ್ಧಿ, ಕಾಮಗಾರಿಗಳ ವಿವರ, ಸಸಿಗಳನ್ನು ಹಾಗೂ ಹಣ್ಣಿನ ಗಿಡಗಳನ್ನು ನೆಡಲಾಗಿರುವ ವಿವರಗಳನ್ನು ಅನುಬಂಧ 1, 2 ಮತ್ತು 3 ರಲ್ಲಿ ಒದಗಿಸಿದೆ. |
| ಆ) | ಎಲ್ಲೆಲ್ಲಿ ಅಭಿವೃದ್ಧಿ ಕಾಮಗಾರಿಗಳನ್ನು ಕೈಗೊಳ್ಳಲಾಗಿದೆ; (ವರ್ಷವಾರು, ಸಂಪೂರ್ಣ ಮಾಹಿತಿ ನೀಡುವುದು) | |
| ಇ) | ಈ ಅನುದಾನದಲ್ಲಿ ಎಷ್ಟು ಸಸಿಗಳನ್ನು ಹಾಗೂ ಯಾವ ಜಾತಿಯ ಹಣ್ಣಿನ ಗಿಡಗಳನ್ನು ನೆಡಲಾಗಿದೆ; (ಸಂಪೂರ್ಣ ಮಾಹಿತಿ ಒದಗಿಸುವುದು) | |
| ಈ) | ಕಾಡು ಪ್ರಾಣಿಗಳಿಂದ ಉಂಟಾಗುತ್ತಿರುವ ಕೃಷಿ ಹಾನಿ ತಡೆಯಲು ಅರಣ್ಯ ಇಲಾಖೆಯಿಂದ ಇರುವ ಕಾರ್ಯಕ್ರಮಗಳು ಯಾವುವು; | ರಾಜ್ಯದಲ್ಲಿ ಕಾಡು ಪ್ರಾಣಿಗಳಿಂದ ಉಂಟಾಗುತ್ತಿರುವ ಕೃಷಿ ಹಾನಿ ತಡೆಯಲು ಅರಣ್ಯ ಇಲಾಖೆಯಿಂದ ಈ ಕೆಳಕಂಡ ಕ್ರಮಗಳನ್ನು ಕೈಗೊಳ್ಳಲಾಗುತ್ತಿದೆ:<br>1. ಅರಣ್ಯ ಪ್ರದೇಶದಲ್ಲಿ ಹುಲ್ಲುಗಾವಲು ಸಂರಕ್ಷಣೆ ಹಾಗೂ ಅಭಿವೃದ್ಧಿಗೊಳಿಸಲು 2019-20ನೇ ಸಾಲಿನಿಂದ ಹೊಸ ಯೋಜನೆಯನ್ನು ಅನುಷ್ಠಾನಗೊಳಿಸಲಾಗುತ್ತಿದೆ. ಈ ಯೋಜನೆಯಡಿ ಅರಣ್ಯ ಪ್ರದೇಶಗಳಲ್ಲಿ ದಟ್ಟವಾಗಿ ಬೆಳೆದ ಲಂಟಾನ ಮತ್ತು ಯುಪಟೋರಿಯಂ ಕಳೆಗಳನ್ನು ಹಂತಹಂತವಾಗಿ ಕಿತ್ತು ಸ್ವಚ್ಛಗೊಳಿಸಿ ಅರಣ್ಯಕ್ಕೆ ಪೂರಕವಾದ ಹುಲ್ಲು ಬೆಳೆಯಲು ಅವಕಾಶ ಮಾಡಲಾಗಿದೆ.<br>2. ವನ್ಯಪ್ರಾಣಿಗಳಿಗಾಗಿ ಅರಣ್ಯ ಪ್ರದೇಶಗಳ ಒಳಗೆ ನೀರಿನ ಲಭ್ಯತೆ ಹೆಚ್ಚಿಸಲು ರಕ್ಷಿತಾರಣ್ಯಗಳಲ್ಲಿ ಕೆರೆಗಳ ನಿರ್ಮಾಣ ಹಾಗೂ ಪುನಶ್ಚೇತನ ಗೊಳಿಸಿ ವನ್ಯಪ್ರಾಣಿಗಳ ಆವಾಸಸ್ಥಾನವನ್ನು ಅಭಿವೃದ್ಧಿಗೊಳಿಸಲಾಗುತ್ತಿದೆ. ಇದರಿಂದ ಕಾಡಾನೆ ಹಾಗೂ ಇತರೆ ವನ್ಯಪ್ರಾಣಿಗಳು ಕಾಡಿನಿಂದ ಹೊರಗೆ ಬಾರದಂತೆ ತಡೆಯಲಾಗುತ್ತಿದೆ. |

.....2

| ಕ್ರ.ಸಂ | ಪ್ರಶ್ನೆ | ಉತ್ತರ |
|---|---|---|
| | | 3. ಕಾಡಾನೆಗಳು ಅರಣ್ಯ ಪ್ರದೇಶದಿಂದ ಹೊರಗೆ ಬಾರದಂತೆ ತಡೆಗಟ್ಟಲು ಅರಣ್ಯದಂಚಿನಲ್ಲಿ ಸೌರಶಕ್ತಿ ಬೇಲಿ ನಿರ್ಮಾಣ/ನಿರ್ವಹಣೆ, ಆನೆ ತಡೆಕಂದಕ ನಿರ್ಮಾಣ/ನಿರ್ವಹಣೆ ಮಾಡಲಾಗಿದ್ದು ಮತ್ತು ರೈಲ್ವೆಹಳಿಗಳನ್ನು ಉಪಯೋಗಿಸಿ ಬ್ಯಾರಿಕೇಡ್ ನಿರ್ಮಿಸುವ ಕಾಮಗಾರಿಯನ್ನು ಕೈಗೊಳ್ಳಲಾಗಿದೆ.<br>4. ಕಳ್ಳಬೇಟೆ ತಡೆ ಶಿಬಿರಗಳಿಗೆ (Anti Poaching Camp) ಹಾಗೂ ಕ್ಷಿಪ್ರ ಕಾರ್ಯಾಚರಣೆ ಪಡೆ (Rapid Response Teams) ಗಳನ್ನು ಅಂದರೆ ಕಾಡಾನೆ ಹಿಮ್ಮೆಟ್ಟಿಸುವ ತಂಡಗಳನ್ನು ರಚಿಸಿ ಕಾಡಾನೆಗಳನ್ನು ಕಾಡಿಗೆ ಹಿಮ್ಮೆಟ್ಟಿಸುವ ಕಾರ್ಯ ಕೈಗೊಳ್ಳಲಾಗುತ್ತಿದೆ ಹಾಗೂ Wireless Networking ಮೂಲಕ ಮಾಹಿತಿ ಸಂವಹನ ಮಾಡಲಾಗುತ್ತಿದೆ.<br>5. ಕಾಡಾನೆಗಳ ಮಾಹಿತಿಯನ್ನು ಸಂಗ್ರಹಿಸಲು 24 ಗಂಟೆ ಕಾರ್ಯನಿರ್ವಹಿಸುವ ಮಾಹಿತಿ ಕೇಂದ್ರ ಸ್ಥಾಪಿಸಲಾಗಿದೆ.<br>6. ಕಾಡಾನೆ ಗುಂಪಿನಲ್ಲಿದ್ದ ವಯಸ್ಕ ಹೆಣ್ಣಾನೆಯನ್ನು ಗುರುತಿಸಿ ಅದಕ್ಕೆ ರೇಡಿಯೋ ಕಾಲರ್ ಅಳವಡಿಸಿ ಆನೆಗಳ ಚಲನವಲನಗಳ ಬಗ್ಗೆ ಎಸ್.ಎಂ.ಎಸ್. ಹಾಗೂ ವಾಟ್ಸಾಪ್ ಮೂಲಕ ಜನರಿಗೆ ಮಾಹಿತಿಯನ್ನು ನೀಡಿ ಮಾನವ ಪ್ರಾಣಹಾನಿ ಹಾಗೂ ಮಾನವ ಗಾಯ ತಪ್ಪಿಸಲು ಕ್ರಮವಹಿಸಲಾಗುತ್ತಿದೆ.<br>7. ಸಾರ್ವಜನಿಕರಿಗೆ ಉಪಟಳ ನೀಡುತ್ತಿರುವ ಪುಂಡಾನೆಗಳನ್ನು ಗುರುತಿಸಿ, ಸೆರೆಹಿಡಿದು ಆಗ್ಗಿಂದಾಗ್ಗೆ ಆನೆ ಶಿಬಿರಗಳಿಗೆ ಸ್ಥಳಾಂತರಿಸಲಾಗಿದೆ.<br>ವನ್ಯಪ್ರಾಣಿಗಳ ಹಾವಳಿಯಿಂದ ಉಂಟಾದ ಕೃಷಿ ಹಾನಿ ಹಾಗೂ ಇತರೆ ಪ್ರಕರಣಗಳಲ್ಲಿ ದಯಾತ್ಮಕ ಧನವನ್ನು ಪಾವತಿಸಲಾಗುತ್ತಿದ್ದು, ಇತ್ತೀಚಿನ ದಿನಗಳಲ್ಲಿ ವನ್ಯಪ್ರಾಣಿಗಳ ಹಾವಳಿಯಿಂದ ಉಂಟಾಗುವ ಹಾನಿ ಪ್ರಕರಣಗಳಿಗೆ ಇ-ತಂತ್ರಾಂಶದ ಮೂಲಕ ಅರ್ಜಿಗಳನ್ನು ಸ್ವೀಕರಿಸಲಾಗುತ್ತಿದ್ದು, ಆದ್ಯತೆ ಮೇರೆಗೆ ಸರ್ಕಾರದ ನಿಯಮಾನುಸಾರ ಪರಿಶೀಲಿಸಿ, ಶೀಘ್ರವೇ ನೇರವಾಗಿ ಸಂತ್ರಸ್ತರ ಖಾತೆಗೆ ಪಾವತಿಸುವ ಪ್ರಕ್ರಿಯೆಯನ್ನು ಇ-ಪರಿಹಾರ ತಂತ್ರಾಂಶದ ಮೂಲಕ ನಿರ್ವಹಿಸಲಾಗುತ್ತಿದೆ. |
| ಉ) | ಬೈಂದೂರು ವಿಧಾನಸಭಾ ಕ್ಷೇತ್ರ ವ್ಯಾಪ್ತಿಯಲ್ಲಿ ಕಾಡು ಪ್ರಾಣಿಗಳಿಂದ ಉಂಟಾಗುತ್ತಿರುವ ಕೃಷಿ ಹಾನಿ ತಡೆಯಲು ತೆಗೆದುಕೊಂಡ ಕ್ರಮಗಳೇನು? (ಸಂಪೂರ್ಣ ಮಾಹಿತಿ ಒದಗಿಸುವುದು) | ಬೈಂದೂರು ವಿಧಾನಸಭಾ ಕ್ಷೇತ್ರ ವ್ಯಾಪ್ತಿಯಲ್ಲಿ ಕಾಡು ಪ್ರಾಣಿಗಳಿಂದ ಉಂಟಾಗುತ್ತಿರುವ ಕೃಷಿ ಹಾನಿ ತಡೆಯಲು ಅರಣ್ಯ ಇಲಾಖೆಯಿಂದ ಈ ಕೆಳಕಂಡ ಕ್ರಮಗಳನ್ನು ಕೈಗೊಳ್ಳಲಾಗುತ್ತಿದೆ:<br>1. ಅರಣ್ಯದಂಚಿನಲ್ಲಿ ಬರುವಂತಹ ಹಿಡುವಳಿ ಜಮೀನುಗಳಲ್ಲಿ ಬೆಳೆದ ಬೆಳೆಗಳನ್ನು ಕಾಡು ಪ್ರಾಣಿಗಳ ದಾಳಿಯಿಂದ ರಕ್ಷಿಸಲು ರೈತರಿಗೆ ಶೇ.50 ರಷ್ಟು ಸಬ್ಸಿಡಿ ಆಧಾರಿತ ಸೋಲಾರ್ ತಂತಿಬೇಲಿ ನಿರ್ಮಾಣ ಕಾರ್ಯಗಳನ್ನು ಕೈಗೊಳ್ಳಲಾಗಿರುತ್ತದೆ.<br>2. ಕಾಡುಪ್ರಾಣಿಗಳ ಹಾವಳಿ ಉಂಟಾದ ಸಂದರ್ಭಗಳಲ್ಲಿ ಸಿಬ್ಬಂದಿಗಳ ತಂಡ ರಚಿಸಿ ಕಾಡುಪ್ರಾಣಿಗಳನ್ನು ಕಾಡಿಗೆ ಹಿಮ್ಮೆಟ್ಟಿಸಲು ಕ್ರಮಕೈಗೊಳ್ಳಲಾಗಿರುತ್ತದೆ. |

| ಕ್ರ.ಸಂ | ಪ್ರಶ್ನೆ | ಉತ್ತರ |
|---|---|---|
| | | 3. ವನ್ಯಪ್ರಾಣಿಗಳ ಹಾವಳಿಯಿಂದ ಉಂಟಾದ ಬೆಳೆಹಾನಿ ಹಾಗೂ ಇತರೆ ಪ್ರಕರಣಗಳಲ್ಲಿ ದಯಾತ್ಮಕ ಧನವನ್ನು ಪಾವತಿಸಲಾಗುತ್ತಿದ್ದು, ಇತ್ತೀಚಿನ ದಿನಗಳಲ್ಲಿ ವನ್ಯಪ್ರಾಣಿಗಳ ಹಾವಳಿಯಿಂದ ಉಂಟಾಗುವ ಹಾನಿ ಪ್ರಕರಣಗಳಿಗೆ ಇ-ತಂತ್ರಾಂಶದ ಮೂಲಕ ಅರ್ಜಿಗಳನ್ನು ಸ್ವೀಕರಿಸಲಾಗುತ್ತಿದ್ದು, ಆದ್ಯತೆ ಮೇರೆಗೆ ನಿಯಮಾನುಸಾರ ಪರಿಶೀಲಿಸಿ, ಶೀಘ್ರವೇ ನೇರವಾಗಿ ಸಂತ್ರಸ್ತರ ಖಾತೆಗೆ ಪಾವತಿಸುವ ಪ್ರಕ್ರಿಯೆಯನ್ನು ಇ-ಪರಿಹಾರ ತಂತ್ರಾಂಶದ ಮೂಲಕ ನಿರ್ವಹಿಸಲಾಗುತ್ತಿದೆ.<br><br>ಕಳೆದ 03 ವರ್ಷಗಳಲ್ಲಿ ವನ್ಯಪ್ರಾಣಿ ಹಾವಳಿಯಿಂದ ಉಂಟಾದ ಬೆಳೆನಾಶ ಪ್ರಕರಣಗಳಲ್ಲಿ ಪಾವತಿಸಿದ ದಯಾತ್ಮಕಧನದ ವಿವರ ಈ ಕೆಳಕಂಡಂತಿದೆ. |

| ಕ್ರ.ಸಂ | ವರ್ಷ | ಪ್ರಕರಣ | ಪಾವತಿಸಿದ ಪರಿಹಾರ ಮೊತ್ತ (ರೂ.ಲಕ್ಷಗಳಲ್ಲಿ) |
|---|---|---|---|
| 1 | 2017–18 | 57 | 3.37284 |
| 2 | 2018–19 | 55 | 3.09676 |
| 3 | 2019–20 | 15 | 0.87900 |
| 4 | 2020–21 | 49 | 2.16415 |
| | ಒಟ್ಟು | **176** | **9.51275** |

ಸಂಖ್ಯೆ: ಅಪಜೀ 26 ಎಫ್‌ಟಿಎಸ್ 2021

(ಅರವಿಂದ ಲಿಂಬಾವಳಿ)
ಅರಣ್ಯ, ಕನ್ನಡ ಮತ್ತು ಸಂಸ್ಕೃತಿ ಸಚಿವರು

# ಕರ್ನಾಟಕ ವಿಧಾನ ಸಭೆ

ಚುಕ್ಕೆ ಗುರುತ್ತಿಲ್ಲದ ಪ್ರಶ್ನೆ ಸಂಖ್ಯೆ : 3017

ಮಾನ್ಯ ವಿಧಾನ ಸಭಾ ಸದಸ್ಯರ ಹೆಸರು : ಶ್ರೀ ಹ್ಯಾರಿಸ್.ಎನ್.ಎ (ಶಾಂತಿನಗರ)

ಉತ್ತರಿಸಬೇಕಾದ ದಿನಾಂಕ : 18.03.2021

ಉತ್ತರಿಸುವ ಸಚಿವರು : ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಹಾಗೂ ವೈದ್ಯಕೀಯ ಶಿಕ್ಷಣ ಸಚಿವರು.

| ಕ್ರ.ಸಂ | ಪ್ರಶ್ನೆ | ಉತ್ತರ |
|---|---|---|
| ಅ | ಕೋವಿಡ್ ಪ್ರತಿಬಂಧಕ ಲಸಿಕೆ ನೀಡಿಕೆಯ ಕಾರ್ಯಕ್ರಮಗಳ ಕುರಿತಾದ ಪ್ರಗತಿಯ ವಿವರಗಳೇನು; | ಭಾರತ ಸರ್ಕಾರದ ನಿರ್ದೇಶನದಂತೆ ರಾಜ್ಯದಲ್ಲಿ ಕೋವಿಡ್-19 ಲಸಿಕಾಕರಣವನ್ನು ಜನವರಿ 16, 2021 ರಂದು ಪ್ರಾರಂಭಿಸಲಾಗಿದ್ದು, ಮೊದಲನೆ ಹಂತದಲ್ಲಿ ಆರೋಗ್ಯ ಕಾರ್ಯಕರ್ತರಿಗೆ ಆದ್ಯತೆ ಮೇರೆಗೆ ಲಸಿಕೆ ನೀಡಲಾಯಿತು. ನಂತರ ಫೆಬ್ರವರಿ 8, 2021 ರಿಂದ ಎರಡನೇ ಹಂತದಲ್ಲಿ ಮುಂಚೂಣಿ ಕಾರ್ಯಕರ್ತರಿಗೆ ಆದ್ಯತೆ ಮೇರೆಗೆ ಲಸಿಕೆ ನೀಡಲಾಯಿತು ಮತ್ತು ಮಾರ್ಚ್ 1, 2021 ರಿಂದ ಮೂರನೇ ಹಂತದಲ್ಲಿ 45 ವಯಸ್ಸಿನ ಮೇಲ್ಪಟ್ಟವರು ಹಾಗೂ 59 ವರ್ಷದೊಳಗಿನ ಫಲಾನುಭವಿಗಳಲ್ಲಿ ಸಹ ಅಸ್ವಸ್ಥತೆ ಹೊಂದಿರುವವರಿಗೆ ಮತ್ತು 60 ವರ್ಷದ ಮೇಲ್ಪಟ್ಟವರಿಗೆ ರೋಗ ನಿರೋಧಕ ಶಕ್ತಿ ಕಡಿಮೆ ಇರುವುದರಿಂದ ಆದ್ಯತೆ ಮೇರೆಗೆ ಲಸಿಕೆ ನೀಡಲಾಗುತ್ತಿದೆ. |
| ಆ | ಇದುವರೆಗೆ ಎಷ್ಟು ಜನರಿಗೆ ಲಸಿಕೆಯನ್ನು ನೀಡಲಾಗಿದೆ; ಲಸಿಕೆ ನೀಡಿದವರ ಆರೋಗ್ಯದ ಕುರಿತಾದ ವಿವರಗಳ ಸಂಗ್ರಹಣೆಯನ್ನು ಮಾಡಲಾಗುತ್ತಿದೆಯೆ; | ರಾಜ್ಯದಲ್ಲಿ ಇಲ್ಲಿಯವರೆಗೆ ದಿನಾಂಕ: 16.03.2021 ರ ಅಂತ್ಯಕ್ಕೆ ಒಟ್ಟು 16,68,628 ಡೋಸ್ ಲಸಿಕೆ ನೀಡಲಾಗಿದೆ. |
| ಇ | ಲಸಿಕೆ ಪಡೆದವರಿಗೆ ಅಡ್ಡ ಪರಿಣಾಮಗಳುಂಟಾದ ಪ್ರಕರಣಗಳೆಷ್ಟು; ಲಸಿಕೆಯ ನೀಡಿಕೆಯಿಂದ ಅಡ್ಡ ಪರಿಣಾಮ ಇಲ್ಲದಿರುವುದನ್ನು ಜನ ಸಾಮಾನ್ಯರಿಗೂ ತಿಳಿಹೇಳುವ ಮತ್ತು ಲಸಿಕೆ ನೀಡಿಕೆ ಅಭಿಯಾನದ ಕುರಿತಾದ ಕ್ರಮಗಳೇನು; | ಲಸಿಕೆ ಪಡೆದವರಲ್ಲಿ ಇದುವರೆಗೂ 505 ಸಣ್ಣ, ಮತ್ತು 28 ಗಂಭೀರ,1 ತೀವ್ರ ಅಡ್ಡಪರಿಣಾಮಗಳ ಪ್ರಕರಣಗಳು ಕಂಡುಬಂದಿದ್ದು, ಅದರಲ್ಲಿ 4 ಸಾವನ್ನಪ್ಪಿರುತ್ತವೆ.<br><br>ಕೋವಿಡ್ ಲಸಿಕೆಯ ಅಡ್ಡ ಪರಿಣಾಮದ ಬಗ್ಗೆ ಮಾಡುತ್ತಿರುವ ಅಪಪ್ರಚಾರವನ್ನು ತಡೆಯಲು ಸರ್ಕಾರ ಈ ಕೆಳಕಂಡ ಕ್ರಮಗಳನ್ನು ತೆಗೆದುಕೊಂಡಿದೆ:<br>1. ರಾಜ್ಯ ಮಟ್ಟದಲ್ಲಿ ಕೋವಿಡ್-19 ಲಸಿಕೆ ಮತ್ತು ಅಡ್ಡಪರಿಣಾಮಗಳ ಕುರಿತಂತೆ ಮಾಧ್ಯಮದವರಿಗೆ ತಿಳುವಳಿಕೆ ಕಾರ್ಯಕ್ರಮವನ್ನು ದಿನಾಂಕ: 17.02.2021 ರಂದು ನಡೆಸಲಾಗಿದೆ.<br>2. ಜಿಲ್ಲಾ ಮತ್ತು ತಾಲ್ಲೂಕು ಮಟ್ಟದಲ್ಲಿ ಅಡ್ಡಪರಿಣಾಮಗಳ ಕುರಿತು ಹಾಗೂ ಅದರ ಕುರಿತಂತೆ ಮಾಧ್ಯಮಗಳಲ್ಲಿ ಪ್ರಕಟವಾಗಬಹುದಾದ ಅಡ್ಡಪರಿಣಾಮಗಳ ಬಗ್ಗೆ ಅಪಪ್ರಚಾರವನ್ನು ತಡೆಯಲು / ನಿರ್ವಹಿಸಲು ತರಬೇತಿ ನೀಡಲಾಗಿದೆ. |

| | | |
|---|---|---|
| | | 3. ಮಾಧ್ಯಮಗಳಲ್ಲಿ/ಪತ್ರಿಕೆಗಳಲ್ಲಿ ಅಡ್ಡಪರಿಣಾಮಗಳ ಕುರಿತು ಅಪಪ್ರಚಾರ ವರದಿಯಾದ ತಕ್ಷಣವೇ ಸರಿಯಾದ ಮಾಹಿತಿ ನೀಡಿ ಜನರ ಮನದಲ್ಲಿ ಉಂಟಾಗಬಹುದಾದ ಗೊಂದಲಗಳನ್ನು ಪರಿಹರಿಸಲು ಕ್ರಮ ಕೈಗೊಳ್ಳಲಾಗುತ್ತಿದೆ.<br>4. ರಾಜ್ಯ ಮಟ್ಟದಲ್ಲಿ ಮತ್ತು ಜಿಲ್ಲಾ ಮಟ್ಟದಲ್ಲಿ ನಿಯಂತ್ರಣ ಘಟಕಗಳನ್ನು ಅನುಷ್ಠಾನಗೊಳಿಸಲಾಗಿದೆ.<br>5. ರಾಜ್ಯ ಮಟ್ಟದಲ್ಲಿ ಹಾಗೂ ಜಿಲ್ಲಾ ಮಟ್ಟದಲ್ಲಿ ಮಾಧ್ಯಮ ವಕ್ತಾರರನ್ನು ಗುರುತಿಸಲಾಗಿದ್ದು, ಅವರಿಗೆ ರಾಜ್ಯಮಟ್ಟದಿಂದ ತರಬೇತಿ ನೀಡಲಾಗಿದೆ. ಎಇಎಫ್ಐ ಕುರಿತ ಯಾವುದೇ ಸುಳ್ಳುವದಂತಿ ಅಪಪ್ರಚಾರಗಳು ಉಂಟಾದರೆ ಅವುಗಳ ಕುರಿತು ಮಾಧ್ಯಮಗಳಿಗೆ ಮತ್ತು ಸಾರ್ವಜನಿಕರಿಗೆ ಸೂಕ್ತ ಮಾಹಿತಿ ಮತ್ತು ವಿವರಣೆಯನ್ನು ನೀಡಲು ತಿಳಿಸಲಾಗಿದೆ.<br>6. ರಾಜ್ಯ ಮತ್ತು ಜಿಲ್ಲೆಯಲ್ಲಿನ ಯಾವುದೇ ಲಸಿಕಾ ಸ್ಥಳಗಳಲ್ಲಿ ಅಡ್ಡ ಪರಿಣಾಮ (ಎಇಎಫ್ಐ) ಕುರಿತು ಮಾಧ್ಯಮಗಳಲ್ಲಿ ತಪ್ಪು ಮಾಹಿತಿ ಪ್ರಕಟವಾದರೆ ತಕ್ಷಣ ಜಿಲ್ಲಾ/ರಾಜ್ಯ ಎ.ಇ.ಎಫ್.ಐ ವಕ್ತಾರರ ಗಮನಕ್ಕೆ ತಂದು ಸ್ಪಷ್ಟೀಕರಣ ನೀಡಲಾಗುತ್ತಿದೆ.<br>7. ಎಇಎಫ್ಐಗೆ ಸಂಬಂಧಪಟ್ಟ ಐಇಸಿ (ಮಾಹಿತಿ, ಶಿಕ್ಷಣ ಮತ್ತು ಸಂವಹನ) ಮಾದರಿಗಳು ಮತ್ತು ಸಂವಹನ ಯೋಜನೆಗಳನ್ನು ಹೆಚ್ಚಾಗಿ ಬಳಸಲು ಜಿಲ್ಲೆಗಳಿಗೆ ಸೂಚಿಸಲಾಗಿದೆ.<br>8. ಕೋವಿಡ್ ಲಸಿಕೆಗೆ ಸಂಬಂಧಿಸಿದಂತೆ ವೀಡಿಯೋಗಳನ್ನು ಸಾಮಾಜಿಕ ಮಾಧ್ಯಮದಲ್ಲಿ (Social Media) ಬಿತ್ತರಿಸಲಾಗಿದೆ.<br>9. ಭಾರತ ಸರ್ಕಾರದಿಂದ ಕೋವಿಡ್ ಲಸಿಕೆ ಕುರಿತಂತೆ ಎಫ್ಎಕ್ಯೂ ಪದೇ ಪದೇ ಕೇಳಲಾಗುವ ಪ್ರಶ್ನೆಗಳನ್ನು ಕನ್ನಡಕ್ಕೆ ಅನುವಾದಿಸಿ ಎಲ್ಲ ಹಂತಗಳಲ್ಲಿ ತಿಳುವಳಿಕೆ ಮೂಡಿಸಲು ಬಳಸಲಾಗಿದೆ.<br>10. ಕೋವಿಡ್ ಲಸಿಕೆಯ ಅಡ್ಡಪರಿಣಾಮಗಳ ಅಪಪ್ರಚಾರ ಕುರಿತಂತೆ ಸರಿಯಾದ ಮಾಹಿತಿ ಪಡೆಯಲು ಭಾರತ ಸರ್ಕಾರದಿಂದ ಪ್ರಕಟವಾಗುವ ಮಾಹತಿಯನ್ನಷ್ಟೇ ಅವಲಂಬಿಸಲು ಮಾಹಿತಿ ನೀಡಲಾಗಿದೆ. |
| ಈ | ಪ್ರಸ್ತುತ ಲಸಿಕೆ ಪಡೆಯವಲ್ಲಿನ ಅರ್ಹತಾ ವಿಧಿವಿಧಾನಗಳು ಯಾವುವು; ನೀಡಿಕೆಯಲ್ಲಿನ ಆದ್ಯತೆಯ ನಿಯಮಗಳೇನು; | ಭಾರತ ಸರ್ಕಾರದ ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಮಂತ್ರಾಲಯವು ದಿನಾಂಕ:28/12/2020 ರಂದು ಕೋವಿಡ್-19 ಲಸಿಕಾಕರಣದ ಕುರಿತು ನಿರ್ವಹಣಾ ಮಾರ್ಗಸೂಚಿಗಳನ್ನು ಹೊರಡಿಸಿದ್ದು, (ಅಂತರ್ಜಾಲ ತಾಣ www.mohfw.gov.in/www.cowin.in ಲಭ್ಯವಿದೆ) ರಾಜ್ಯದಲ್ಲಿ ಲಸಿಕೆಯನ್ನು ಮಾರ್ಗಸೂಚಿಯಲ್ಲಿ ನಮೂದಿಸಿರುವ , ಕೋವಿಡ್-19 ಹಿಮ್ಮೆಟ್ಟಿಸುವಲ್ಲಿ ಕಾರ್ಯೋನ್ಮುಖರಾದ ಮುಂಚೂಣಿಯ ಎಲ್ಲಾ ಶ್ರೇಣಿಯ ಕೆಳಕಂಡ ನೌಕರರಿಗೆ/ಅಧಿಕಾರಿಗಳಿಗೆ ನೀಡಲಾಗುತ್ತಿದೆ.<br>1. ಆರೋಗ್ಯ ಕಾರ್ಯಕರ್ತರು ಮತ್ತು ಐಸಿಡಿಎಸ್ ಕಾರ್ಯಕರ್ತರು<br>2. ಶುಶ್ರೂಷಕರು ಮತ್ತು ಮೇಲ್ವಿಚಾರಕರು<br>3. ವೈದ್ಯರುಗಳು / ವೈದ್ಯಾಧಿಕಾರಿಗಳು |

| | | 4. ಪ್ಯಾರಾಮೆಡಿಕಲ್ ಸಿಬ್ಬಂದಿ<br>5. ಎಲ್ಲಾ ಬೆಂಬಲ ಸಿಬ್ಬಂದಿಗಳು<br>6. ಎಲ್ಲಾ ವೈದ್ಯಕೀಯ ವಿದ್ಯಾರ್ಥಿಗಳು<br>7. ವಿಜ್ಞಾನ ಮತ್ತು ಸಂಶೋಧನ ವಿಭಾಗ ಎಲ್ಲಾ ಸಿಬ್ಬಂದಿಗಳು<br>8 ಕಂದಾಯ, ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆ, ಪೊಲೀಸ್ ಇಲಾಖೆ, ಪುರ ಸಭೆ ಸಿಬ್ಬಂದಿಗಳು<br>45 ವಯಸ್ಸಿನ ಮೇಲ್ಪಟ್ಟವರು ಹಾಗೂ 59 ವರ್ಷದೊಳಗಿನ ಫಲಾನುಭವಿಗಳಲ್ಲಿ ಸಹ ಅಸ್ವಸ್ಥತೆ ಹೊಂದಿರುವವರಿಗೆ ಮತ್ತು 60 ವರ್ಷದ ಮೇಲ್ಪಟ್ಟವರಿಗೆ ರೋಗನಿರೋಧಕ ಶಕ್ತಿ ಕಡಿಮೆ ಇರುವುದರಿಂದ ಕೋವಿಡ್ ಸೋಂಕು ಹರಡುವ ಸಾಧ್ಯತೆ ಮತ್ತು ಆಸ್ಪತ್ರೆಗೆ ದಾಖಲಾಗುವ ಸಾಧ್ಯತೆ ಹೆಚ್ಚಾಗಿರುತ್ತದೆ, ಆದ್ದರಿಂದ ಆದ್ಯತೆ ಮೇರೆಗೆ ಮೂರನೆ ಹಂತದಲ್ಲಿ ಕೋವಿಡ್ ಲಸಿಕೆಯನ್ನು ನೀಡಲಾಗುತ್ತಿದೆ. |
|---|---|---|
| ಉ | ಕೋವಿಡ್ ದುಷ್ಪರಿಣಾಮಗಳನ್ನು ಎದುರಿಸುವಲ್ಲಿ ಸರ್ಕಾರದ ಪ್ರಸ್ತುತ ಪ್ರಯತ್ನಗಳೊಂದಿಗೆ ಎರಡನೇ ಅಲೆಯನ್ನು ಆರಂಭದಲ್ಲಿಯೇ ಹತ್ತಿಕ್ಕಲು ಸರ್ಕಾರದ ಮುಂದಿರುವ ಪರಿಣಾಮಕಾರಿ ಕ್ರಮಗಳು ಯಾವುವು? | ಕೋವಿಡ್ ದುಷ್ಪರಿಣಾಮಗಳನ್ನು ಎದುರಿಸುವಲ್ಲಿ ಸರ್ಕಾರದ ಪ್ರಸ್ತುತ ಪ್ರಯತ್ನಗಳೊಂದಿಗೆ ಎರಡನೇ ಅಲೆಯನ್ನು ಆರಂಭದಲ್ಲಿಯೇ ಹತ್ತಿಕ್ಕಲು ಸರ್ಕಾರದ ಮುಂದಿರುವ ಪರಿಣಾಮಕಾರಿ ಕ್ರಮಗಳು ಅನುಬಂಧದಲ್ಲಿ ನೀಡಲಾಗಿದೆ. |

**ಆಕುಕ 53 ಎಸ್‌ಎಂಎಂ 2021**

(ಡಾ|| ಕೆ. ಸುಧಾಕರ್)

ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಹಾಗೂ
ವೈದ್ಯಕೀಯ ಶಿಕ್ಷಣ ಸಚಿವರು.

# ಕರ್ನಾಟಕ ವಿಧಾನಸಭೆ

1) ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 2606

2) ಸದಸ್ಯರ ಹೆಸರು : ಶ್ರೀ ಪರಣ್ಣ ಈಶ್ವರಪ್ಪ ಮುನವಳ್ಳಿ (ಗಂಗಾವತಿ)

3) ಉತ್ತರಿಸುವ ದಿನಾಂಕ : 18.03.2021

4) ಉತ್ತರಿಸುವವರು : ಅರಣ್ಯ, ಕನ್ನಡ ಮತ್ತು ಸಂಸ್ಕೃತಿ ಸಚಿವರು

| ಕ್ರ ಸಂ | ಪ್ರಶ್ನೆ | ಉತ್ತರ |
|---|---|---|
| ಅ) | ಗಂಗಾವತಿ ವಿಧಾನಸಭಾ ಕ್ಷೇತ್ರ ವ್ಯಾಪ್ತಿಯ ಆನೆಗುಂದಿ ಹಾಗೂ ಸುತ್ತಲಿನ ಗ್ರಾಮಗಳಲ್ಲಿ ಚಿರತೆಗಳ ಹಾವಳಿ ಹೆಚ್ಚಾಗಿ, ಇಬ್ಬರು ಮೃತಪಟ್ಟಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; | ಬಂದಿದೆ.<br>ಕೊಪ್ಪಳ ವಿಭಾಗದ ಗಂಗಾವತಿ ವಲಯದ ಆನೆಗುಂದಿಯಲ್ಲಿ ದಿನಾಂಕ:04.11.2020ರಂದು ಶ್ರೀ ಹುಲಿಗೇಶ ಎಂಬುವವರು ಹಾಗೂ ದಿನಾಂಕ:01.01.2021 ರಂದು ವಿರುಪಾಪುರಗಡ್ಡಿ ಗ್ರಾಮದ ಬಳಿ ಶ್ರೀ ರಾಘವೇಂದ್ರ ಎಂಬುವರು ಚಿರತೆ ದಾಳಿಯಿಂದ ಮೃತಪಟ್ಟಿರುತ್ತಾರೆ. ಅಲ್ಲದೇ, ದಿನಾಂಕ:10.10.2020 ರಂದು ಒಂದು ಮಹಿಳೆಯ ಮೇಲೆ ಹಾಗೂ ದಿನಾಂಕ:12.12.2020 ರಂದು ಸಂಗಾಪುರದ ಬಳಿ ಒಬ್ಬ ಕುರಿಗಾಯಿ ಬಾಲಕನ ಮೇಲೆ ಚಿರತೆ ದಾಳಿಮಾಡಿ ಗಂಭೀರವಾಗಿ ಗಾಯಗೊಳಿಸಿರುವ ಪ್ರಕರಣ ದಾಖಲಾಗಿರುತ್ತದೆ. |
| ಆ) | ಬಂದಿದ್ದಲ್ಲಿ, ಈ ಹಾವಳಿಯನ್ನು ತಡೆಗಟ್ಟಲು ಅರಣ್ಯ ಇಲಾಖೆಯಿಂದ ಯಾವ ಕ್ರಮ ಕೈಗೊಳ್ಳಲಾಗಿದೆ (ಸಂಪೂರ್ಣ ವಿವರ ಒದಗಿಸುವುದು) | ಮಾನವ ಪ್ರಾಣಹಾನಿ ಪ್ರಕರಣಗಳಿಗೆ ಕಾರಣವಾಗಿರುವ ಚಿರತೆಯನ್ನು ಗುರುತಿಸಲು ಈ ಕೆಳಕಂಡ ಕ್ರಮಗಳನ್ನು ಕೈಗೊಳ್ಳಲಾಗಿರುತ್ತದೆ:<br><br>1. ಚಿರತೆಯ ಚಲನವಲನ ಗಮನಿಸಲು 8 ಸೂಕ್ಷ್ಮ ಪ್ರದೇಶಗಳನ್ನು ಗುರುತಿಸಿ 52 ಕ್ಯಾಮರಾ ಟ್ರ್ಯಾಪ್‌ಗಳನ್ನು, 01 ನೆಟ್‌ವರ್ಕ್ ಕ್ಯಾಮೆರಾ ಟ್ರ್ಯಾಪ್‌ನ್ನು ಅಳವಡಿಸಲಾಗಿರುತ್ತದೆ. ಬಂಡಿಪುರದಿಂದ ತಜ್ಞರನ್ನು ಕರೆಸಿಕೊಂಡು ಕ್ಯಾಮೆರಾ ಟ್ರ್ಯಾಪ್‌ಗಳನ್ನು ಉಪಯೋಗಿಸುವ ಬಗ್ಗೆ ಇಲಾಖೆಯ ಸಿಬ್ಬಂದಿಗಳಿಗೆ ತರಬೇತಿಯನ್ನು ನೀಡಲಾಗಿರುತ್ತದೆ.<br><br>2. ಡ್ರೋನ್ ಕ್ಯಾಮರಾ ಸಹಾಯದಿಂದ ಚಿರತೆಯ ಇರುವಿಕೆ ಬಗ್ಗೆ ಖಚಿತಪಡಿಸಿಕೊಳ್ಳಲಾಗಿರುತ್ತದೆ.<br><br>3. ಮಾನವ ಪ್ರಾಣಹಾನಿ ಸಂಭವಿಸಿದ ಪ್ರದೇಶದ ಸುತ್ತಮುತ್ತ 08 ಸ್ಥಳಗಳನ್ನು ಗುರುತಿಸಿ ಬೋನ್‌ಗಳನ್ನು ಇರಿಸಲಾಗಿರುತ್ತದೆ.<br><br>4. ಚಿರತೆಯನ್ನು ಸೆರೆಹಿಡಿಯಲು ಸಕ್ರೆಬೈಲು ಆನೆ ಬಿಡಾರದಿಂದ 02 ಕುಮ್ಕಿ ಆನೆಗಳನ್ನು ಕರೆಸಿ ಚಿರತೆ ಸೆರೆ ಹಿಡಿಯಲು ಕೂಂಬಿಂಗ್ ಕಾರ್ಯಾಚರಣೆಗೆ ಬಳಸಿಕೊಳ್ಳಲಾಗಿರುತ್ತದೆ. |

.....2

| ಕ್ರ ಸಂ | ಪ್ರಶ್ನೆ | ಉತ್ತರ |
|---|---|---|
| | | ವನ್ಯಪ್ರಾಣಿಗಳ ದಾಳಿಯಿಂದ ಸಾರ್ವಜನಿಕರನ್ನು ರಕ್ಷಿಸಲು ಇಲಾಖೆಯು ಈ ಕೆಳಕಂಡ ಮುಂಜಾಗ್ರತಾ ಕ್ರಮಗಳನ್ನು ಕೈಗೊಂಡಿರುತ್ತದೆ:<br><br>1. ತಹಶೀಲ್ದಾರರು, ಗಂಗಾವತಿ ಇವರು ದಿನಾಂಕ:06.11.2020 ರಂದು ಆದೇಶ ಹೊರಡಿಸಿ. ಚಿರತೆಯನ್ನು ಸೆರೆಹಿಡಿಯುವವರೆಗೆ ಶ್ರೀ ಆದಿಶಕ್ತಿ ದುರ್ಗಾದೇವಿ ದೇವಸ್ಥಾನಕ್ಕೆ ಸಾರ್ವಜನಿಕರ ಪ್ರವೇಶವನ್ನು ನಿರ್ಬಂಧಿಸಿ, ಜಾಗರೂಕತೆಯಿಂದ ಯಾವುದೇ ಅಹಿತಕರ ಘಟನೆ ನಡೆಯದಂತೆ ನೋಡಿಕೊಳ್ಳಲು ಸೂಚಿಸಿರುತ್ತಾರೆ.<br><br>2. ಉಪ ವಿಭಾಗಾಧಿಕಾರಿಗಳು ಹಾಗೂ ಉಪ ವಿಭಾಗ ದಂಡಾಧಿಕಾರಿಗಳು, ಕೊಪ್ಪಳ ಇವರು ದಿನಾಂಕ:10.11.2020 ರಂದು ಮತ್ತು 24.11.2020 ರಂದು ಆದೇಶ ಹೊರಡಿಸಿ, ಸಾಣಾಪುರಕೆರೆ, ಪಂಪಾ ಸರೋವರ, ದುರ್ಗಾದೇವಿ ದೇವಸ್ಥಾನ, ತಿರುಮಲಾಪುರ, ಹನುಮನಹಳ್ಳಿ ಹಾಗೂ ಆನೆಗುಂದಿ ಸುತ್ತಮುತ್ತಲಿನ ಪ್ರದೇಶ ಮತ್ತು ಅಂಜನಾದ್ರಿ ಬೆಟ್ಟ ಹಾಗೂ ಸುತ್ತಮುತ್ತಲಿನ ಪ್ರದೇಶಗಳಲ್ಲಿ ನಿಷೇಧಾಜ್ಞೆ ಮತ್ತು ಪ್ರವಾಸಿಗರು, ಸಾರ್ವಜನಿಕರ ಪ್ರವೇಶವನ್ನು ನಿರ್ಬಂಧಿಸಿ ಆದೇಶಿಸಿರುತ್ತಾರೆ.<br><br>3. ಉಪ ವಲಯ ಅರಣ್ಯಾಧಿಕಾರಿ ಹಾಗೂ ಅರಣ್ಯ ರಕ್ಷಕರನ್ನೊಳಗೊಂಡ ತಂಡಗಳನ್ನು ರಚಿಸಿ, ಆನೆಗುಂದಿ, ಚಿಕ್ಕರಾಂಪುರ, ಹನುಮನಹಳ್ಳಿ, ಸಾಣಾಪುರ ಹಾಗೂ ಜಂಗ್ಲಿ (ರಂಗಾಪುರ) ಗ್ರಾಮಗಳಲ್ಲಿ ರಾತ್ರಿ ಮತ್ತು ಹಗಲು ಗಸ್ತುಗಳನ್ನು ನಿರ್ವಹಿಸಲು ನಿಯೋಜಿಸಲಾಗಿರುತ್ತದೆ.<br><br>4. ಮಾನ್ಯ ಶಾಸಕರು ಗಂಗಾವತಿ ವಿಧಾನಸಭಾ ಕ್ಷೇತ್ರ ಮತ್ತು ಕೊಪ್ಪಳ ಜಿಲ್ಲಾಧಿಕಾರಿಯವರೊಂದಿಗೆ ಸಾರ್ವಜನಿಕರ ಸಭೆಯನ್ನು ನಡೆಸಿ ಮಾಹಿತಿಯನ್ನು ನೀಡಲಾಗಿರುತ್ತದೆ.<br><br>ಮೇಲಿನ ಕಾರ್ಯಚರಣೆಗಳಿಂದ ಒಟ್ಟು 04 ಚಿರತೆಗಳನ್ನು ಸೆರೆ ಹಿಡಿಯಲಾಗಿದ್ದು, ಸೆರೆ ಸಿಕ್ಕ ಚಿರತೆಗಳ ವೈದ್ಯಕೀಯ ಚಿಕಿತ್ಸೆ ನಡೆಸಿ ಮುಂದಿನ ಆರೈಕೆ ಅವಶ್ಯವಿರುವ ಚಿರತೆಗಳನ್ನು ಸಮೀಪದ ಶ್ರೀ ಅಟಲ್ ಬಿಹಾರಿ ವಾಜಪೇಯಿ ಜೂವಾಲಾಜಿಕಲ್ ಪಾರ್ಕ್. ಕಮಲಾಪುರ ಇಲ್ಲಿ ಉಳಿಸಿಕೊಂಡು, ಆರೋಗ್ಯವಾಗಿರುವ ಚಿರತೆಗಳನ್ನು ಸೂಕ್ತ ಅರಣ್ಯ ಪ್ರದೇಶಕ್ಕೆ ಬಿಡಲಾಗಿರುತ್ತದೆ. |

ಸಂಖ್ಯೆ: ಅಪಜೀ 61 ಎಫ್‌ಡಬ್ಲ್ಯುಎಲ್ 2021

(ಅರವಿಂದ ಲಿಂಬಾವಳಿ)
ಅರಣ್ಯ, ಕನ್ನಡ ಮತ್ತು ಸಂಸ್ಕೃತಿ ಸಚಿವರು

## ಕರ್ನಾಟಕ ವಿಧಾನ ಸಭೆ

**ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ** : 3039
ಸದಸ್ಯರ ಹೆಸರು : ಶ್ರೀ ಶ್ರೀನಿವಾಸ್ ಎಂ. (ಮಂಡ್ಯ)
**ಉತ್ತರಿಸಬೇಕಾದ ದಿನಾಂಕ** : 18-03-2021
**ಉತ್ತರಿಸುವ ಸಚಿವರು** : ಪ್ರಾಥಮಿಕ ಮತ್ತು ಪ್ರೌಢಶಿಕ್ಷಣ ಹಾಗೂ ಸಕಾಲ ಸಚಿವರು

| ಕ್ರ.ಸಂ | ಪ್ರಶ್ನೆ | ಉತ್ತರ |
|---|---|---|
| ಅ. | ರಾಜ್ಯದ ಸರ್ಕಾರಿ ಶಾಲೆಗಳಲ್ಲಿ ಸಿ.ಸಿ. ಟಿ.ವಿ ಕ್ಯಾಮರಾಗಳನ್ನು ಅಳವಡಿಸಲು ಆದೇಶವಿದ್ದರೂ ಅಳವಡಿಸದಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; | ಬಂದಿದೆ. |
| ಆ. | ಮಂಡ್ಯ ಜಿಲ್ಲೆಯಲ್ಲಿ ವಿಧಾನಸಭಾ ಕ್ಷೇತ್ರವಾರು ಸಿ.ಸಿ. ಟಿವಿ ಕ್ಯಾಮರಾಗಳನ್ನು ಅಳವಡಿಸಲಾಗಿರುವ ಶಾಲೆಗಳ ಮಾಹಿತಿಯನ್ನು ನೀಡುವುದು; | ಮಂಡ್ಯ ಜಿಲ್ಲೆಯಲ್ಲಿ ವಿಧಾನಸಭಾ ಕ್ಷೇತ್ರವಾರು ಸಿ.ಸಿ. ಟಿವಿ ಕ್ಯಾಮರಾಗಳನ್ನು ಅಳವಡಿಸಲಾಗಿರುವ ಶಾಲೆಗಳ ಮಾಹಿತಿ: (ಕೆಳಗಿನ ಕೋಷ್ಟಕ) ಶಾಲೆಗಳ ವಿವರಗಳನ್ನು ಅನುಬಂಧದಲ್ಲಿ ಲಗತ್ತಿಸಿದೆ. |
| ಇ. | ಸಿ.ಸಿ. ಟಿವಿ ಕ್ಯಾಮರಾಗಳನ್ನು ಅಳವಡಿಸಲು ಉಪಯೋಗಿಸಬಹುದಾದ ಅನುದಾನದ ಮಾಹಿತಿಯನ್ನು ವಿವರವಾಗಿ ನೀಡುವುದು? | ಸರ್ಕಾರದ ಆದೇಶ ಸಂಖ್ಯೆ: ಇಡಿ113ಯೋಯೋಕ2018 ದಿನಾಂಕ: 03.08.2018 ಮತ್ತು 07.11.2018 ರಲ್ಲಿ ಲೆಕ್ಕ ಶೀರ್ಷಿಕೆ: 2202-02-053-0-01-059 ರಡಿ ಒಟ್ಟು ರೂ., 500.00 ಲಕ್ಷಗಳನ್ನು ನಿಗದಿಗೊಳಿಸಲಾಗಿರುತ್ತದೆ. ಆದರೆ ಸದರಿ ಅನುದಾನವನ್ನು ಸರ್ಕಾರದ ಆದೇಶ ಸಂಖ್ಯೆ: ಇಡಿ 16 ಯೋಯೋಕ 2019 ಬೆಂಗಳೂರು, ದಿನಾಂಕ: 30.01.2019 ರಲ್ಲಿ ಬಯೋಮೆಟ್ರಿಕ್ ಸಾಧನ ಖರೀದಿಗೆ ಮರು ನಿಗದಿಗೊಳಿಸಲಾಗಿರುತ್ತದೆ. ಹಾಗೂ ಎಸ್.ಎಸ್.ಎಲ್.ಸಿ ಪರೀಕ್ಷಾ ಕೇಂದ್ರಗಳಲ್ಲಿ ಶಾಲೆಯಲ್ಲಿನ ಲಭ್ಯವಿರುವ ಸಂಚಿತ ನಿಧಿಯಿಂದ ಸಿ.ಸಿ.ಕ್ಯಾಮರಾಗಳನ್ನು ಅಳವಡಿಸಿಕೊಳ್ಳಲು ಕ್ರಮವಹಿಸಲಾಗಿರುತ್ತದೆ. ಅದರಂತೆ ಶಾಲಾಹಂತಲ್ಲಿನ ಸಂಚಿತ ನಿಧಿಯಿಂದ ಸಿ.ಸಿ ಕ್ಯಾಮರಾಗಳನ್ನು ಅಳವಡಿಸಲಾಗಿರುತ್ತದೆ. |

| **ವಿಧಾನಸಭಾ ಕ್ಷೇತ್ರದ ಹೆಸರು** | **ಸಿ.ಸಿ ಟಿವಿ ಕ್ಯಾಮರಾಗಳನ್ನು ಅಳವಡಿಸಲಾಗಿರುವ ಶಾಲೆಗಳ ಸಂಖ್ಯೆ** |
|---|---|
| ಮಂಡ್ಯ | 20 |
| ಮದ್ದೂರು | 16 |
| ಮಳವಳ್ಳಿ | 12 |
| ಕೆ.ಆರ್.ಪೇಟೆ | 09 |
| ಮೇಲುಕೋಟೆ | 08 |
| ಶ್ರೀರಂಗಪಟ್ಟಣ | 07 |
| ನಾಗಮಂಗಲ | 10 |
| **ಒಟ್ಟು** | **82** |

**ಸಂಖ್ಯೆ**: ಇಪಿ 14 ಪಿಎಂಎ 2021

(ಎಸ್. ಸುರೇಶ್‌ಕುಮಾರ್)
ಪ್ರಾಥಮಿಕ ಮತ್ತು ಪ್ರೌಢಶಿಕ್ಷಣ
ಹಾಗೂ ಸಕಾಲ ಸಚಿವರು

| ಕರ್ನಾಟಕ ವಿಧಾನಸಭೆ | |
|---|---|
| ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ: | 2630 |
| ಸದಸ್ಯರ ಹೆಸರು: | ಶ್ರೀ ಅಮರೇಗೌಡ ಲಿಂಗನಗೌಡ ಪಾಟೀಲ್ ಬಯ್ಯಾಪುರ (ಕುಷ್ಟಗಿ) |
| ಉತ್ತರಿಸಬೇಕಾದ ದಿನಾಂಕ: | 18.03.2021 |
| ಉತ್ತರಿಸುವವರು: | ಮಾನ್ಯ ಅರಣ್ಯ, ಹಾಗೂ ಕನ್ನಡ ಮತ್ತು ಸಂಸ್ಕೃತಿ ಸಚಿವರು |

| ಕ್ರ ಸಂ | ಪ್ರಶ್ನೆ | ಉತ್ತರ |
|---|---|---|
| ಅ) | ಸೇವೆಯಲ್ಲಿರುವ ನೌಕರ ಸ್ಥಳೀಯ ವೃಂದ ಸೇರಲು ಯಾವ ದಾಖಲೆಗಳನ್ನು ನೀಡಬೇಕೆಂಬ ನಿಯಮವಿದ್ದರೂ ಸಹ ಅರಣ್ಯ ಇಲಾಖೆಯಲ್ಲಿ ಸುಳ್ಳು ದಾಖಲೆ ನೀಡಿ, ಸ್ಥಳೀಯ ವೃಂದ ಸೇರಿರುವ ಬಗ್ಗೆ ದೂರು ಬಂದಿದೆಯೇ; ದೂರು ಪ್ರಸ್ತುತ ಯಾವ ಹಂತದಲ್ಲಿದೆ; | ಹೌದು. ಸ್ಥಳೀಯ ವೃಂದ ಸೇರಿರುವ ಬಗ್ಗೆ ದೂರುಗಳು ಸ್ವೀಕೃತವಾಗಿದ್ದು, ಇವುಗಳು ಪರಿಶೀಲನಾ ಹಂತದಲ್ಲಿರುತ್ತವೆ. |
| ಆ) | ಅರಣ್ಯ ಇಲಾಖೆಯಲ್ಲಿ ಕಲಂ-371-ಜೆ ಅಡಿಯಲ್ಲಿ ಅನುಬಂಧ-ಜೆ ಯಲ್ಲಿ ವಾಸಸ್ಥಳ ಪ್ರಮಾಣ ಪತ್ರ ನೀಡಿ ಸ್ಥಳೀಯ ವೃಂದಕ್ಕೆ ಸ್ಥಳೀಯರಲ್ಲದ ಸಹಾಯಕ ಸಂರಕ್ಷಣಾಧಿಕಾರಿಗಳು ಸೇರಿ ಮುಂಬಡ್ತಿ ಪಡೆದಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; ಹಾಗಿದ್ದಲ್ಲಿ, ಅಂತಹ ಅಧಿಕಾರಿಗಳ ವಿರುದ್ಧ ಸರ್ಕಾರ ಕೈಗೊಂಡ ಕ್ರಮವೇನು; | ಸ್ವೀಕೃತವಾಗಿರುವ ದೂರುಗಳು ಪರಿಶೀಲನಾ ಹಂತದಲ್ಲಿರುತ್ತವೆ. ಪರಿಶೀಲನಾ ವರದಿ ಆಧಾರದ ಮೇಲೆ ನಿಯಮಾನುಸಾರ ಕ್ರಮ ಕೈಗೊಳ್ಳಲಾಗುತ್ತದೆ. |
| ಇ) | ಸುಳ್ಳು ದಾಖಲೆ ನೀಡಿ ಸರ್ಕಾರಿ ಸೇವೆಯಲ್ಲಿ ಮುಂಬಡ್ತಿ ಪಡೆದಿರುವುದು ಸರ್ಕಾರದ ಗಮನಕ್ಕಿದ್ದರೂ, ಕ್ರಮ ಕೈಗೊಳ್ಳದಿರುವುದಕ್ಕೆ ಕಾರಣಗಳೇನು? | |

ಸಂಖ್ಯೆ: ಅಪಜೀ 76 ಅಪಸೇ 2021 (ಇ)

(ಅರವಿಂದ ಲಿಂಬಾವಳಿ)

ಅರಣ್ಯ, ಹಾಗೂ ಕನ್ನಡ ಮತ್ತು ಸಂಸ್ಕೃತಿ ಸಚಿವರು

| | |
|---|---|
| ಹಾಗಿದ್ದಲ್ಲಿ ಮುಂಬಡ್ತಿ ನಿಯಮ ಬಾಹಿರವಾಗಿದ್ದರೆ ಈ ಸಂಬಂಧದಲ್ಲಿ ಸರ್ಕಾರವು ಕೈಗೊಂಡ ಕ್ರಮಗಳೇನು? | ವಲಯ ಅರಣ್ಯಾಧಿಕಾರಿ ಹುದ್ದೆಗೆ ಕ.ಸಿ.ಎಸ್.ಆರ್ ನಿಯಮ-32ರಡಿ ಸ್ವತಂತ್ರ ಪ್ರಭಾರದ ಮೇಲೆ ಸ್ಥಳ ನಿಯುಕ್ತಗೊಳಿಸಲಾಗಿರುವುದರಿಂದ ಈ ಕ್ರಮವು ನಿಯಮಬಾಹಿರವಾಗಿರುವುದಿಲ್ಲ. ಹೀಗಾಗಿ ಸರ್ಕಾರವು ಯಾವುದೇ ಕ್ರಮ ತೆಗೆದುಕೊಳ್ಳುವ ಪ್ರಮೇಯ ಉದ್ಭವಿಸುವುದಿಲ್ಲ. |

ಕಡತ ಸಂಖ್ಯೆ: ಅಪಜೀ 77 ಅಪಸೇ 2021 (ಇ)

(ಅರವಿಂದ ಲಿಂಬಾವಳಿ)

ಅರಣ್ಯ ಹಾಗೂ ಕನ್ನಡ ಮತ್ತು ಸಂಸ್ಕೃತಿ ಸಚಿವರು

# ಕರ್ನಾಟಕ ವಿಧಾನಸಭೆ

| | |
|---|---|
| ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ: | 2040 |
| ಸದಸ್ಯರ ಹೆಸರು : | ಶ್ರೀ ಐಹೊಳೆ ಡಿ. ಮಹಾಲಿಂಗಪ್ಪ (ರಾಯಭಾಗ) |
| ಉತ್ತರಿಸಬೇಕಾದ ದಿನಾಂಕ : | 18.03.2021 |
| ಉತ್ತರಿಸುವವರು : | ಮಾನ್ಯ ಅರಣ್ಯ ಹಾಗೂ ಕನ್ನಡ ಮತ್ತು ಸಂಸ್ಕೃತಿ ಸಚಿವರು |

| ಕ್ರ.ಸಂ | ಪ್ರಶ್ನೆ | ಉತ್ತರ |
|---|---|---|
| ಅ) | ರಾಜ್ಯದ ಅರಣ್ಯ ಇಲಾಖೆಯಲ್ಲಿ ಸಿಬ್ಬಂದಿಗಳ ಕೊರತೆಯಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; ಬಂದಿದ್ದಲ್ಲಿ ಯಾವ ವೃಂದದ, ಹುದ್ದೆಗಳ ಕೊರತೆಯಿದೆ; (ವಿವರ ನೀಡುವುದು) | ರಾಜ್ಯದ ಅರಣ್ಯ ಇಲಾಖೆಯಲ್ಲಿ ಸಿಬ್ಬಂದಿಗಳ ಕೊರತೆಯಿದ್ದು, ವೃಂದವಾರು ಖಾಲಿ ಇರುವ ಹುದ್ದೆಗಳ ವಿವರ ಕೆಳಗಿನಂತಿದೆ. (ಕೆಳಗಿನ ಕೋಷ್ಟಕ ನೋಡಿ) |
| ಆ) | ಸುಮಾರು 3000 ಹೆಕ್ಟೇರ್ ನಷ್ಟು ಅರಣ್ಯವನ್ನು ರಕ್ಷಿಸುವ ಜವಾಬ್ದಾರಿ ಅರಣ್ಯ ರಕ್ಷಕರ ಮೇಲಿದ್ದು, ಹೆಚ್ಚುವರಿಯಾಗಿ ಅರಣ್ಯ ರಕ್ಷಕರನ್ನು ನೇಮಿಸಿ ನೈಸರ್ಗಿಕ ಸಂಪತ್ತಾದ ಅರಣ್ಯವನ್ನು ರಕ್ಷಿಸಲು ಸರ್ಕಾರವು ಕ್ರಮ ಕೈಗೊಳ್ಳುವುದೇ; | ಅರಣ್ಯ ಇಲಾಖೆಯಲ್ಲಿ ಅಂದಾಜು ಪ್ರತಿ 500 ರಿಂದ 1500 ಹೆಕ್ಟೇರ್ ಪ್ರದೇಶಕ್ಕೆ ಒಬ್ಬ ಅರಣ್ಯ ರಕ್ಷಕರಿದ್ದು, ಹೆಚ್ಚುವರಿ ಅರಣ್ಯ ರಕ್ಷಕರನ್ನು ನೇಮಿಸುವ ಪ್ರಸ್ತಾವನೆ ಇರುವುದಿಲ್ಲ. ಖಾಲಿ ಇರುವ ಹುದ್ದೆಗಳನ್ನು ನಿಯತಕಾಲಿಕವಾಗಿ ಭರ್ತಿ ಮಾಡಿ ನೈಸರ್ಗಿಕ ಸಂಪತ್ತಾದ ಅರಣ್ಯವನ್ನು ಪರಿಣಾಮಕಾರಿಯಾಗಿ ರಕ್ಷಿಸಲು ಕ್ರಮ ಕೈಗೊಳ್ಳಲಾಗುವುದು. |
| ಇ) | ಕೊರತೆಯಿರುವ ಕೆಳಹಂತದ ಅರಣ್ಯ ರಕ್ಷಕ ಮತ್ತಿತರ ಹುದ್ದೆಗಳನ್ನು ಭರ್ತಿ ಮಾಡುವ ಪ್ರಸ್ತಾವನೆ ಸರ್ಕಾರದ ಮುಂದಿದೆಯೇ; ಹಾಗಿದ್ದಲ್ಲಿ, ಯಾವ ಕಾಲಮಿತಿಯಲ್ಲಿ ಎಷ್ಟು ಹುದ್ದೆಗಳನ್ನು ಭರ್ತಿ ಮಾಡಲು ಕ್ರಮ ಕೈಗೊಳ್ಳಲಾಗುವುದು; | ಅರಣ್ಯ ರಕ್ಷಕ ಹುದ್ದೆಗಳನ್ನು ನಿಯತಕಾಲಿಕವಾಗಿ ಮುಂಬಡ್ತಿ ಹಾಗೂ ನೇರ ನೇಮಕಾತಿ ಮೂಲಕ ಭರ್ತಿ ಮಾಡಲಾಗುತ್ತಿದೆ. ಪ್ರಸ್ತುತ 02.03.2020 ರಂದು 339 ಅರಣ್ಯ ರಕ್ಷಕ ಹುದ್ದೆಗಳ ನೇರ ನೇಮಕಾತಿಗಾಗಿ ಅಧಿಸೂಚನೆಯನ್ನು ಹೊರಡಿಸಲಾಗಿದ್ದು, ನೇಮಕಾತಿ ಪ್ರಕ್ರಿಯೆ ಚಾಲ್ತಿಯಲ್ಲಿ ಇರುತ್ತದೆ. |
| ಈ) | ಅರಣ್ಯ ಪ್ರದೇಶ ರಕ್ಷಿಸುವಲ್ಲಿ ಸರ್ಕಾರವು ಕೈಗೊಂಡ ಕ್ರಮಗಳಾವುವು? | ಅನುಬಂಧ-1ರಲ್ಲಿ ಒದಗಿಸಿದೆ. |

| ಕ್ರ.ಸಂ | ವೃಂದ | ಖಾಲಿ ಇರುವ ಹುದ್ದೆ |
|---|---|---|
| 1 | ಗ್ರೂಪ್-ಎ | 135 |
| 2 | ಗ್ರೂಪ್-ಬಿ | 97 |
| 3 | ಗ್ರೂಪ್-ಸಿ | 2410 |
| 4 | ಗ್ರೂಪ್-ಡಿ | 1134 |
| | ಒಟ್ಟು | 3776 |

ಸಂಖ್ಯೆ: ಅಪಜೀ 68 ಅಆಸೇ 2021

(ಅರವಿಂದ ಲಿಂಬಾವಳಿ)
ಅರಣ್ಯ ಹಾಗೂ ಕನ್ನಡ ಮತ್ತು ಸಂಸ್ಕೃತಿ ಸಚಿವರು

ಮಾನ್ಯ ವಿಧಾನಸಭೆ ಸದಸ್ಯರಾದ ಶ್ರೀ ಐಹೊಳೆ ಡಿ. ಮಹಾಲಿಂಗಪ್ಪ (ರಾಯಭಾಗ) ರವರ ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ 2040 ಕ್ಕೆ ಅನುಬಂಧ-1.

ಅರಣ್ಯ ಪ್ರದೇಶ ರಕ್ಷಿಸುವಲ್ಲಿ ಅರಣ್ಯ ಇಲಾಖೆಯಲ್ಲಿ ಈ ಕೆಳಗಿನಂತೆ ಕ್ರಮ ಕೈಗೊಳ್ಳಲಾಗುತ್ತಿದೆ.

1. ರಾಜ್ಯದ ಎಲ್ಲಾ ಅರಣ್ಯ ಪ್ರದೇಶಗಳನ್ನು ಸಂರಕ್ಷಿಸಲು ಈ ಅರಣ್ಯ ಪ್ರದೇಶಗಳನ್ನು ಸ್ಥಳೀಯ ಮಟ್ಟದಲ್ಲಿ ಗಸ್ತು, ಶಾಖೆ, ವಲಯ, ಉಪ ವಿಭಾಗ, ವಿಭಾಗ, ವೃತ್ತಗಳಲ್ಲಿ ವಿಭಜಿಸಿ ಪ್ರತಿಘಟಕದ ಉಸ್ತುವಾರಿಯನ್ನು ಸಂಬಂಧಿಸಿದ ಅರಣ್ಯ ರಕ್ಷಕ ಹಾಗೂ ವೀಕ್ಷಕರು, ಉಪ ವಲಯ ಅರಣ್ಯಾಧಿಕಾರಿಗಳು-ಕಂ-ಮೋಜಣಿದಾರರು, ವಲಯ ಅರಣ್ಯಾಧಿಕಾರಿಗಳು, ಸಹಾಯಕ ಅರಣ್ಯ ಸಂರಕ್ಷಣಾಧಿಕಾರಿಗಳು, ಉಪ ಅರಣ್ಯ ಸಂರಕ್ಷಣಾಧಿಕಾರಿಗಳು, ಅರಣ್ಯ ಸಂರಕ್ಷಣಾಧಿಕಾರಿ/ಮುಖ್ಯ ಅರಣ್ಯ ಸಂರಕ್ಷಣಾಧಿಕಾರಿಗಳಿಗೆ ಪ್ರತ್ಯೇಕವಾಗಿ ನಿಗಧಿಪಡಿಸಲಾಗಿರುತ್ತದೆ.

2. ಕ್ಷೇತ್ರ ಮಟ್ಟದ ಸಿಬ್ಬಂದಿಗಳು ತಮಗೆ ನಿಗಧಿಪಡಿಸಿದ ಅರಣ್ಯ ಪ್ರದೇಶದಲ್ಲಿ ಗಸ್ತು ಮಾಡುತ್ತಾರೆ ಹಾಗೂ ಅರಣ್ಯ ಅಪರಾಧ ಪ್ರಕರಣಗಳು ಕಂಡುಬಂದಲ್ಲಿ ಸಂಬಂಧಿತರ ವಿರುದ್ಧ ಕರ್ನಾಟಕ ಅರಣ್ಯ ಕಾಯ್ದೆ 1963 ನಿಯಮಾವಳಿ, 1969 ಹಾಗೂ ವನ್ಯಜೀವಿ ಕಾಯ್ದೆ, 1972 ಪ್ರಕಾರ ಕಾನೂನಿನ ಕ್ರಮ ಕೈಗೊಳಲಾಗುತ್ತದೆ. ಅದಲ್ಲದೆ ಸದರಿಯವರು ಅರಣ್ಯ ಸಂರಕ್ಷಣೆ ಕಾಯ್ದೆ, 1980 ಹಾಗೂ ಕರ್ನಾಟಕ ವೃಕ್ಷ ಸಂರಕ್ಷಣೆ ಕಾಯ್ದೆ, 1976 ಉಲ್ಲಂಘನೆ ಆಗದಂತೆ ನಿಗಾವಹಿಸುತ್ತಾರೆ.

3. ವನ್ಯಜೀವಿ ಪ್ರದೇಶಗಳ ಹಾಗೂ ಇತರೆ ಸೂಕ್ಷ್ಮ ಅರಣ್ಯ ಪ್ರದೇಶಗಳ ರಕ್ಷಣೆಗಾಗಿ Anti-Poaching Camps ಕಾರ್ಯ ನಿರ್ವಹಿಸುತ್ತಿವೆ.

4. ಅರಣ್ಯ ಪ್ರದೇಶಗಳನ್ನು ಅತಿಕ್ರಮಣದಿಂದ ರಕ್ಷಿಸಲು ಅವುಗಳ ಗಡಿಗಳನ್ನು ಕಾಲಕಾಲಕ್ಕೆ ಗುರುತಿಸಿ ಗಡಿಕಲ್ಲನ್ನು/ಕಂಬಗಳನ್ನು ನೆಡುವ ಕಾರ್ಯಕ್ರಮಗಳನ್ನು ನಿರ್ವಹಿಸಲಾಗುತ್ತದೆ.

5. ಬೇಸಿಗೆ ಕಾಲದಲ್ಲಿ ಅರಣ್ಯ ಪ್ರದೇಶಗಳಲ್ಲಿ ಬೆಂಕಿ ನಿಯಂತ್ರಿಸಲು ಬೆಂಕಿ ರೇಖೆಗಳನ್ನು ರಚಿಸುವುದು. ಈಗಾಗಲೇ ಇರುವ ರೇಖೆಗಳನ್ನು ನಿರ್ವಹಿಸುವುದು. ಅದಲ್ಲದೇ ಬೇಸಿಗೆ ಕಾಲದಲ್ಲಿ ಬೆಂಕಿ ರಕ್ಷಣೆ ಶಿಬಿರಗಳನ್ನು ಸ್ಥಾಪಿಸಿ ಅರಣ್ಯ ಪ್ರದೇಶಗಳ ರಕ್ಷಣಾ ಕಾರ್ಯಗಳನ್ನು ಕೈಗೊಳ್ಳಲಾಗುತ್ತದೆ.

6. ಅರಣ್ಯ ಪ್ರದೇಶವನ್ನು ಪರಿಣಾಮಕಾರಿಯಾಗಿ ರಕ್ಷಿಸಲು ಮುಂಚೂಣಿ ಕಾರ್ಯಪಡೆಯ ಖಾಲಿ ಇರುವ ಹುದ್ದೆಗಳನ್ನು ತುಂಬಲು ಕಾಲ ಕಾಲಕ್ಕೆ ಸಿಬ್ಬಂದಿ ನೇಮಕಾತಿ ಕಾರ್ಯ ಕೈಗೊಳ್ಳಲಾಗುತ್ತಿದೆ.

7. ಕ್ಷೇತ್ರ ಮಟ್ಟದ ಸಿಬ್ಬಂದಿಗಳಿಗೆ ಅರಣ್ಯ ಸಂರಕ್ಷಣೆಗಾಗಿ ಅವಶ್ಯವಿರುವ ಸವಲತ್ತುಗಳನ್ನು (ವಾಹನಗಳು, ವಾಕಿಟಾಕಿಗಳು, ಆಯುಧಗಳು ಮುಂತಾದವುಗಳು) ಒದಗಿಸಲಾಗುತ್ತಿದೆ.

## ಕರ್ನಾಟಕ ವಿಧಾನ ಸಭೆ

| | |
|---|---|
| ಚುಕ್ಕೆ ಗುರುತ್ತಿಲ್ಲದ ಪ್ರಶ್ನೆ ಸಂಖ್ಯೆ | 2783 |
| ಮಾನ್ಯ ಸದಸ್ಯರ ಹೆಸರು | ಶ್ರೀ ಅವಿನಾಶ್ ಉಮೇಶ್ ಜಾಧವ್ ಡಾ॥ (ಚಿಂಚೋಳಿ) |
| ಉತ್ತರಿಸಬೇಕಾದ ದಿನಾಂಕ | 18.03.2021 |
| ಉತ್ತರಿಸುವ ಸಚಿವರು | ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಹಾಗೂ ವೈದ್ಯಕೀಯ ಶಿಕ್ಷಣ ಇಲಾಖೆ ಸಚಿವರು |

| ಕ್ರ.ಸಂ | ಪ್ರಶ್ನೆ | ಉತ್ತರ |
|---|---|---|
| ಅ) | ಕಲಬುರಗಿ ಜಿಲ್ಲೆಯ ಚಿಂಚೋಳಿ ಮತಕ್ಷೇತ್ರ ವ್ಯಾಪ್ತಿಯಲ್ಲಿ ಎಷ್ಟು ಪ್ರಾಥಮಿಕ ಹಾಗೂ ತಾಲ್ಲೂಕು ಆಸ್ಪತ್ರೆಗಳಿವೆ. | ಕಲಬುರಗಿ ಜಿಲ್ಲೆಯ ಚಿಂಚೋಳಿ ಮತಕ್ಷೇತ್ರ ವ್ಯಾಪ್ತಿಯಲ್ಲಿ 9 ಪ್ರಾಥಮಿಕ ಆರೋಗ್ಯ ಕೇಂದ್ರಗಳು ಹಾಗೂ 1 ತಾಲ್ಲೂಕು ಆಸ್ಪತ್ರೆ ಕಾರ್ಯನಿರ್ವಹಿಸುತ್ತಿವೆ. |
| ಆ) | ಸದರಿ ಆಸ್ಪತ್ರೆಗಳಿಗೆ ಮಂಜೂರಾದ ಹುದ್ದೆಗಳ ಸಂಖ್ಯೆ ಮತ್ತು ಖಾಲಿಯಿರುವ ಹುದ್ದೆಗಳ ಸಂಖ್ಯೆ ಎಷ್ಟು? | ಸದರಿ ಆಸ್ಪತ್ರೆಗಳಿಗೆ ಮಂಜೂರಾದ ಹುದ್ದೆಗಳ ಸಂಖ್ಯೆ ಮತ್ತು ಖಾಲಿಯಿರುವ ಹುದ್ದೆಗಳ ಸಂಖ್ಯೆ ಈ ಕೆಳಕಂಡಂತಿದೆ (see table below) |
| ಇ) | ಖಾಲಿ ಹುದ್ದೆಗಳನ್ನು ಭರ್ತಿ ಮಾಡಲು ಸರ್ಕಾರ ಕೈಗೊಂಡಿರುವ ಕ್ರಮಗಳೇನು? (ಸಂಪೂರ್ಣ ಮಾಹಿತಿ ಒದಗಿಸುವುದು) | ಖಾಲಿ ಇರುವ ಹುದ್ದೆಗಳನ್ನು ಭರ್ತಿ ಮಾಡಲು ತೆಗೆದುಕೊಂಡ ಕ್ರಮದ ಬಗ್ಗೆ ಅನುಬಂಧದಲ್ಲಿ ನೀಡಲಾಗಿದೆ |

| ವೃಂದ | ಮಂಜೂರು | ಖಾಲಿ |
|---|---|---|
| ಗ್ರೂಪ್ "ಎ" | 36 | 10 |
| ಗ್ರೂಪ್ "ಬಿ" | 01 | 00 |
| ಗ್ರೂಪ್ "ಸಿ" | 207 | 62 |
| ಗ್ರೂಪ್ "ಡಿ" | 76 | 33 |

ಸಂಖ್ಯೆ:ಆಕುಕ 43 ಎಸ್‌ಎಂಎಂ 2021

(ಡಾ॥ಕೆ.ಸುಧಾಕರ್)
ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಹಾಗೂ
ವೈದ್ಯಕೀಯ ಶಿಕ್ಷಣ ಸಚಿವರು

## ಕರ್ನಾಟಕ ವಿಧಾನ ಸಭೆ

| | | |
|---|---|---|
| 1. | ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ | 2613 |
| 2. | ಮಾನ್ಯ ಸದಸ್ಯರ ಹೆಸರು | ಶ್ರೀ ವೆಂಕಟರೆಡ್ಡಿ ಮುದ್ನಾಳ್ (ಯಾದಗಿರಿ) |
| 3. | ಉತ್ತರಿಸಬೇಕಾದ ದಿನಾಂಕ | 18/03/2021 |
| 4. | ಉತ್ತರಿಸುವವರು | ಮಾನ್ಯ ಕಾರ್ಮಿಕ ಸಚಿವರು |

| ಕ್ರ ಸಂ. | ಪ್ರಶ್ನೆ | ಉತ್ತರ |
|---|---|---|
| ಅ) | ಯಾದಗಿರಿ ವಿಧಾನಸಭಾ ಕ್ಷೇತ್ರ ವ್ಯಾಪ್ತಿಯಲ್ಲಿ ಕಾರ್ಮಿಕ ಇಲಾಖೆಯಿಂದ ಕೇಂದ್ರ ಮತ್ತು ರಾಜ್ಯ ಸರ್ಕಾರದಿಂದ ಕಳೆದ ಮೂರು ವರ್ಷಗಳಲ್ಲಿ ಯಾವ ಯಾವ ಯೋಜನೆಗಳಡಿಯಲ್ಲಿ ಅನುದಾನ ಬಿಡುಗಡೆ ಮಾಡಲಾಗಿದೆ; | **1. ಕರ್ನಾಟಕ ರಾಜ್ಯ ಅಸಂಘಟಿತ ಕಾರ್ಮಿಕರ ಸಾಮಾಜಿಕ ಭದ್ರತಾ ಮಂಡಳಿ:-**<br>ಕರ್ನಾಟಕ ರಾಜ್ಯ ಅಸಂಘಟಿತ ಕಾರ್ಮಿಕರ ಸಾಮಾಜಿಕ ಭದ್ರತಾ ಮಂಡಳಿಯು ಯಾವುದೇ ಕೇಂದ್ರ ಸರ್ಕಾರದ ಯೋಜನೆಗಳನ್ನು ನೇರವಾಗಿ ಅನುಷ್ಠಾನಗೊಳಿಸುತ್ತಿರುವುದಿಲ್ಲ ಹಾಗೂ ಯಾವುದೇ ಅನುದಾನ ಬಿಡುಗಡೆಯಾಗಿರುವುದಿಲ್ಲ.<br>ಮಂಡಳಿಯು ಜಾರಿಗೊಳಿಸುತ್ತಿರುವ ರಾಜ್ಯ ಸರ್ಕಾರದ ವಿವಿಧ ಯೋಜನೆಗಳಡಿ ಕಳೆದ ಮೂರು ವರ್ಷಗಳಲ್ಲಿ ಬಿಡುಗಡೆಯಾದ ಅನುದಾನದ ವಿವರವನ್ನು **ಅನುಬಂಧ-1ರಲ್ಲಿ ಲಗತ್ತಿಸಿದೆ.**<br>**2. ಕರ್ನಾಟಕ ಕಟ್ಟಡ ಮತ್ತು ಇತರೆ ನಿರ್ಮಾಣ ಕಾರ್ಮಿಕರ ಕಲ್ಯಾಣ ಮಂಡಳಿ:-**<br>ಕಟ್ಟಡ ಮತ್ತು ಇತರೆ ನಿರ್ಮಾಣ ಕಾರ್ಮಿಕರ ಕಲ್ಯಾಣ ಸುಂಕ ಕಾಯ್ದೆ 1996 ಮತ್ತು ಸುಂಕ ನಿಯಮಗಳು 1998 ರಡಿ ಸಂಗ್ರಹವಾದ ಸುಂಕದ ಮೊತ್ತದಿಂದ ಕರ್ನಾಟಕ ಕಟ್ಟಡ ಮತ್ತು ಇತರೆ ನಿರ್ಮಾಣ ಕಾರ್ಮಿಕರ ಕಲ್ಯಾಣ ಮಂಡಳಿಯು ನೋಂದಾಯಿತ ಕಟ್ಟಡ ಕಾರ್ಮಿಕರಿಗೆ ವಿವಿಧ ಯೋಜನೆಗಳನ್ನು ಜಾರಿ ಮಾಡಲಾಗುತ್ತಿದೆ.<br>**3. ಕರ್ನಾಟಕ ಕಾರ್ಮಿಕ ಕಲ್ಯಾಣ ಮಂಡಳಿ:-**<br>ಕರ್ನಾಟಕ ಕಾರ್ಮಿಕ ಕಲ್ಯಾಣ ಮಂಡಳಿಗೆ ಜಿಲ್ಲಾವಾರು, ತಾಲ್ಲೂಕುವಾರು ರಾಜ್ಯ ಸರ್ಕಾರದಿಂದ ಯಾವುದೇ ಅನುದಾನ ಬಿಡುಗಡೆಯಾಗಿರುವುದಿಲ್ಲ. ಕಾರ್ಮಿಕ ಕಲ್ಯಾಣ ನಿಧಿಗೆ ಸಂಘಟಿತ ಕಾರ್ಮಿಕರು ವಂತಿಗೆ ಪಾವತಿಸುತ್ತಾರೆ. |
| ಆ) | ಇಲ್ಲಿಯವರೆಗೆ ಎಷ್ಟು ಕಾರ್ಮಿಕರು ಆ ಯೋಜನೆಗಳಿಗೆ ಒಳಪಟ್ಟಿರುತ್ತಾರೆ? (ಪೂರ್ಣ ವಿವರ ನೀಡುವುದು) | **1. ಕರ್ನಾಟಕ ರಾಜ್ಯ ಅಸಂಘಟಿತ ಕಾರ್ಮಿಕರ ಸಾಮಾಜಿಕ ಭದ್ರತಾ ಮಂಡಳಿ:-**<br>ಸರ್ಕಾರದಿಂದ ಮಂಡಳಿಗೆ ಬಿಡುಗಡೆಯಾದ ಅನುದಾನದಿಂದ ರಾಜ್ಯಾದ್ಯಂತ ಅಸಂಘಟಿತ ವಲಯದ ಕೆಲವು ವರ್ಗಗಳ ಕಾರ್ಮಿಕರಿಗೆ ಸಾಮಾಜಿಕ ಭದ್ರತಾ ಸೌಲಭ್ಯವನ್ನು ಒದಗಿಸಲಾಗಿದೆ. ಅದರಲ್ಲಿ, ಯಾದಗಿರಿ ಜಿಲ್ಲೆಗೆ ಸಂಬಂಧಿಸಿದಂತೆ, ವಿವಿಧ ಯೋಜನೆಗಳಿಗೆ ಒಳಪಟ್ಟ |

ಅಸಂಘಟಿತ ಕಾರ್ಮಿಕರ ಮಾಹಿತಿ ಈ ಕೆಳಕಂಡಂತಿದೆ:

1. ಕೇಂದ್ರ ಸರ್ಕಾರದ ಪ್ರಧಾನ ಮಂತ್ರಿ ಶ್ರಮಯೋಗಿ ಮಾನ್ ಧನ್ ಮಾಸಿಕ ಪಿಂಚಣಿ ಯೋಜನೆಯಡಿ 2445 ಅಸಂಘಟಿತ ಕಾರ್ಮಿಕರು ನೋಂದಣಿಯಾಗಿರುತ್ತಾರೆ.
2. ಅಂಬೇಡ್ಕರ್ ಕಾರ್ಮಿಕ ಸಹಾಯಹಸ್ತ ಯೋಜನೆಯಡಿ 11 ವರ್ಗಗಳಾದ ಹಮಾಲರು, ಗೃಹಕಾರ್ಮಿಕರು, ಚಿಂದಿ ಆಯುವವರು, ಟೈಲರ್‌ಗಳು, ಮೆಕ್ಯಾನಿಕ್ಸ್, ಅಗಸರು, ಅಕ್ಕಸಾಲಿಗರು, ಕಮ್ಮಾರರು, ಕುಂಬಾರರು, ಕ್ಷೌರಿಕರು ಹಾಗೂ ಭಟ್ಟಿ ಕಾರ್ಮಿಕ ವೃತ್ತಿಯ ಒಟ್ಟು 1891 ಅಸಂಘಟಿತ ಕಾರ್ಮಿಕರನ್ನು ನೋಂದಾಯಿಸಲಾಗಿದೆ.
3. ಕೋವಿಡ್-19 ಕಾರಣ ಲಾಕ್‌ಡೌನ್ ಹಿನ್ನೆಲೆಯಲ್ಲಿ ಮುಖ್ಯ ಮಂತ್ರಿಯವರ ಘೋಷಣೆಯಂತೆ ಸರ್ಕಾರದ ಪ್ರಾಮಾಣಿತ ಕಾರ್ಯವಿಧಾನ ಮಾರ್ಗಸೂಚಿಗಳನ್ವಯ ಸಂಕಷ್ಟಕ್ಕೊಳಗಾದ 1538 ಕ್ಷೌರಿಕ ಹಾಗೂ 2007 ಅಗಸ ವೃತ್ತಿಯಲ್ಲಿ ತೊಡಗಿರುವ ಅಸಂಘಟಿತ ಕಾರ್ಮಿಕರಿಗೆ ತಲಾ ರೂ.5,000/-ಗಳಂತೆ ಒಂದು ಭಾರಿಯ ಪರಿಹಾರ ಸಹಾಯಧನವನ್ನು ನೀಡಲಾಗಿದೆ.

**2. ಕರ್ನಾಟಕ ಕಟ್ಟಡ ಮತ್ತು ಇತರೆ ನಿರ್ಮಾಣ ಕಾರ್ಮಿಕರ ಕಲ್ಯಾಣ ಮಂಡಳಿ:-**

ಮಂಡಳಿ ವತಿಯಿಂದ ವಿವಿಧ ಕಲ್ಯಾಣ ಮತ್ತು ಸಾಮಾಜಿಕ ಭದ್ರತಾ ಸೌಲಭ್ಯಗಳಡಿ ಯಾದಗಿರಿ ವಿಧಾನ ಸಭಾ ಕ್ಷೇತ್ರ ವ್ಯಾಪ್ತಿಯ ನೋಂದಾಯಿತ ಫಲಾನುಭವಿಗಳಿಗೆ ಬಿಡುಗಡೆ ಮಾಡಿದ ಸಹಾಯಧನದ ವಿವರವನ್ನು **ಅನುಬಂಧ-2ರಲ್ಲಿ** ಲಗತ್ತಿಸಿದೆ.

**3. ಕರ್ನಾಟಕ ಕಾರ್ಮಿಕ ಕಲ್ಯಾಣ ಮಂಡಳಿ:-**

ಕಳೆದ 3 ವರ್ಷಗಳಲ್ಲಿ ಯಾದಗಿರಿ ಜಿಲ್ಲೆಯ 17 ಸಂಘಟಿತ ಕಾರ್ಮಿಕರಿಗೆ ವಿವಿಧ ಕಲ್ಯಾಣ ಯೋಜನೆಯಡಿಯಲ್ಲಿ ರೂ.97,000/-ಗಳ ಧನ ಸಹಾಯ ಮಂಡಳಿಯಿಂದ ನೀಡಿರುತ್ತದೆ. ವಿವರಗಳು ಕೆಳಕಂಡಂತಿದೆ.

| ಕ್ರಸ | ವರ್ಷ | ಫಲಾನುಭವಿಗಳು | ಮೊತ್ತ |
|---|---|---|---|
| 1 | 2017-18 | 3 | 15,000 |
| 2 | 2018-19 | 8 | 45,000 |
| 3 | 2019-20 | 6 | 37,000 |
| | ಒಟ್ಟು | 17 | 97,000 |



(ಅರಬೈಲ್ ಶಿವರಾಂ ಹೆಬ್ಬಾರ್)
ಕಾರ್ಮಿಕ ಸಚಿವರು

## ಅನುಬಂಧ-1

## (ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ: 2613 )

## ಕರ್ನಾಟಕ ರಾಜ್ಯ ಅಸಂಘಟಿತ ಕಾರ್ಮಿಕರ ಸಾಮಾಜಿಕ ಭದ್ರತಾ ಮಂಡಳಿಯ ಮಾಹಿತಿ

| ಯೋಜನೆ | ರಾಜ್ಯ ಸರ್ಕಾರದಿಂದ ಮಂಡಳಿಗೆ ಬಿಡುಗಡೆಯಾದ ಅನುದಾನ | | | ಯಾದಗಿರಿ ಜಿಲ್ಲೆಗೆ ಸಂಬಂಧಿಸಿದಂತೆ ಬಿಡುಗಡೆಯಾದ ಅನುದಾನ | | | ಷರಾ |
|---|---|---|---|---|---|---|---|
| | 2017-18 | 2018-19 | 2019-20 | 2017-18 | 2018-19 | 2019-20 | |
| ಕರ್ನಾಟಕ ರಾಜ್ಯ ಖಾಸಗಿ ವಾಣಿಜ್ಯ ಸಾರಿಗೆ ಕಾರ್ಮಿಕರ ಅಪಘಾತ ಪರಿಹಾರ ಯೋಜನೆ | 1750 | 1312.50 | 499.50 | - | - | - | ಸದರಿ ಯೋಜನೆಗಳಡಿ ಪ್ರತ್ಯೇಕವಾಗಿ ಜಿಲ್ಲಾವಾರು ಅನುದಾನ ಹಂಚಿಕೆ ಯಾಗಿರುವುದಿಲ್ಲ |
| ಕರ್ನಾಟಕ ರಾಜ್ಯ ಅಸಂಘಟಿತ ಕಾರ್ಮಿಕರ ಸಾಮಾಜಿಕ ಭದ್ರತಾ ಮಂಡಳಿ ಹಾಗೂ ಅಂಬೇಡ್ಕರ್ ಕಾರ್ಮಿಕ ಸಹಾಯ ಹಸ್ತ ಯೋಜನೆ | 1135 | 2216.90 | 1034.50 | - | - | - | |
| ಆಶಾದೀಪ ಯೋಜನೆ | 4000 | 324.75 | 433 | - | - | 25.00 | ಸದರಿ ಯೋಜನೆಯಡಿ 2019-20ನೇ ಸಾಲಿನಲ್ಲಿ ಸರ್ಕಾರದಿಂದ ಬಿಡುಗಡೆಯಾದ ಒಟ್ಟು ಅನುದಾನದಲ್ಲಿ ಯಾದಗಿರಿ ಜಿಲ್ಲೆಗೆ ಸಂಬಂಧಿಸಿದಂತೆ, ರೂ 25.00 ಲಕ್ಷಗಳನ್ನು ಯೋಜನೆಯ ಅನುಷ್ಠಾನಕ್ಕಾಗಿ ಆಂತರಿಕವಾಗಿ ಮರುಹಂಚಿಕೆ ಮಾಡಲಾಗಿದೆ. |

# ಅನುಬಂಧ-2

## (ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ: 2613 )

**ಯಾದಗಿರಿ ವಿಧಾನ ಸಭಾ ಕ್ಷೇತ್ರ ವ್ಯಾಪ್ತಿಯ ನೋಂದಾಯಿತ ಫಲಾನುಭವಿಗಳಿಗೆ ಬಿಡುಗಡೆ ಮಾಡಿದ ಸಹಾಯಧನದ ವಿವರ**

| ಸೌಲಭ್ಯಗಳ ವಿವರ | 2018-19 | | 2019-20 | | 2020-21 | |
|---|---|---|---|---|---|---|
| | ಸಂಖ್ಯೆ | ಮೊತ್ತ | ಸಂಖ್ಯೆ | ಮೊತ್ತ | ಸಂಖ್ಯೆ | ಮೊತ್ತ |
| ಶೈಕ್ಷಣಿಕ ಸಹಾಯಧನ | 2720 | 24150000 | 2378 | 12832000 | 677 | 3872000 |
| ಮದುವೆ ಸಹಾಯಧನ | 524 | 26200000 | 231 | 11550000 | 185 | 9250000 |
| ಹೆರಿಗೆ ಸಹಾಯಧನ | 119 | 2945000 | 66 | 1690000 | 152 | 3960000 |
| ವೈದ್ಯಕೀಯ ಸಹಾಯಧನ | 27 | 893514 | 9 | 385000 | 16 | 597000 |
| ಪಿಂಚಣಿ ಸಹಾಯಧನ | - | - | 02 | 48000 | - | - |
| ಒಟ್ಟು | 3390 | 5,41,88,514 | 2686 | 2,65,05,000 | 1030 | 1,76,79,000 |

# ಕರ್ನಾಟಕ ವಿಧಾನ ಸಭೆ

ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 2621
ಮಾನ್ಯ ಸದಸ್ಯರ ಹೆಸರು : ಶ್ರೀ ಗಣೇಶ್ ಜೆ.ಎನ್. (ಕಂಪ್ಲಿ)
ಉತ್ತರಿಸುವ ಸಚಿವರು : ಪ್ರವಾಸೋದ್ಯಮ, ಪರಿಸರ ಮತ್ತು ಜೀವಿಶಾಸ್ತ್ರ ಸಚಿವರು
ಉತ್ತರಿಸುವ ದಿನಾಂಕ : 18.03.2021

| ಕ್ರ. ಸಂ. | ಪ್ರಶ್ನೆ | ಉತ್ತರ |
|---|---|---|
| ಅ) | ಕಂಪ್ಲಿ ವಿಧಾನ ಸಭಾ ಕ್ಷೇತ್ರದ ಕಂಪ್ಲಿ ಪಟ್ಟಣದ ಕುಮಾರ ರಾಮ ದ್ವಾರ ಬಾಗಿಲು ದುರಸ್ಥಿ ಕಾಮಗಾರಿಯ ಪ್ರಸ್ತಾವನೆ ಸರ್ಕಾರದ ಮುಂದಿದೆಯೇ ; | ಹೌದು. |
| ಆ) | ಹಾಗಿದ್ದಲ್ಲಿ, ದ್ವಾರಬಾಗಿಲು ದುರಸ್ಥಿ ಕಾಮಗಾರಿಗೆ ಸರ್ಕಾರ ತೆಗೆದುಕೊಂಡ ಕ್ರಮವೇನು ; | ಪ್ರಸಕ್ತ ಸಾಲಿನಲ್ಲಿ ಇಲಾಖೆಗೆ ಅನುದಾನ ಕೊರತೆಯಿರುವುದರಿಂದ, 2021-22ನೇ ಸಾಲಿನಲ್ಲಿ ಪುರಾತತ್ವ ಸಂಗ್ರಹಾಲಯಗಳು ಮತ್ತು ಪರಂಪರೆ ಇಲಾಖೆಗೆ ಹಂಚಿಕೆಯಾಗುವ ಅನುದಾನಕ್ಕೆ ಅನುಗುಣವಾಗಿ ಕಾಮಗಾರಿಯನ್ನು ನಿಯಮಾನುಸಾರ ಪರಿಶೀಲಿಸಿ ಕ್ರಮವಹಿಸಲಾಗುವುದು. |
| ಇ) | ಯಾವ ಕಾಲಮಿತಿಯಲ್ಲಿ ಪೂರ್ಣಗೊಳಿಸಲಾಗುವುದು ? (ಪೂರ್ಣ ಮಾಹಿತಿ ನೀಡುವುದು) | |

ಕಡತ ಸಂಖ್ಯೆ : ಟಿಓಆರ್ 58 ಟಿಡಿವಿ 2021

Yogeshwar

(ಸಿ. ಪಿ. ಯೋಗೇಶ್ವರ)
ಪ್ರವಾಸೋದ್ಯಮ, ಪರಿಸರ ಮತ್ತು
ಜೀವಿಶಾಸ್ತ್ರ ಸಚಿವರು

# ಕರ್ನಾಟಕ ವಿಧಾನ ಸಭೆ

| | | |
|---|---|---|
| ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ | : | 2768 |
| ಪ್ರಶ್ನೆ ಕೇಳಿರುವ ಸದಸ್ಯರು | : | ಶ್ರೀ ತನ್ವೀರ್ ಸೇಠ್ (ನರಸಿಂಹರಾಜ) |
| ಉತ್ತರಿಸಬೇಕಾದ ಸಚಿವರು | : | ಪ್ರವಾಸೋದ್ಯಮ, ಪರಿಸರ ಮತ್ತು ಜೀವಿಶಾಸ್ತ್ರ, ಸಚಿವರು |
| ಉತ್ತರಿಸಬೇಕಾದ ದಿನಾಂಕ | : | 18-03-2021 |

*****

| ಕ್ರ. ಸಂ. | ಪ್ರಶ್ನೆ | ಉತ್ತರ |
|---|---|---|
| ಅ) | ಕಾವೇರಿ ವರ್ತುಲ ಪ್ರವಾಸೋದ್ಯಮ ಅಭಿವೃದ್ಧಿ ಪಡಿಸುವ ಹಾಗೂ ಪ್ರತ್ಯೇಕ ಮಂಡಳಿ ಸ್ಥಾಪಿಸುವ ಪ್ರಸ್ತಾವನೆ ಸರ್ಕಾರದ ಮುಂದಿದೆಯೇ; (ವಿವರ ನೀಡುವುದು) | ಪ್ರಸ್ತುತ ಮಂಡಳಿ ಸ್ಥಾಪನೆ ಬಗ್ಗೆ ಯಾವುದೇ ಪ್ರಸ್ತಾವನೆಯು ಸರ್ಕಾರದ ಮುಂದೆ ಇರುವುದಿಲ್ಲ.<br><br>ಆದರೆ, 2014-15ನೇ ಸಾಲಿನಲ್ಲಿ ಆಯವ್ಯಯ ಭಾಷಣದಲ್ಲಿ ಘೋಷಿಸಿರುವಂತೆ ಸರ್ಕಾರದ ಆದೇಶ ಸಂಖ್ಯೆ: ಪ್ರಇ/117/ಪ್ರವಾಯೋ/2014, ದಿನಾಂಕ: 25-03-2015ರಂದು ಮೈಸೂರು, ಮಂಡ್ಯ, ಚಾಮರಾಜನಗರ, ಕೊಡಗು ಜಿಲ್ಲೆಗಳನ್ನು ಹಾಗೂ ರಾಮನಗರ ಜಿಲ್ಲೆಯ ಕನಕಪುರ ತಾಲ್ಲೂಕನ್ನು ಒಳಗೊಂಡಂತೆ ಮೈಸೂರು ಸರ್ಕ್ಯೂಟ್ ಹಾಗೂ ಬ್ರ್ಯಾಂಡ್ ರಾಯಲ್ ಹೆರಿಟೇಜ್ ಸಿಟಿ ಮೈಸೂರನ್ನು ಅಭಿವೃದ್ಧಿ ಪಡಿಸಲು ಪ್ರವಾಸೋದ್ಯಮ ಸಚಿವರ ಅಧ್ಯಕ್ಷತೆಯಲ್ಲಿ "ಕಾವೇರಿ ಪ್ರವಾಸೋದ್ಯಮ ಅಭಿವೃದ್ಧಿ ಪ್ರಾಧಿಕಾರ"ವನ್ನು ರಚಿಸಲಾಗಿದೆ.<br><br>ಸದರಿ ಪ್ರಾಧಿಕಾರದ ಪ್ರಾರಂಭಿಕ ಚಟುವಟಿಕೆಗಳನ್ನು ಕೈಗೊಳ್ಳಲು ಪ್ರಾದೇಶಿಕ ಆಯುಕ್ತರು, ಮೈಸೂರು ವಿಭಾಗ, ಮೈಸೂರು ಮತ್ತು ಸದಸ್ಯ ಕಾರ್ಯದರ್ಶಿಗಳು, ಕಾವೇರಿ ಪ್ರವಾಸೋದ್ಯಮ ಅಭಿವೃದ್ಧಿ ಪ್ರಾಧಿಕಾರ, ಮೈಸೂರು ರವರಿಗೆ ರೂ.1.00 ಕೋಟಿಗಳ ಅನುದಾನವನ್ನು 2015-16ನೇ ಸಾಲಿನಲ್ಲಿ ಬಿಡುಗಡೆ ಮಾಡಲಾಗಿದೆ |
| ಆ) | 2021-22ನೇ ಸಾಲಿನ ಆಯವ್ಯಯದಲ್ಲಿ ನಿಗಧಿಪಡಿಸಲಾಗುವ ಅನುದಾನವೆಷ್ಟು? | ಪ್ರಾಧಿಕಾರದಿಂದ ಪ್ರಸ್ತಾವನೆ ಸ್ವೀಕೃತವಾದಲ್ಲಿ, ಅನುದಾನ ಲಭ್ಯತೆ ಹಾಗೂ ಅಗತ್ಯತೆ ಅನುಸಾರ ಪರಿಶೀಲಿಸಿ ಕ್ರಮ ಕೈಗೊಳ್ಳಲಾಗುವುದು. |

ಸಂಖ್ಯೆ: ಟಿಓಆರ್ 55 ಟಿಡಿವಿ 2021

(ಸಿ.ಪಿ.ಯೋಗೇಶ್ವರ)
ಪ್ರವಾಸೋದ್ಯಮ, ಪರಿಸರ ಮತ್ತು
ಜೀವಿಶಾಸ್ತ್ರ, ಸಚಿವರು

<u>ಕರ್ನಾಟಕ ವಿಧಾನ ಸಭೆ</u>

**ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ** : **2996**
**ಮಾನ್ಯ ಸದಸ್ಯರ ಹೆಸರು** : **ಶ್ರೀ ಮಂಜುನಾಥ ಹೆಚ್.ಪಿ**
**ಉತ್ತರಿಸಬೇಕಾದ ದಿನಾಂಕ** : **18.03.2021**
**ಉತ್ತರಿಸಬೇಕಾದ ಸಚಿವರು** : **ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಹಾಗೂ ವೈದ್ಯಕೀಯ ಶಿಕ್ಷಣ ಸಚಿವರು**

| ಕ್ರ. ಸಂ | ಪ್ರಶ್ನೆಗಳು | ಉತ್ತರ |
|---|---|---|
| ಅ) | ಮೈಸೂರು ಜಿಲ್ಲೆ ಹುಣಸೂರು ತಾಲ್ಲೂಕಿನ ಸಾರ್ವಜನಿಕ ಆಸ್ಪತ್ರೆಯಲ್ಲಿ ಕಾರ್ಯನಿರ್ವಹಿಸುತ್ತಿರುವ ಡಯಾಲಿಸಿಸ್ ಘಟಕಗಳ ನಿರ್ವಹಣೆ ಹಾಗೂ ತಜ್ಞವೈದ್ಯರ ಕೊರತೆಯಿಂದಾಗಿ ರೋಗಿಗಳು ಕಷ್ಟಪಡುತ್ತಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; | ಇಲ್ಲ. |
| ಆ) | ಬಂದಿದ್ದಲ್ಲಿ, ಈ ಡಯಾಲಿಸಿಸ್ ಘಟಕಗಳ ಸರಿಯಾದ ನಿರ್ವಹಣೆಗೆ ಹಾಗೂ ಘಟಕಗಳಿಗೆ ತಜ್ಞ ವೈದ್ಯರ ಭರ್ತಿಗೆ ಸರ್ಕಾರವು ಯಾವ ಕ್ರಮ ಕೈಗೊಂಡಿದೆ: (ವಿವರ ನೀಡುವುದು) | ಅನ್ವಯಿಸುವುದಿಲ್ಲ. |
| ಇ) | ಈ ಡಯಾಲಿಸಿಸ್ ಘಟಕಗಳ ನಿರ್ವಹಣೆಗೆ ಸರ್ಕಾರವು ಎಷ್ಟು ಅನುದಾನ ಮಂಜೂರು ಮಾಡಿದೆ: ಮಂಜೂರಾಗಿರುವ ಅನುದಾನಕ್ಕೆ ಕೈಗೊಂಡಿರುವ ಕ್ರಮಗಳೇನು: (ವಿವರ ನೀಡುವುದು) | ಸದರಿ ಕಾರ್ಯಕ್ರಮವು ಸಾರ್ವಜನಿಕ-ಖಾಸಗಿ ಸಹಭಾಗಿತ್ವದಡಿಯಲ್ಲಿ ಅನುಷ್ಠಾನಗೊಳಿಸಲಾಗುತ್ತಿದ್ದು, ಘಟಕವಾರು ನಿರ್ವಹಣೆಗೆ ಅನುದಾನ ಮಂಜೂರು ಮಾಡಿರುವುದಿಲ್ಲ. |
| ಈ) | ತಾಲ್ಲೂಕಿನಲ್ಲಿ ಮೂತ್ರಪಿಂಡ ರೋಗಿಗಳ ಸಂಖ್ಯೆ ಹೆಚ್ಚಾಗಿದ್ದು ಪ್ರತಿನಿತ್ಯ ಹೆಚ್ಚಾಗಿ ಬರುತ್ತಿರುವುದರಿಂದ ಮತ್ತು ಪಕ್ಕದ ತಾಲ್ಲೂಕಿನ ಜನರೂ ಬರುತ್ತಿದ್ದುದರ ಹಿನ್ನಲೆಯಲ್ಲಿ ಘಟಕಗಳ ಹೆಚ್ಚಳಕ್ಕೆ ಸರ್ಕಾರದ ನಿಲುವೇನು? | ಮೂತ್ರಪಿಂಡ ರೋಗಿಗಳ ಸಂಖ್ಯೆಗನುಗುಣವಾಗಿ ಹೆಚ್ಚುವರಿ ಡಯಾಲಿಸಿಸ್ ಯಂತ್ರವನ್ನು ಒದಗಿಸಲು ಕ್ರಮವಹಿಸಲಾಗಿದೆ. |
| ಉ) | ಹೊಸದಾಗಿ ಘಟಕಗಳನ್ನು ಮಂಜೂರು ಮಾಡಲಾಗುವುದೇ? (ವಿವರ ನೀಡುವುದು) | ಅವಶ್ಯಕತೆಗನುಗುಣವಾಗಿ ಡಯಾಲಿಸಿಸ್ ಯಂತ್ರಗಳನ್ನು ಅಳವಡಿಸಲು ಕ್ರಮವಹಿಸಲಾಗುವುದು. |

**ಸಂಖ್ಯೆ: ಆಕುಕ 23 ಎಸ್.ಟಿ.ಕ್ಯೂ 2021**

**(ಡಾ|| ಕೆ.ಸುಧಾಕರ್)**
ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಹಾಗೂ
ವೈದ್ಯಕೀಯ ಶಿಕ್ಷಣ ಸಚಿವರು

## ಕರ್ನಾಟಕ ವಿಧಾನ ಸಭೆ

**ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ** : **1568**

**ಮಾನ್ಯ ಸದಸ್ಯರ ಹೆಸರು** : **ಶ್ರೀ ಬಸವನಗೌಡ ದದ್ದಲ**

**ಉತ್ತರಿಸಬೇಕಾದ ದಿನಾಂಕ** : **18.03.2021**

**ಉತ್ತರಿಸಬೇಕಾದ ಸಚಿವರು** : **ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಹಾಗೂ ವೈದ್ಯಕೀಯ ಶಿಕ್ಷಣ ಸಚಿವರು**

| ಕ್ರ. ಸಂ | ಪ್ರಶ್ನೆಗಳು | ಉತ್ತರ |
|---|---|---|
| ಅ) | ರಾಜ್ಯದ ಆಶಾ ಕಾರ್ಯಕರ್ತೆಯರಿಗೆ ಪ್ರಸ್ತುತ ನೀಡುತ್ತಿರುವ ಸಹಾಯಧನ ಎಷ್ಟು; | ರಾಜ್ಯದಲ್ಲಿ ಆಶಾ ಕಾರ್ಯಕರ್ತೆಯರಿಗೆ ಪ್ರತಿ ಮಾಹೆ ರಾಜ್ಯ ಸರ್ಕಾರದಿಂದ 4,000/- ರೂಪಾಯಿಗಳು, ಕೋವಿಡ್-19ರ ಚಟುವಟಿಕೆಗಳಿಗೆ 1,000/- ರೂಪಾಯಿಗಳು, ರಾಷ್ಟ್ರೀಯ ಆರೋಗ್ಯ ಅಭಿಯಾನದಿಂದ 08 ಆವರ್ತಕ ಚಟುವಟಿಕೆಗಳಿಗೆ 2,000/- ರೂಪಾಯಿಗಳು ಮತ್ತು 29 ಚಟುವಟಿಕೆಗಳಿಗೆ ಕಾರ್ಯ ನಿರ್ವಹಣಾ ಪ್ರೋತ್ಸಾಹಧನವನ್ನು ನೀಡಲಾಗುತ್ತಿದೆ ವಿವರಗಳನ್ನು **ಅನುಬಂಧದಲ್ಲಿ** ನೀಡಲಾಗಿದೆ. |
| ಆ) | ಸದರಿ ಸಹಾಯಧನದಿಂದ ಆಶಾ ಕಾರ್ಯಕರ್ತೆಯರಿಗೆ ಜೀವನ ನಡೆಸಲು ಕಷ್ಟಕರವಾಗುತ್ತಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; ಬಂದಿದ್ದಲ್ಲಿ, ಸಹಾಯಧನವನ್ನು ಹೆಚ್ಚಿಗೆ ಮಾಡಲು ಸರ್ಕಾರವು ಕೈಗೊಂಡಿರುವ ಕ್ರಮಗಳೇನು; | ಆಶಾ ಕಾರ್ಯಕರ್ತೆಯರು ಸ್ವಯಂ ಪ್ರೇರಿತ ನೆಲೆಗಟ್ಟಿನಲ್ಲಿ ಕಾರ್ಯನಿರ್ವಹಿಸುತ್ತಿದ್ದು, ತುರ್ತು ಸಂದರ್ಭಗಳನ್ನು ಹೊರತುಪಡಿಸಿ ದಿನಕ್ಕೆ 2-3 ಗಂಟೆ ಕಾರ್ಯನಿರ್ವಹಿಸಲು ಅವಕಾಶ ನೀಡಲಾಗಿದೆ. ಇದು ಪೂರ್ಣಾವಧಿ ಉದ್ಯೋಗವಲ್ಲ. ಪ್ರೋತ್ಸಾಹಧನ ಹೆಚ್ಚಳಕ್ಕೆ ಸಂಬಂಧಿಸಿದಂತೆ ಪ್ರಸ್ತಾವನೆಯು ಪರಿಶೀಲನಾ ಹಂತದಲ್ಲಿದೆ. |
| ಇ) | ರಾಜ್ಯದಲ್ಲಿ ಅಂಗನವಾಡಿ ಕಾರ್ಯಕರ್ತೆಯರಿಗೆ ನೀಡಲಾಗುತ್ತಿರುವ ಸಹಾಯಧನ ಮತ್ತು ಭದ್ರತೆಯನ್ನು ಆಶಾ ಕಾರ್ಯಕರ್ತೆಯರಿಗೂ ಕೂಡ ನೀಡುವ ಪ್ರಸ್ತಾವನೆ ಸರ್ಕಾರದ ಮುಂದಿದೆಯೇ; | ಇಲ್ಲ. |
| ಈ | ಈ ಬಗ್ಗೆ ಸರ್ಕಾರವು ಯಾವ ಕ್ರಮ ಕೈಗೊಳ್ಳಲಿದೆ? (ಸಂಪೂರ್ಣ ವಿವರ ನೀಡುವುದು) | ಉದ್ಭವಿಸುವುದಿಲ್ಲ. |

**ಸಂಖ್ಯೆ: ಆಕುಕ 22 ಎಸ್.ಟಿ.ಕ್ಯೂ 2021**

**(ಡಾ|| ಕೆ.ಸುಧಾಕರ್)**
ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಹಾಗೂ
ವೈದ್ಯಕೀಯ ಶಿಕ್ಷಣ ಸಚಿವರು

ಅನುಬಂಧ-೨

## ಆಶಾ ಕಾರ್ಯಕರ್ತೆಯರಿಗೆ ನೀಡಲಾಗುವ ಪ್ರೋತ್ಸಾಹಧನ ಮತ್ತು ಚಟುವಟಿಕೆಗಳು:

### ಎ. ಆವರ್ತಕ ಮತ್ತು ನಿಯಮಿತ ಚಟುವಟಿಕೆಗಳು

| ಕ್ರ.ಸಂ | ಚಟುವಟಿಕೆ | ಪ್ರೋತ್ಸಾಹಧನದ ಮೊತ್ತ (ರೂಪಾಯಿಗಳಲ್ಲಿ) |
|---|---|---|
| 1 | ಗ್ರಾಮ ಆರೋಗ್ಯ ಮತ್ತು ಪೌಷ್ಠಿಕ ಆಹಾರ ದಿನಾಚರಣೆಯಲ್ಲಿ ಭಾಗಿಯಾದರೆ | 200 |
| 2 | ಪ್ರಾಥಮಿಕ ಆರೋಗ್ಯ ಕೇಂದ್ರದ ಮಾಸಿಕ ಸಭೆಗೆ ಹಾಜರಾದರೆ | 150 |
| 3 | ಗ್ರಾಮ ಆರೋಗ್ಯ ಮತ್ತು ನೈರ್ಮಲ್ಯ ಹಾಗೂ ಪೌಷ್ಠಿಕಾಂಶ ಸಮಿತಿ ಸಭೆಯನ್ನು ನಡೆಸಿದರೆ | 150 |
| 4 | ಗರ್ಭಿಣಿಯರ ಪಟ್ಟಿಯ ನಿರ್ವಹಣೆ | 300 |
| 5 | ಅರ್ಹದಂಪತಿಗಳ ಪಟ್ಟಿಯನ್ನು ತಯಾರಿಸುವುದು | 300 |
| 6 | ಮನೆ ಮನೆ ಸಮೀಕ್ಷೆ | 300 |
| 7 | ಗ್ರಾಮ ಆರೋಗ್ಯ ಪುಸ್ತಕದ ನಿರ್ವಹಣೆಗೆ | 300 |
| 8 | ಚುಚ್ಚುಮದ್ದು ಸೇವೆಗಳಿಗೆ ಅರ್ಹ ಮಕ್ಕಳ ಪಟ್ಟಿಯನ್ನು ತಯಾರಿಸಿದರೆ | 300 |

### ಬಿ. ಕಾರ್ಯನಿರ್ವಹಣಾ ಪ್ರೋತ್ಸಾಹಧನಗಳು

| ಕ್ರ.ಸಂ | ಚಟುವಟಿಕೆ | ಪ್ರೋತ್ಸಾಹಧನದ ಮೊತ್ತ (ರೂಪಾಯಿಗಳಲ್ಲಿ) |
|---|---|---|
| 1. | ಗರ್ಭಿಣಿ ಆರೈಕೆಗೆ | 300 |
| 2. | ಸಾಂಸ್ಥಿಕ ಹೆರಿಗೆಯನ್ನು ಉತ್ತೇಜಿಸಿದರೆ | 300 |
| 3. | ತಾಯಿ ಮರಣದ ವರದಿ | 200 |
| 4. | ಗೃಹದಾರಿತ ನವಜಾತ ಶಿಶು ಆರೈಕೆ | 250 |
| 5. | ಕಡಿಮೆ ಹುಟ್ಟುತೂಕದ ಮಕ್ಕಳ ಅನುಸರಣೆ | 50 |
| 6. | ಎಸ್.ಎನ್.ಸಿ.ಯುವಿನಿಂದ ಬಿಡುಗಡೆಯಾದ ಮಕ್ಕಳ ಅನುಸರಣೆ | 50 |
| 7. | ಮಾಕಾರ್ಯಕ್ರಮದಡಿ ಬೆಂಬಲ ಗುಂಪುಗಳ ಸಭೆಯನ್ನು ನಡೆಸಲು | 100 |
| 8. | ಅಪೌಷ್ಟಿಕತೆಯಿಂದ ಬಳಲುತ್ತಿರುವ ಮಕ್ಕಳನ್ನು ಗುರುತಿಸುವುದು ಮತ್ತು ಆರೋಗ್ಯ ಸಂಸ್ಥೆಗಳಿಗೆ ಶಿಫಾರಸು ಮಾಡುವುದು. | 150 |
| 9. | ಚುಚ್ಚುಮದ್ದು ಸೇವೆಗಳಿಗೆ ಫಲಾನುಭವಿಗಳನ್ನು ಸಂಃಟಿಸುವುದು. | 150 |
| 10. | ಮೊದಲ ವರ್ಷದ ಚುಚ್ಚುಮದ್ದು ಸೇವೆಗಳಿಗೆ | 100 |
| 11. | ಎರಡನೇ ವರ್ಷದ ಚುಚ್ಚುಮದ್ದು ಸೇವೆಗಳು | 75 |
| 12. | 5-6 ವರ್ಷದ ಮಕ್ಕಳಿಗೆ ಡಿ.ಪಿ.ಟಿ ಬೂಸ್ಟರ್ ಲಸಿಕೆಯನ್ನು ಕೊಡಿಸಿದರೆ | 50 |
| 13. | ಪಿ.ಪಿ.ಐ.ಯು.ಸಿ.ಡಿ ಯನ್ನು ಅಳವಡಿಸಿಕೊಳ್ಳಲು ಉತ್ತೇಜಿಸಿದರೆ | 150 |
| 14. | ಪುರುಷರನ್ನು ಸಂತಾನ ನಿರೋಧಚಿಕಿತ್ಸೆಗೆ ಉತ್ತೇಜಿಸಿದರೆ | 200 |
| 15. | ಸ್ತ್ರೀಯರನ್ನು ಸಂತಾನ ನಿರೋಧಚಿಕಿತ್ಸೆಗೆ ಉತ್ತೇಜಿಸಿದರೆ | 150 |
| 16. | ವೈದ್ಯಕೀಯ ಗರ್ಭಪಾತಕ್ಕೆ ಉತ್ತೇಜಿಸಿದರೆ | 100 |
| 17. | ಎರಡು ಜನನದ ನಡುವೆ ಅಂತರವನ್ನು ಖಾತ್ರಿಪಡಿಸಿದರೆ | 500 |
| 18. | ಪಿ.ಎ.ಐ.ಯು.ಸಿ.ಡಿ ಅಳವಡಿಕೆಗೆ ಪ್ರೋತ್ಸಾಹಿಸುವುದು | 150 |
| 19. | ಕ್ಷಯ ರೋಗಿಗಳಿಗೆ ಆರೈಕೆ ಬೆಂಬಲದಾರರಾಗಿ ಬಹುವಿಧ ಔಷಧಿ ಕ್ಷಯರೋಗ ಚಿಕಿತ್ಸೆ ನೀಡಿದರೆ | 5000 |

| | | |
|---|---|---|
| 20. | ಕ್ಷಯ ರೋಗಿಗಳಗೆ ಆರೈಕೆ ಬೆಂಬಲದಾರರಾಗಿ ಹೊಸ ಮತ್ತು ಹಿಂದಿನ ಆರೈಕೆ ಪ್ರಕರಣಗಳಗೆ ಚಿಕಿತ್ಸೆ ನೀಡಿದರೆ | 1500 |
| 21. | ಕ್ಷಯ ರೋಗಿಗಳಗೆ ಆರೈಕೆ ಬೆಂಬಲದಾರರಾಗಿ ಹೆಚ್-ಮಾನೋಪಲಿ ರೆಜಿಮನ್ ಪ್ರಕರಣಗಳಗೆ ಚಿಕಿತ್ಸೆ ನೀಡಿದರೆ | 1000 |
| 22. | ಕುಷ್ಠರೋಗಿಗಳಗೆ (ಎಂ.ಬಿ.ಪ್ರಕರಣಗಳು) ಚಿಕಿತ್ಸೆ ನೀಡಿದರೆ | 600 |
| 23. | ಕುಷ್ಠರೋಗಿಗಳಗೆ (ಪಿ.ಬಿ.ಪ್ರಕರಣಗಳು) ಚಿಕಿತ್ಸೆ ನೀಡಿದರೆ | 400 |
| 24. | ಕುಷ್ಟ ರೋಗಿಗಳನ್ನು ಗುರುತಿಸುವಿಕೆ | 250 |
| 25. | ಮಲೇರಿಯಾ ರೋಗಕ್ಕೆ ಚಿಕಿತ್ಸೆ | 50 |
| 26. | ಸಂಶಯಾಸ್ಪದ ಮಲೇರಿಯಾ ಪ್ರಕರಣಗಳ ಸ್ಲೈಡ್ ತಯಾರಿಸುವುದು | 150 |
| 27. | ಉಪ್ಪಿನ ಪರೀಕ್ಷೆ | 25 |
| 28. | ಹೆಚ್‌ಬಿವೈಸಿ | 250 |
| 29. | ಎನ್‌ಸಿಡಿ ಚಟುವಟಿಕೆಗಳು | 110 |

## ಕರ್ನಾಟಕ ವಿಧಾನ ಸಭೆ

1. ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 1567
2. ಮಾನ್ಯ ಸದಸ್ಯರ ಹೆಸರು : ಶ್ರೀ ಅಬ್ಬಯ್ಯ ಪ್ರಸಾದ್ (ಹುಬ್ಬಳ್ಳಿ-ಧಾರವಾಡ ಪೂರ್ವ)
3. ಉತ್ತರಿಸಬೇಕಾದ ದಿನಾಂಕ : 18/3/2021
4. ಉತ್ತರಿಸುವವರು : ಮಾನ್ಯ ಕಾರ್ಮಿಕ ಸಚಿವರು

| ಕ್ರಮ ಸಂಖ್ಯೆ | ಪ್ರಶ್ನೆ | ಉತ್ತರ |
|---|---|---|
| ಅ) | ಧಾರವಾಡ ಜಿಲ್ಲೆ ವ್ಯಾಪ್ತಿಯಲ್ಲಿರುವ ಅಸಂಘಟಿತ ಕಾರ್ಮಿಕರ ಸಂಖ್ಯೆ ಎಷ್ಟು; ಆ ಪೈಕಿ ಎಷ್ಟು ಜನರ ನೊಂದಣಿ ಮಾಡಲಾಗಿದೆ; ಅಸಂಘಟಿತ ಕಾರ್ಮಿಕರ ನೊಂದಣಿಗೆ ಇರುವ ಅರ್ಹತೆ/ಮಾನದಂಡಗಳೇನು; | ಕಾರ್ಮಿಕ ಇಲಾಖೆಯ ಅಧೀನದಲ್ಲಿ ಬರುವ ಮಂಡಳಿಗಳು ಜಾರಿಗೊಳಿಸುತ್ತಿರುವ ಯೋಜನೆಗಳ ಮಾಹಿತಿ ಈ ಕೆಳಕಂಡಂತಿದೆ:<br>**1. ಕರ್ನಾಟಕ ರಾಜ್ಯ ಅಸಂಘಟಿತ ಕಾರ್ಮಿಕರ ಸಾಮಾಜಿಕ ಭದ್ರತಾ ಮಂಡಳಿ:-** ಈ ಮಂಡಳಿಯಲ್ಲಿ ಅಸಂಘಟಿತ ಕಾರ್ಮಿಕರ ಸಂಖ್ಯೆಗೆ ಸಂಬಂಧಿಸಿದಂತೆ ಈವರೆಗೆ ಯಾವುದೇ ಸಮೀಕ್ಷೆ ನಡೆಸಿರುವುದಿಲ್ಲ. ಆದರೆ, ಕರ್ನಾಟಕ ರಾಜ್ಯ ಅಸಂಘಟಿತ ಕಾರ್ಮಿಕರ ಸಾಮಾಜಿಕ ಭದ್ರತಾ ಮಂಡಳಿಯು ಜಾರಿಗೊಳಿಸುತ್ತಿರುವ ವಿವಿಧ ಯೋಜನೆಗಳಡಿ ಫಲಾನುಭವಿಗಳಾಗಿ ನೋಂದಾಯಿತರಾದ ಕಾರ್ಮಿಕರ ಸಂಖ್ಯೆ ಲಭ್ಯವಿದ್ದು, **ಧಾರವಾಡ ಜಿಲ್ಲೆಗೆ ಸಂಬಂಧಿಸಿದ ವಿವರ ಈ ಕೆಳಕಂಡಂತಿದೆ.**<br>• **ಕರ್ನಾಟಕ ರಾಜ್ಯ ಖಾಸಗಿ ವಾಣಿಜ್ಯ ಸಾರಿಗೆ ಕಾರ್ಮಿಕರ ಅಪಘಾತ ಪರಿಹಾರ ಯೋಜನೆ:**<br>ಸಾರಿಗೆ ಇಲಾಖೆಯು ಒದಗಿಸಿರುವ ದತ್ತಾಂಶದ ಪ್ರಕಾರ ಧಾರವಾಡ ಜಿಲ್ಲೆಯಲ್ಲಿ ಊರ್ಜಿತ ಖಾಸಗಿ ವಾಣಿಜ್ಯ ಸಾರಿಗೆ ವಾಹನ ಚಾಲನ ಪರವಾನಗಿ ಹೊಂದಿರುವ 14,199 ಚಾಲಕರಿದ್ದು, ಎಲ್ಲಾ ಚಾಲಕರು ಈ ಯೋಜನೆಯಡಿ ಫಲಾನುಭವಿಗಳಾಗಿರುತ್ತಾರೆ.<br>• **ಅಂಬೇಡ್ಕರ್ ಕಾರ್ಮಿಕ ಸಹಾಯ ಹಸ್ತ ಯೋಜನೆ:**<br>ಈ ಯೋಜನೆಯಡಿ 11 ವರ್ಗದ ಹಮಾಲರು, ಗೃಹಕಾರ್ಮಿಕರು, ಚಿಂದಿ ಆಯುವವರು, ಟೈಲರ್‌ಗಳು, ಮೆಕ್ಯಾನಿಕ್ಸ್, ಅಗಸರು, ಅಕ್ಕಸಾಲಿಗರು, ಕಮ್ಮಾರರು, ಕುಂಬಾರರು, ಕ್ಷೌರಿಕರು ಹಾಗೂ ಭಟ್ಟಿ ಕಾರ್ಮಿಕ ವೃತ್ತಿಯ 2662 ಅಸಂಘಟಿತ ಕಾರ್ಮಿಕರನ್ನು ನೋಂದಾಯಿಸಿ ಸ್ಮಾರ್ಟ್ ಕಾರ್ಡ್‌ಗಳನ್ನು ವಿತರಿಸಲಾಗಿದೆ.<br>• **ಅಸಂಘಟಿತ ಕಾರ್ಮಿಕರ ನೋಂದಣಿಗೆ ಮಾನದಂಡಗಳು:**<br>ಕರ್ನಾಟಕ ರಾಜ್ಯ ಅಸಂಘಟಿತ ಕಾರ್ಮಿಕರ ಸಾಮಾಜಿಕ ಭದ್ರತಾ ಮಂಡಳಿಯು ಜಾರಿಗೊಳಿಸುತ್ತಿರುವ **ಯೋಜನೆಯಡಿ ನೋಂದಣಿಯಾಗಲು ಇರುವ ಮಾನದಂಡಗಳು ಈ ಕೆಳಕಂಡಂತಿದೆ:** |

| | | (1)ಕರ್ನಾಟಕ ರಾಜ್ಯ ಖಾಸಗಿ ವಾಣಿಜ್ಯ ಸಾರಿಗೆ ಕಾರ್ಮಿಕರ ಅಪಘಾತ ಪರಿಹಾರ ಯೋಜನೆ:-<br>ಮಾನದಂಡ:-<br>• ಈ ಯೋಜನೆಯು ಕರ್ನಾಟಕ ರಾಜ್ಯಕ್ಕೆ ಮಾತ್ರ ಅನ್ವಯಿಸುತ್ತದೆ.<br>• ಯೋಜನೆಯು ಖಾಸಗಿ ವಾಣಿಜ್ಯ ಸಾರಿಗೆ ಕಾರ್ಮಿಕರಾದ ಚಾಲಕರು, ನಿರ್ವಾಹಕರು ಹಾಗೂ ಕ್ಲೀನರ್‌ಗಳಿಗೆ ಅನ್ವಯಿಸುತ್ತದೆ.<br>• ವಯೋಮಿತಿ 20 ರಿಂದ 70 ವರ್ಷಗಳು.<br>• ಚಾಲಕರು, ಕರ್ನಾಟಕ ರಾಜ್ಯ ಸಾರಿಗೆ ಇಲಾಖೆಯಿಂದ ವಾಣಿಜ್ಯ ವಾಹನ ಚಲಾಯಿಸಲು ಊರ್ಜಿತ ಚಾಲನಾ ಪರವಾನಗಿಯನ್ನು ಹೊಂದಿರಬೇಕು.<br>• ನಿರ್ವಾಹಕರು/ಕ್ಲೀನರ್‌ಗಳು ಉದ್ಯೋಗದಾತರಿಂದ ಉದ್ಯೋಗ ಪ್ರಮಾಣಪತ್ರವನ್ನು ಪಡೆದು ಸಲ್ಲಿಸಬೇಕು.<br><br>• ಅಂಬೇಡ್ಕರ್ ಕಾರ್ಮಿಕ ಸಹಾಯ ಹಸ್ತ ಯೋಜನೆ:-<br>ಮಾನದಂಡ:-<br>• ಈ ಯೋಜನೆಯು ಕರ್ನಾಟಕ ರಾಜ್ಯಕ್ಕೆ ಮಾತ್ರ ಅನ್ವಯಿಸುತ್ತದೆ.<br>• ವಯೋಮಿತಿ 18 ರಿಂದ 60 ವರ್ಷಗಳು.<br>• ಅಸಂಘಟಿತ ಕಾರ್ಮಿಕನೆಂದು ಸ್ವಯಂ ಧೃಡೀಕರಣ ಪತ್ರ ಸಲ್ಲಿಸಬೇಕು.<br>ಪ್ರಸ್ತುತ ಮೇಲ್ಕಂಡ 11 ವರ್ಗಗಳ ಅಸಂಘಟಿತ ಕಾರ್ಮಿಕರಿಗೆ ಅನ್ವಯಿಸುತ್ತದೆ.<br><br>2. ಕರ್ನಾಟಕ ಕಟ್ಟಡ ಮತ್ತು ಇತರೆ ನಿರ್ಮಾಣ ಕಾರ್ಮಿಕರ ಕಲ್ಯಾಣ ಮಂಡಳಿ:<br>ಈ ಮಂಡಳಿಯಿಂದ ಧಾರವಾಡ ಜಿಲ್ಲಾ ವ್ಯಾಪ್ತಿಯಲ್ಲಿ ಅಸಂಘಟಿತ ಕಾರ್ಮಿಕರ ಕುರಿತು ಯಾವುದೇ ಸಮೀಕ್ಷೆ ನಡೆಸಿರುವುದಿಲ್ಲ. ಈ ಜಿಲ್ಲೆಯಲ್ಲಿ ಒಟ್ಟು ಅಸಂಘಟಿತ ವಲಯದಲ್ಲಿ ನೋಂದಾಯಿತ ಕಾರ್ಮಿಕರು ಶೇ.89 ಪ್ರತಿಶತ ಇರುತ್ತದೆ. ಈ ಪೈಕಿ ಧಾರವಾಡ ಜಿಲ್ಲೆ ವ್ಯಾಪ್ತಿಯಲ್ಲಿ ಕರ್ನಾಟಕ ಕಟ್ಟಡ ಮತ್ತು ಇತರೆ ನಿರ್ಮಾಣ ಕಾರ್ಮಿಕರ ಮಂಡಳಿಯಲ್ಲಿ ನೋಂದಾಯಿತ ಕಟ್ಟಡ ಕಾರ್ಮಿಕರು 92000 ಇರುತ್ತಾರೆ.<br>ಕಟ್ಟಡ ಮತ್ತು ಇತರೆ ನಿರ್ಮಾಣ ಕಾರ್ಮಿಕರು ಮಂಡಳಿಯ ಫಲಾನುಭವಿಗಳಾಗಿ ನೋಂದಣಿಯಾಗಲು ಅನುಸರಿಸಬೇಕಾದ ಮಾನದಂಡಗಳು ಈ ಕೆಳಕಂಡಂತಿದೆ. |
|---|---|---|

| | | |
|---|---|---|
| | | • **ಕಟ್ಟಡ ಮತ್ತು ಇತರೆ ನಿರ್ಮಾಣ ಕೆಲಸಗಳಿಗೆ ಸಂಬಂಧಿಸಿದ ಈ ಕೆಳಗಿನ ಯಾವುದಾದರೂ ಕೆಲಸ ನಿರ್ವಹಿಸುತ್ತಿರಬೇಕು**<br>1. ನಿರ್ಮಾಣ 2. ಮಾರ್ಪಾಡು 3. ರಿಪೇರಿ 4. ನಿರ್ವಹಣೆ ಅಥವಾ ಕಟ್ಟಡ ಕೆಡವುವಿಕೆಗೆ ಸಂಬಂಧಿಸಿದ ಕಾಮಗಾರಿ 5. ಕಟ್ಟಡಗಳು 6. ಬೀದಿಗಳು 7. ರಸ್ತೆಗಳು 8. ರೈಲ್ವೆಗಳು 9. ಟ್ರಾಮ್‌ವೇಗಳು 10. ಏರ್‌ಫೀಲ್ಡ್ಸ್ 11. ನೀರಾವರಿ ಚರಂಡಿ 12. ಏರಿ/ಕಟ್ಟೆಕಟ್ಟುವುದು ಮತ್ತು ನೌಕಾ ಕಾಮಗಾರಿಗಳು 13. ಪ್ರವಾಹ ನಿಯಂತ್ರಣ ಕಾಮಗಾರಿಗಳು (ಮಳೆ ನೀರು, ಚರಂಡಿ ಕಾಮಗಾರಿಗಳು ಸೇರಿ) 14. ವಿದ್ಯುತ್ ಉತ್ಪಾದನೆ 15. ಪ್ರಸರಣ ಮತ್ತು ವಿತರಣೆ 16. ಜಲ ಕಾಮಗಾರಿಗಳು (ನೀರು ವಿತರಣಾ ನಾಲೆಗಳು ಸೇರಿ) 17. ತೈಲ ಮತ್ತು ಅನಿಲ ಸ್ಥಾವರಗಳು 18. ವಿದ್ಯುತ್ ಮಾರ್ಗಗಳು 19. ವೈರ್‌ಲೆಸ್ 20. ರೇಡಿಯೋ 21. ದೂರದರ್ಶನ 22. ದೂರವಾಣಿ 23. ದೂರಸಂಪರ್ಕ ಮತ್ತು ಸಮುದ್ರ ಸಂವಹನಗಳಿಗೆ ಸಂಬಂಧಿಸಿದ ನಿರ್ಮಾಣ/ನವೀಕರಣ ಮತ್ತು ದುರಸ್ತಿ 24. ಅಣೆಕಟ್ಟುಗಳು 25. ನಾಲೆಗಳು 26. ಜಲಾಶಯಗಳು 27. ಜಲ ಮೂಲಗಳು 28. ಸುರಂಗಗಳು 29. ಸೇತುವೆಗಳು 30. ವಯಾಡಕ್ಟ್ಸ್ 31. ಆಕ್ವೆಡಕ್ಟ್ಸ್ 32. ಕೊಳವೆ ಮಾರ್ಗಗಳ ನಿರ್ಮಾಣ 33. ಸ್ಥಾವರಗಳು 34. ಕೂಲಿಂಗ್ ಟವರ್‌ಗಳು ಮತ್ತು ಪ್ರಸರಣ ಸ್ಥಾವರಗಳು ಹೆಚ್ಚುವರಿ ನಿರ್ಮಾಣ ಕೆಲಸಗಳು:35.ಕಲ್ಲು ಗಣಿಗಾರಿಕೆ ಕಾಯ್ದೆ 1952ರ ವ್ಯಾಪ್ತಿಗೆ ಒಳಪಡದ ರಸ್ತೆ ಮತ್ತು ಕಟ್ಟಡ ನಿರ್ಮಾಣದ ಕಲ್ಲು ಕೆಲಸ 36. ನಿರ್ಮಾಣದಲ್ಲಿ ಚಪ್ಪಡಿ/ಟೈಲ್ಸ್‌ಗಳನ್ನು ಅಳವಡಿಸುವುದು 37. ಯುಜಿಡಿ ನಿರ್ಮಾಣ ಸ್ಥಿರಿದಂತೆ ಒಳಚರಂಡಿ ಮತ್ತು ಪ್ಲಂಬಿಂಗ್ ಕೆಲಸ 38. ವೈರಿಂಗ್, ವಿತರಣೆ ಪ್ಯಾನಲ್ ಫಿಕ್ಸಿಂಗ್ ಇತ್ಯಾದಿಗಳನ್ನು ಒಳಗೊಂಡ ವಿದ್ಯುತ್ ಕೆಲಸ 39. ಕೂಲಿಂಗ್ ಮತ್ತು ಹೀಟಿಂಗ್ ಸಿಸ್ಟಂಗಳ ಸ್ಥಾಪನೆ ಮತ್ತು ಅಳವಡಿಕೆ 40. ಲಿಫ್ಟ್, ಎಕ್ಸಲೇಟರ್ ಇತ್ಯಾದಿಗಳ ಸ್ಥಾಪನೆ 41. ಸೆಕ್ಯೂರಿಟಿ ಗೇಟಗಳ ಸ್ಥಾಪನೆ 42. ಕಬ್ಬಿಣ/ಲೋಹದ ಗ್ರಿಲ್‌ಗಳು, ಕಿಟಕಿ, ಬಾಗಿಲುಗಳ ಸ್ಥಾಪನೆ 43. ನೀರಿನ ಕೊಯ್ಲು ರಚನೆಗಳ ನಿರ್ಮಾಣ 44. ಫ್ಲೋರಿಂಗ್, ಫಾಲ್ಸ್‌ಸೀಲಿಂಗ್, ವಾಲ್ ಪ್ಯಾನಲಿಂಗ್ ಮುಂತಾದವುಗಳನ್ನು ಒಳಗೊಂಡ ಒಳಾಂಗಣ ವಿನ್ಯಾಸ 45. ಕಟ್ಟಡ ನಿರ್ಮಾಣ ಸಂದರ್ಭದಲ್ಲಿ ಅಳವಡಿಸುವ ಗ್ಯಾಸ್ ಪ್ಯಾನಲ್‌ಗಳು, ಎಸಿಪಿ ಶೀಟ್‌ಗಳು, ಸ್ಪೈಡರ್ ಗ್ಲೇಜಿಂಗ್‌ಗಳು 46.ಪ್ರೀ–ಫ್ಯಾಬ್ರಿಕೇಟೆಡ್ ಕಾಂಕ್ರೀಟ್ ಮಾಡ್ಯೂಲ್ಸ್, ಕಾಂಕ್ರೀಟ್ ಬ್ರಿಕ್ಸ್, ಬ್ಲಾಕ್ಸ್, ಹಾಲೋಬ್ಲಾಕ್ಸ್, ಟೈಲ್ಸ್ ಮುಂತಾದವುಗಳ ಅಳವಡಿಕೆ 47.ಸಿಗ್ನೇಜ್, ರಸ್ತೆ ಪೀಠೋಪಕರಣಗಳು, ಬಸ್ |

| | | |
|---|---|---|
| | | ಆಶ್ರಯಗಳು/ ಸ್ಟ್ಯಾಂಡ್, ಸಿಗ್ನಲಿಂಗ್ ಸಿಸ್ಟಮ್ಸ್ ಮುಂತಾದವುಗಳ ನಿರ್ಮಾಣ 48.ರೋಟರಿಗಳ ನಿರ್ಮಾಣ ಮತ್ತು ಸ್ಥಾಪನೆ, ಕಾರಂಜಿಗಳು, ಸಾರ್ವಜನಿಕ ಉದ್ಯಾನವನ ಮತ್ತು ತೋಟಗಳಲ್ಲಿ ಈಜುಕೊಳಗಳು ಇತ್ಯಾದಿಗಳ ಅಳವಡಿಕೆ 49. ನಿರ್ಮಾಣ ಉದ್ದೇಶಗಳಿಗಾಗಿ ಭೂಮಿಯ ಕೆಲಸ, ಭೂಮಿಯ ಹರಡುವಿಕೆ, ನೆಲಸಮಗೊಳಿಸುವಿಕೆ ಮತ್ತು ಭೂಮಿಯ ಕತ್ತರಿಸುವಿಕೆ ಇತ್ಯಾದಿ ಕೆಲಸಗಳು 50. ತಾತ್ಕಾಲಿಕ ಆಶ್ರಯ ತಾಣಗಳ ನಿರ್ಮಾಣ ಮತ್ತು ಅಳವಡಿಕೆ 51. ಫಿಲಂಸೆಟ್ ಗಳ ನಿರ್ಮಾಣ ಮತ್ತು ಅಳವಡಿಕೆ. 52. ಸರ್ಕಾರದ ಅಧಿಸೂಚನೆ ಸಂಖ್ಯೆ ಕಾಇ 220 ಎಲ್ಇಟಿ 2013 ದಿನಾಂಕ 30-11-2013 ರಲ್ಲಿ Cutting Breaking and Crushing of Stoneಕೆಲಸಗಳನ್ನು ಸಹ ಕಟ್ಟಡ ಮತ್ತು ಇತರೆ ನಿರ್ಮಾಣ ಕೆಲಸಗಳೆಂದು ಪರಿಗಣಿಸಿದೆ.<br>• ವಯೋಮಿತಿ: 18 ರಿಂದ 60 ವರ್ಷದೊಳಗಿರಬೇಕು<br>• ನೋಂದಣಿ ಮಾಡುವ ಕಛೇರಿಗಳು: ಕಾರ್ಮಿಕ ಅಧಿಕಾರಿಗಳು/ಹಿರಿಯ ಕಾರ್ಮಿಕ ನಿರೀಕ್ಷಕರು/ಕಾರ್ಮಿಕ ನಿರೀಕ್ಷಕರು, ಬೆಂಗಳೂರು ಮೆಟ್ರೋ ರೈಲು ನಿಗಮ ನಿಯಮಿತದ ಮುಖ್ಯ ಅಭಿಯಂತರರು<br>• ನೋಂದಣಿಗಾಗಿ ಸಲ್ಲಿಸಬೇಕಾದ ಅಗತ್ಯ ದಾಖಲೆಗಳು:<br>ಎ) ನಮೂನೆ- V-1ರಲ್ಲಿ ಅರ್ಜಿ<br>ಬಿ) ಕಾಮಗಾರಿ ನಡೆಯುವ ಕಟ್ಟಡದ ಮಾಲೀಕರು/ ಗುತ್ತಿಗೆದಾರರು, CREDAI (Confederation of Real Estate Developers Association of India), BAI (Builders Association of India) ಅಥವಾ ಕರ್ನಾಟಕ ಸ್ಟೇಟ್ ಕಾಂಟ್ರಾಕ್ಟರ್ಸ್ ಅಸೋಸಿಯೇಷನ್ ರವರು ನಮೂನೆ- V(A)ರಲ್ಲಿ ನೀಡುವಂತಹ 'ಉದ್ಯೋಗದ ದೃಢೀಕರಣ ಪತ್ರ' ಅಥವಾ ನೋಂದಾಯಿತ ಕಾರ್ಮಿಕ ಸಂಘಗಳು ನಮೂನೆ- V(B)ರಲ್ಲಿ ನೀಡುವಂತಹ 'ಉದ್ಯೋಗದ ದೃಢೀಕರಣ ಪತ್ರ' ಅಥವಾ ಕಾರ್ಮಿಕ ಅಧಿಕಾರಿ / ಹಿರಿಯ ಕಾರ್ಮಿಕ ನಿರೀಕ್ಷಕರು / ಕಾರ್ಮಿಕ ನಿರೀಕ್ಷಕರು ನಮೂನೆ- V(C)ರಲ್ಲಿ ನೀಡುವಂತಹ 'ಉದ್ಯೋಗದ ದೃಢೀಕರಣ ಪತ್ರ' ಅಥವಾ ಪಂಚಾಯತಿ ಅಭಿವೃದ್ಧಿ ಅಧಿಕಾರಿ / ಗ್ರಾಮ ಪಂಚಾಯತಿ ಕಾರ್ಯದರ್ಶಿಗಳು ನಮೂನೆ- V(D)ರಲ್ಲಿ ನೀಡುವಂತಹ 'ಉದ್ಯೋಗದ ದೃಢೀಕರಣ ಪತ್ರ'<br>ಸಿ) ಮೂರು ಪಾಸ್ ಪೋರ್ಟ್ ಅಳತೆಯ ಭಾವಚಿತ್ರಗಳು<br>ಡಿ) ವಯಸ್ಸಿನ ದೃಢೀಕರಣ ಪತ್ರ: ಶಾಲಾ ದಾಖಲಾತಿ, |

| | | |
|---|---|---|
| | | ವಾಹನ ಚಾಲನಾ ಪರವಾನಗಿ, ಪಾಸ್‌ಪೋರ್ಟ್, ಎಪಿಕ್‌ಕಾರ್ಡ್, ಆಧಾರ್‌ಕಾರ್ಡ್, ಎಲ್‌ಐಸಿ ವಿಮೆ ಪಾಲಿಸಿ ಅಥವಾ ಗ್ರಾಮ ಲೆಕ್ಕಿಗರು ಅಥವಾ ಕಂದಾಯ ನಿರೀಕ್ಷಕರು ಅಥವಾ ಸ್ಥಳೀಯ ಸಂಸ್ಥೆಯ ಅಧಿಕಾರಿಗಳು ಅಥವಾ ಜನನ ಮತ್ತು ಮರಣ ನೋಂದಣಾಧಿಕಾರಿಗಳಿಂದ ವಿತರಿಸಿದ ಪ್ರಮಾಣ ಪತ್ರ ಅಥವಾ ಸರ್ಕಾರಿ ಆಸ್ಪತ್ರೆ/ಇಎಸ್‌ಐ ಆಸ್ಪತ್ರೆ/ಸ್ಥಳೀಯ ಸಂಸ್ಥೆಗಳ ಆಸ್ಪತ್ರೆ ಅಥವಾ ನೋಂದಾಯಿತ ಎಂಬಿಬಿಎಸ್, ಆಯುರ್ವೇದ, ಯುನಾನಿ ಅಥವಾ ಹೋಮಿಯೋಪತಿ ವೈದ್ಯರು, ನೋಂದಾಯಿತ ಖಾಸಗಿ ಬಿ.ಡಿ.ಎಸ್ ವಿದ್ಯಾರ್ಹತೆ ಹೊಂದಿದ ದಂತ ವೈದ್ಯರಿಂದ ಪ್ರಮಾಣ ಪತ್ರ ಇವುಗಳಲ್ಲಿ ಯಾವುದಾದರೊಂದು ದಾಖಲೆ. |
| ಆ) | 2018 ನೇ ಸಾಲಿನಿಂದ 2021ರ ವರೆಗೆ ಅಸಂಘಟಿತ ಕಾರ್ಮಿಕರ ಅಭಿವೃದ್ಧಿಗಾಗಿ ಸರ್ಕಾರದಿಂದ ಧಾರವಾಡ ಜಿಲ್ಲೆಗೆ ಬಿಡುಗಡೆ ಮಾಡಿರುವ ಅನುದಾನ ಎಷ್ಟು; ಅದರಲ್ಲಿ ಖರ್ಚು ಮಾಡಿರುವ ಅನುದಾನ/ಉಳಿದ ಅನುದಾನಗಳ ವಿವರ ನೀಡುವುದು; | 1. **ಕರ್ನಾಟಕ ರಾಜ್ಯ ಅಸಂಘಟಿತ ಕಾರ್ಮಿಕರ ಸಾಮಾಜಿಕ ಭದ್ರತಾ ಮಂಡಳಿ:–**<br>ಜಿಲ್ಲಾವಾರು ಪ್ರತ್ಯೇಕ ಅನುದಾನ ಹಂಚಿಕೆ ಮಾಡಿರುವುದಿಲ್ಲ.<br>2. **ಕರ್ನಾಟಕ ಕಟ್ಟಡ ಮತ್ತು ಇತರೆ ನಿರ್ಮಾಣ ಕಾರ್ಮಿಕರ ಕಲ್ಯಾಣ ಮಂಡಳಿ:–** ಈ ಮಂಡಳಿಗೆ ಸರ್ಕಾರದಿಂದ ಪ್ರತ್ಯೇಕ ಅನುದಾನ ಮಂಜೂರಾಗಿರುವುದಿಲ್ಲ ಕರ್ನಾಟಕ ಕಟ್ಟಡ ಮತ್ತು ಇತರ ನಿರ್ಮಾಣ ಕಾರ್ಮಿಕರ ಕಲ್ಯಾಣ ಮಂಡಳಿಯ ನಿಧಿಯಿಂದ ಮಂಡಳಿಯ ವೆಚ್ಚವನ್ನು ಭರಿಸಲಾಗುತ್ತಿದೆ. 2018ನೇ ಸಾಲಿನಿಂದ 2021ರ ವರೆಗೆ ಕರ್ನಾಟಕ ಕಟ್ಟಡ ಮತ್ತು ಇತರೆ ನಿರ್ಮಾಣ ಕಾರ್ಮಿಕರ ಕಲ್ಯಾಣ ಮಂಡಳಿಯಿಂದ ನೀಡಲಾಗುವ ಕಲ್ಯಾಣ ಮತ್ತು ಸಾಮಾಜಿಕ ಭದ್ರತಾ ಸೌಲಭ್ಯಗಳಡಿ ಸಹಾಯಧನ ಒದಗಿಸಲು ಮಂಡಳಿಯ ಕಲ್ಯಾಣ ಸುಂಕ ನಿಧಿಯಿಂದ ಒಟ್ಟು 24.66 ಕೋಟಿಯಷ್ಟು ಮೊತ್ತವನ್ನು ಬಿಡುಗಡೆ ಮಾಡಲಾಗಿರುತ್ತದೆ. ಸದರಿ ಮೊತ್ತವನ್ನು ಸಂಪೂರ್ಣವಾಗಿ ಖರ್ಚು ಮಾಡಲಾಗಿರುತ್ತದೆ. ವಿವರಗಳನ್ನು **ಅನುಬಂಧ–1** ರಲ್ಲಿ ಒದಗಿಸಿದೆ. |
| ಇ) | ಅಸಂಘಟಿತ ಕಾರ್ಮಿಕರ ಅಭಿವೃದ್ಧಿಗಾಗಿ ಇರುವ ಯೋಜನೆಗಳಾವುವು? (ತಾಲ್ಲೂಕುವಾರು ವಿವರ ನೀಡುವುದು) | 1. **ಕರ್ನಾಟಕ ರಾಜ್ಯ ಅಸಂಘಟಿತ ಕಾರ್ಮಿಕರ ಸಾಮಾಜಿಕ ಭದ್ರತಾ ಮಂಡಳಿ:–** ಅಸಂಘಟಿತ ಕಾರ್ಮಿಕರಿಗೆ ಸಾಮಾಜಿಕ ಭದ್ರತೆ ಒದಗಿಸಲು, ರಾಜ್ಯ ಸರ್ಕಾರದ ಈ ಕೆಳಕಂಡ ಯೋಜನೆಗಳನ್ನು ಅನುಷ್ಠಾನಗೊಳಿಸುತ್ತಿದೆ.<br>(1) **ಕರ್ನಾಟಕ ರಾಜ್ಯ ಖಾಸಗಿ ವಾಣಿಜ್ಯ ಸಾರಿಗೆ ಕಾರ್ಮಿಕರ ಅಪಘಾತ ಪರಿಹಾರ ಯೋಜನೆ:–**ಖಾಸಗಿ ವಾಣಿಜ್ಯ ಸಾರಿಗೆ ವಾಹನ ಕಾರ್ಮಿಕರಿಗೆ ಸಂಬಂಧಪಟ್ಟಂತೆ ಜಾರಿಗೊಳಿಸುತ್ತಿರುವ ಈ ಯೋಜನೆಯಡಿ ಕೆಳಕಂಡ ಸೌಲಭ್ಯಗಳನ್ನು ನೀಡಲಾಗುತ್ತಿದೆ.<br>**(ಅ) ಅಪಘಾತ ಪರಿಹಾರ:–**<br>➢ ಅಪಘಾತದಿಂದ ಚಾಲಕರು, ನಿರ್ವಾಹಕರು ಹಾಗೂ |

| | | |
|---|---|---|
| | | ಕ್ಲೀನರ್‌ಗಳು ಮರಣ ಹೊಂದಿದಲ್ಲಿ, ಅವರ ನಾಮನಿರ್ದೇಶಿತರಿಗೆ ರೂ.5 ಲಕ್ಷ ಪರಿಹಾರ.<br>➢ ಅಪಘಾತದಿಂದ ಶಾಶ್ವತ ದುರ್ಬಲತೆ ಹೊಂದಿದಾಗ, ಫಲಾನುಭವಿಗೆ ದುರ್ಬಲತೆಯ ಪ್ರಮಾಣಕ್ಕನುಗುಣವಾಗಿ ಗರಿಷ್ಠ ರೂ.2 ಲಕ್ಷದ ವರೆಗೆ ಪರಿಹಾರ.<br>➢ ಅಪಘಾತದಿಂದ ತಾತ್ಕಾಲಿಕ ದುರ್ಬಲತೆ ಹೊಂದಿದಾಗ–<br>❖ ಅಪಘಾತಕೊಳ್ಳಗಾಗಿ ಆಸ್ಪತ್ರೆಯಲ್ಲಿ 15 ದಿನಗಳಿಗಿಂತ ಕಡಿಮೆ ಅವಧಿಗೆ ಒಳರೋಗಿಯಾಗಿ ಚಿಕಿತ್ಸೆ ಪಡೆದಲ್ಲಿ, ಗರಿಷ್ಠ ರೂ. 50,000/– ರವರೆಗೆ; ಅಥವಾ ನಿಖರ ಆಸ್ಪತ್ರೆ ವೆಚ್ಚ, ಇವುಗಳಲ್ಲಿ ಯಾವುದು ಕಡಿಮೆಯೊ ಅದನ್ನು ಪಾವತಿಸಲಾಗುವುದು.<br>❖ 15 ದಿನಗಳಿಗಿಂತ ಹೆಚ್ಚು ದಿನ ಒಳರೋಗಿಯಾಗಿ ಚಿಕಿತ್ಸೆ ಪಡೆದಿದ್ದಲ್ಲಿ, ಗರಿಷ್ಠ ರೂ. 1 ಲಕ್ಷದ ವರೆಗೆ ಅಥವಾ ನಿಖರ ಆಸ್ಪತ್ರೆ ವೆಚ್ಚ, ಇವುಗಳಲ್ಲಿ ಯಾವುದು ಕಡಿಮೆಯೊ ಅದನ್ನು ಪಾವತಿಸಲಾಗುವುದು. ದಾರವಾಡ ಜಿಲ್ಲೆಗೆ ಸಂಬಂಧಿಸಿದಂತೆ ಈವರೆಗೆ 20 ಫಲಾನುಭವಿಗಳು ಯೋಜನೆಯ ಸೌಲಭ್ಯ ಪಡೆದುಕೊಂಡಿರುತ್ತಾರೆ. **(ತಾಲ್ಲೂಕುವಾರು ಮಾಹಿತಿ <u>ಅನುಬಂಧ–2</u> ರಲ್ಲಿ ಲಗತ್ತಿಸಿದೆ)**<br>(ಆ) **<u>ಶೈಕ್ಷಣಿಕ ಧನಸಹಾಯ:–</u>**<br>ಅಪಘಾತದಿಂದ ನಿಧನರಾದ ಹಾಗೂ ಸಂಪೂರ್ಣ ಶಾಶ್ವತ ದುರ್ಬಲತೆ ಹೊಂದಿದ ಖಾಸಗಿ ವಾಣಿಜ್ಯ ಸಾರಿಗೆ ವಾಹನ ಚಾಲಕರು, ಯೋಜನೆಯಡಿ ನೋಂದಾಯಿತ ನಿರ್ವಾಹಕರು ಹಾಗೂ ಕ್ಲೀನರ್‌ಗಳ ಗರಿಷ್ಠ ಇಬ್ಬರು ಮಕ್ಕಳಿಗೆ 1 ರಿಂದ 12ನೇತರಗತಿಯವರೆಗೆ ವ್ಯಾಸಂಗಕ್ಕಾಗಿ ವಾರ್ಷಿಕ ತಲಾ ರೂ.10,000/–ಗಳ ಶೈಕ್ಷಣಿಕ ಧನ ಸಹಾಯ ನೀಡಲಾಗುತ್ತಿದೆ. ಧಾರವಾಡ ಜಿಲ್ಲೆಗೆ ಸಂಬಂಧಿಸಿದಂತೆ ಈವರೆಗೆ 16 ಫಲಾನುಭವಿಗಳು ಯೋಜನೆಯ ಸೌಲಭ್ಯ ಪಡೆದುಕೊಂಡಿರುತ್ತಾರೆ **(ತಾಲ್ಲೂಕುವಾರು ಮಾಹಿತಿಯನ್ನು <u>ಅನುಬಂಧ–2</u> ರಲ್ಲಿ ಲಗತ್ತಿಸಿದೆ)**<br>(ಇ) **ಅಪಘಾತ ಜೀವ ರಕ್ಷಕ:–** ಅಪಘಾತಕ್ಕೊಳಗಾದ ಗಾಯಾಳುಗಳನ್ನು ರಕ್ಷಿಸುವ ಸ್ವಯಂಸೇವಕರನ್ನು ಸೃಷ್ಠಿಸುವ ಉದ್ದೇಶದಿಂದ ಅಪಘಾತ ಜೀವರಕ್ಷಕ ಕಾರ್ಯಕ್ರಮದಡಿ ಚಾಲಕರಿಗೆಪ್ರಥಮ ಚಿಕಿತ್ಸಾ ತರಬೇತಿಯನ್ನು ನೀಡಲಾಗುತ್ತಿದೆ. |

ಈವರೆಗೆ 1,177 ಚಾಲಕರುಗಳಿಗೆ ಪ್ರಥಮ ಚಿಕಿತ್ಸಾ ತರಬೇತಿ ನೀಡಲಾಗಿದೆ. **(ತಾಲ್ಲೂಕುವಾರು ಮಾಹಿತಿ ಲಭ್ಯವಿರುವುದಿಲ್ಲ)**

**(2) <u>ಅಂಬೇಡ್ಕರ್ ಕಾರ್ಮಿಕ ಸಹಾಯ ಹಸ್ತ ಯೋಜನೆ:-</u>**

**(ಅ) "ಸ್ಮಾರ್ಟ್ ಕಾರ್ಡ್":-** ಯೋಜನೆಯಡಿ ಪ್ರಸ್ತುತ 11 ಅಸಂಘಟಿತ ವರ್ಗಗಳಾದ "ಹಮಾಲರು, ಮನೆಗೆಲಸದವರು, ಚಿಂದಿ ಆಯುವವರು, ಟೈಲರ್ಸ್, ಮೆಕ್ಯಾನಿಕ್, ಅಗಸರು, ಅಕ್ಕಸಾಲಿಗರು, ಕಮ್ಮಾರರು, ಕುಂಬಾರರು, ಕ್ಷೌರಿಕರು ಹಾಗೂ ಭಟ್ಟಿ ಕಾರ್ಮಿಕ"ರನ್ನು ನೋಂದಾಯಿಸಿ ಸ್ಮಾರ್ಟ್ ಕಾರ್ಡ್ ವಿತರಿಸಲಾಗುತ್ತಿದೆ. ಧಾರವಾಡ ಜಿಲ್ಲೆಗೆ ಸಂಬಂಧಿಸಿದಂತೆ ಈವರೆಗೆ 2662 ಫಲಾನುಭವಿಗಳು ಯೋಜನೆಯಡಿ ನೊಂದಾಯಿಸಿಕೊಂಡಿರುತ್ತಾರೆ. **(ತಾಲ್ಲೂಕುವಾರು ಮಾಹಿತಿ <u>ಅನುಬಂಧ -2</u> ರಲ್ಲಿ ಲಗತ್ತಿಸಿದೆ)**

**(ಆ) ಕಾರ್ಮಿಕ ಸೇವಾ ಕೇಂದ್ರ :-**

- ಅಸಂಘಟಿತ ಕಾರ್ಮಿಕರ ಸಾಮಾಜಿಕ ಭದ್ರತಾ ಕಾಯ್ದೆ 2008ರ ಕಲಂ 9ರನ್ವಯ ಫಲಾನುಭವಿಗಳಲ್ಲಿ ಅಸಂಘಟಿತ ಕಾರ್ಮಿಕರಿಗೆ ಲಭ್ಯವಿರುವ ಎಲ್ಲಾ ಯೋಜನೆಗಳ ಕುರಿತು ಮಾಹಿತಿ ನೀಡಲು, ಯೋಜನೆಗಳ ಸೌಲಭ್ಯಗಳನ್ನು ಪಡೆದುಕೊಳ್ಳಲು ಅವಶ್ಯಕವಿರುವ ದಾಖಲಾತಿಗಳನ್ನು ಸಿದ್ಧಪಡಿಸಲು ಹಾಗೂ ನಿಗಧಿಪಡಿಸಿದ ಅರ್ಜಿ ನಮೂನೆಗಳನ್ನು ಭರ್ತಿ ಮಾಡಿ ಸಂಬಂಧಪಟ್ಟವರಿಗೆ ರವಾನಿಸಲು ಸಹಾಯವಾಗುವಂತೆ ರಾಜ್ಯದ ಎಲ್ಲಾ 175 ತಾಲ್ಲೂಕುಗಳಲ್ಲಿ ತಲಾ ಒಂದರಂತೆ ಕಾರ್ಮಿಕ ಸೇವಾ ಕೇಂದ್ರಗಳನ್ನು ಹಾಗೂ ಬೆಂಗಳೂರು ವ್ಯಾಪ್ತಿಯಲ್ಲಿ 6 ಕಾರ್ಮಿಕ ಸೇವಾ ಕೇಂದ್ರಗಳು ಸೇರಿ ಒಟ್ಟು 181 ಕಾರ್ಮಿಕ ಸೇವಾ ಕೇಂದ್ರಗಳನ್ನು ತೆರೆಯಲು ನಿರ್ಣಯಿಸಿದ್ದು, ಈಗಾಗಲೇ 169 ತಾಲ್ಲೂಕುಗಳಲ್ಲಿ ಕಾರ್ಮಿಕ ಸೇವಾ ಕೇಂದ್ರಗಳನ್ನು ಸ್ಥಾಪಿಸಲಾಗಿದೆ.
- ಕಾರ್ಮಿಕ ಇಲಾಖೆ ಹಾಗೂ ಅದರ ಅಧೀನದಲ್ಲಿ ಬರುವ ಮಂಡಳಿಗಳು ಅಸಂಘಟಿತ ಕಾರ್ಮಿಕರಿಗೆ ಅನುಷ್ಠಾನಗೊಳಿಸುತ್ತಿರುವ ಯೋಜನೆಗಳ ಕುರಿತು ಮಾಹಿತಿ, ಸಹಾಯ ಹಾಗೂ ಸೌಲಭ್ಯಗಳನ್ನು, ಸದರಿ ಸೇವಾ ಕೇಂದ್ರಗಳಲ್ಲಿ ಕಾರ್ಮಿಕ ಬಂಧುಗಳ ಮೂಲಕ ಪಡೆಯಲು ವ್ಯವಸ್ಥೆ ಮಾಡಲಾಗುತ್ತಿದೆ.

(3) **(ಅ)ಪ್ರಧಾನ ಮಂತ್ರಿ ಶ್ರಮಯೋಗಿ ಮಾನ್‌ಧನ್ ಯೋಜನೆ (ಪಿಎಂ-ಎಸ್‌ವೈಎಂ):-**ಕೇಂದ್ರ ಸರ್ಕಾರದ ಈ ಯೋಜನೆಯಡಿ 18 - 40 ವರ್ಷ ವಯೋಮಾನದ

| | | ಅಸಂಘಟಿತ ಕಾರ್ಮಿಕರು ನೊಂದಾಯಿಸಿಕೊಂಡು 60 ವರ್ಷ ಪೂರೈಸಿದ ನಂತರ ಮಾಸಿಕ ನಿಶ್ಚಿತ ರೂ.3,000/- ಗಳ ಪಿಂಚಣಿ ಸೌಲಭ್ಯ ಪಡೆಯಬಹುದಾಗಿದೆ. ಈ ಯೋಜನೆಯಡಿ ಫಲಾನುಭವಿಗಳಿಗೆ ಅವರ ವಯಸ್ಸಿನ ಆಧಾರದ ಮೇಲೆ ಮಾಸಿಕ ತಲಾ ರೂ. 55/- ರಿಂದ ರೂ. 200/- ರವರೆಗೆ ಕೇಂದ್ರ ಸರ್ಕಾರವು ಸಮಾನಾಂತರ ವಂತಿಕೆಯನ್ನು ಪಾವತಿಸುತ್ತದೆ. ಧಾರವಾಡ ಜಿಲ್ಲೆಗೆ ಸಂಬಂಧಿಸಿದಂತೆ ಈವರೆಗೆ 2293 ಫಲಾನುಭವಿಗಳು ಯೋಜನೆಯಡಿ ನೋಂದಾಯಿಸಿಕೊಂಡಿರುತ್ತಾರೆ. **(ತಾಲ್ಲೂಕುವಾರು ಮಾಹಿತಿ ಲಭ್ಯವಿರುವುದಿಲ್ಲ)**<br><br>**(ಆ) ಎನ್.ಪಿ. ಎಸ್ ಫಾರ್ ಟ್ರೇಡರ್ಸ್ ಯೋಜನೆ**<br>(4) ಈ ಯೋಜನೆಯಡಿ ನೋಂದಾಯಿತ ಅಂಗಡಿ ಮಾಲೀಕರು, ಚಿಲ್ಲರೆ ವ್ಯಾಪಾರಿಗಳು, ಅಕ್ಕಿ ಗಿರಣಿ ಮಾಲೀಕರು, ಎಣ್ಣೆ ಗಿರಣಿ ಮಾಲೀಕರು, ವರ್ಕ್‌ಶಾಪ್ ಮಾಲೀಕರು, ಕಮಿಷನ್ ಏಜೆಂಟ್ಸ್, ರಿಯಲ್ ಎಸ್ಟೇಟ್‌ನ ಬ್ರೋಕರ್ಸ್, ಸಣ್ಣ ಹೋಟೆಲ್ ಹಾಗೂ ರೆಸ್ಟೋರೆಂಟ್‌ನ ಮಾಲೀಕರು ಹಾಗೂ ಅಂತಹ ಇತರೆ ಸಣ್ಣ ವ್ಯಾಪಾರಗಳಲ್ಲಿ ತೊಡಗಿಸಿಕೊಂಡ ವ್ಯಾಪಾರಿಗಳು/ಲಘು ವ್ಯಾಪಾರಿಗಳು ಹಾಗೂ ಸ್ವಯಂ ಉದ್ಯೋಗಿಗಳು 60 ವರ್ಷ ಪೂರೈಸಿದ ನಂತರ ಮಾಸಿಕ ನಿಶ್ಚಿತ ರೂ.3000/-ಗಳ ಪಿಂಚಣಿ ಸೌಲಭ್ಯ ಒದಗಿಸಲಾಗುತ್ತದೆ. ಧಾರವಾಡ ಜಿಲ್ಲೆಗೆ ಸಂಬಂಧಿಸಿದಂತೆ ಈವರೆಗೆ 43 ಫಲಾನುಭವಿಗಳು ಯೋಜನೆಯಡಿ ನೋಂದಾಯಿಸಿಕೊಂಡಿರುತ್ತಾರೆ. **(ತಾಲ್ಲೂಕುವಾರು ಮಾಹಿತಿ ಲಭ್ಯವಿರುವುದಿಲ್ಲ)**<br><br>**2. ಕರ್ನಾಟಕ ಕಟ್ಟಡ ಮತ್ತು ಇತರೆ ನಿರ್ಮಾಣ ಕಾರ್ಮಿಕರ ಕಲ್ಯಾಣ ಮಂಡಳಿ:-**<br>ಮಂಡಳಿಯಲ್ಲಿ ನೋಂದಾಯಿತರಾದ ಕಟ್ಟಡ ಮತ್ತು ಇತರೆ ನಿರ್ಮಾಣ ಕಾರ್ಮಿಕರಿಗೆ 19 ವಿವಿಧ ಕಲ್ಯಾಣ ಮತ್ತು ಸಾಮಾಜಿಕ ಭದ್ರತಾ ಸೌಲಭ್ಯಗಳನ್ನು ರೂಪಿಸಿ ಜಾರಿಗೊಳಿಸಲಾಗುತ್ತಿದೆ. ವಿವರಗಳನ್ನು <u>ಅನುಬಂಧ-3</u> ರಲ್ಲಿ ನೀಡಿದೆ. ಈ ಯೋಜನೆಗಳು ಎಲ್ಲಾ ತಾಲ್ಲೂಕುಗಳಿಗೆ ಅನ್ವಯಿಸುತ್ತದೆ. |
|---|---|---|

ಕಾಇ 121 ಎಲ್‌ಇಟಿ 2021

**(ಅರಬೈಲ್ ಶಿವರಾಂ ಹೆಬ್ಬಾರ್)**
**ಕಾರ್ಮಿಕ ಸಚಿವರು**

## ಅನುಬಂಧ-1

## (ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ:1567)

### ಧಾರವಾಡ ಜಿಲ್ಲಾ ವ್ಯಾಪ್ತಿಯ ನೋಂದಾಯಿತ ಫಲಾನುಭವಿಗಳಿಗೆ ಬಿಡುಗಡೆ ಮಾಡಿದ ಸಹಾಯಧನದ ವಿವರ

| ಸೌಲಭ್ಯಗಳ ವಿವರ | 2018-19 | | 2019-20 | | 2020-21 | |
|---|---|---|---|---|---|---|
| | ಸಂಖ್ಯೆ | ಮೊತ್ತ | ಸಂಖ್ಯೆ | ಮೊತ್ತ | ಸಂಖ್ಯೆ | ಮೊತ್ತ |
| ಶೈಕ್ಷಣಿಕ ಸಹಾಯಧನ | 7114 | 3,37,13,350 | 11451 | 44,98,4000 | 3179 | 1,39,32,000 |
| ಮದುವೆ ಸಹಾಯಧನ | 981 | 5,49,50,000 | 716 | 2,78,00,000 | 573 | 2,08,00,000 |
| ಅಂತ್ಯ ಸಂಸ್ಕಾರ ವೆಚ್ಚ | 294 | 1,58,72,000 | 189 | 1,02,06000 | 334 | 1,80,36,000 |
| ಪ್ರಮುಖ ವೈದ್ಯಕೀಯ | 02 | 50,000 | 9 | 1,39,786 | 9 | 1,42,528 |
| ಅಪಘಾತ ಪರಿಹಾರ | 4 | 16,00,000 | 5 | 22,00,000 | 1 | 5,00,000 |
| ಹೆರಿಗೆ ಸಹಾಯಧನ | 29 | 7,05,000 | 10 | 1,50,000 | 0 | 0 |
| ವೈದ್ಯಕೀಯ ಸಹಾಯಧನ | 2 | 55,000 | 0 | 0 | 0 | 0 |
| ಪಿಂಚಣಿ ಸಹಾಯಧನ | 13 | 3,12,000 | 20 | 4,80,000 | 2 | 8000 |
| ಒಟ್ಟು | 8,439 | 10,72,57,350 | 12,400 | 8,59,59,786 | 4,098 | 5,34,18,528 |

**ಅನುಬಂಧ-2**
**(ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ:1567)**

**ಮಂಡಳಿಯು ಜಾರಿಗೊಳಿಸುತ್ತಿರುವ ಯೋಜನೆಗಳಡಿ ಸೌಲಭ್ಯಪಡೆದ ಫಲಾನುಭವಿಗಳ ತಾಲ್ಲೂಕುವಾರು ವಿವರ**

**(1) ಕರ್ನಾಟಕ ರಾಜ್ಯ ಖಾಸಗಿ ವಾಣಿಜ್ಯ ಸಾರಿಗೆ ಕಾರ್ಮಿಕರ ಅಪಘಾತ ಪರಿಹಾರ ಯೋಜನೆ:-**

| ತಾಲ್ಲೂಕು | ಅಪಘಾತ ಪರಿಹಾರ | | ಶೈಕ್ಷಣಿಕ ಧನಸಹಾಯ | |
|---|---|---|---|---|
| | ಫಲಾನುಭವಿಗಳ ಸಂಖ್ಯೆ | ಪರಿಹಾರದ ಮೊತ್ತ (ರೂ.ಗಳಲ್ಲಿ) | ಫಲಾನುಭವಿಗಳ ಸಂಖ್ಯೆ | ಪರಿಹಾರದ ಮೊತ್ತ (ರೂ.ಗಳಲ್ಲಿ) |
| ಧಾರವಾಡ | 13 | 36,01,936/- | 16 | 1,60,000/- |
| ಹುಬ್ಬಳ್ಳಿ | 4 | 20,00,000/- | - | - |
| ಕಲಘಟಗಿ | 2 | 5,50,000/- | - | - |
| ಕುಂದಗೋಳ್ | 1 | 5,00,000/- | - | - |
| ನವಲಗುಂದ | - | - | - | - |
| ಒಟ್ಟು | **20** | **66,51,936/-** | **16** | **1,60,000/-** |

**(2) ಅಂಬೇಡ್ಕರ್ ಕಾರ್ಮಿಕ ಸಹಾಯ ಹಸ್ತ ಯೋಜನೆ:-**

| ತಾಲ್ಲೂಕು | ನೋಂದಣಿಯಾದ ಕಾರ್ಮಿಕರ ಸಂಖ್ಯೆ |
|---|---|
| ಧಾರವಾಡ | 571 |
| ಹುಬ್ಬಳ್ಳಿ | 1602 |
| ಕಲಘಟಗಿ | 206 |
| ಕುಂದಗೋಳ್ | 164 |
| ನವಲಗುಂದ | 119 |
| ಒಟ್ಟು | **2662** |

## ಅನುಬಂಧ-3

## (ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ:1567)

## ಕರ್ನಾಟಕ ಕಟ್ಟಡ ಮತ್ತು ಇತರೆ ನಿರ್ಮಾಣ ಕಾರ್ಮಿಕರ ಕಲ್ಯಾಣ ಮಂಡಳಿವತಿಯಿಂದ ಫಲಾನುಭವಿಗಳಿಗೆ ಸಿಗುವ ಸೌಲಭ್ಯಗಳು

1. **ಪಿಂಚಣಿ ಸೌಲಭ್ಯ:** ಮೂರು ವರ್ಷ ಸದಸ್ಯತ್ವದೊಂದಿಗೆ 60 ವರ್ಷ ಪೂರೈಸಿದ ಫಲಾನುಭವಿಗೆ ಮಾಸಿಕ ರೂ.2,000/-
2. **ಕುಟುಂಬ ಪಿಂಚಣಿ ಸೌಲಭ್ಯ:** ಮೃತ ಪಿಂಚಣಿದಾರರ ಪತಿ / ಪತ್ನಿ ಮಾಸಿಕ ರೂ.1000/-
3. **ದುರ್ಬಲತೆ ಪಿಂಚಣಿ:** ನೋಂದಾಯಿತ ಫಲಾನುಭವಿಯು ಖಾಯಿಲೆಗಳಿಂದ ಅಥವಾ ಕಟ್ಟಡ ಕಾಮಗಾರಿಗಳ ಅಪಘಾತದಿಂದ ಶಾಶ್ವತ/ಭಾಗಶಃ ಅಂಗವಿಕಲತೆ ಹೊಂದಿದ್ದರೆ ಮಾಸಿಕ ರೂ.2,000/- ಪಿಂಚಣಿ ಹಾಗೂ ಶೇಕಡವಾರು ದುರ್ಬಲತೆಯನ್ನಾಧರಿಸಿ ರೂ.2,00,000/- ದವರೆಗೆ ಅನುಗ್ರಹ ರಾಶಿ ಸಹಾಯಧನ.
4. **ಕನ್ನಡಕ, ಶ್ರವಣಯಂತ್ರ, ಕೃತಕ ಕೈಕಾಲು ಮತ್ತು ಗಾಲಿ ಕುರ್ಚಿ**ಮರುಪಾವತಿ ಸೌಲಭ್ಯ.
5. **ಟ್ರೈನಿಂಗ್-ಕಮ್-ಟೂಲ್‌ಕಿಟ್‌ಸೌಲಭ್ಯ (ಶ್ರಮ ಸಾಮರ್ಥ್ಯ) :** ರೂ.30,000/- ವರೆಗೆ
6. **ಶ್ರಮ ಸಂಸಾರ ಸಾಮರ್ಥ್ಯ ತರಬೇತಿ ಸೌಲಭ್ಯ:** ನೋಂದಾಯಿತ ಫಲಾನುಭವಿಯ ಅವಲಂಬಿತರಿಗೆ
7. **ವಸತಿ ಸೌಲಭ್ಯ (ಕಾರ್ಮಿಕ ಗೃಹ ಭಾಗ್ಯ):** ರೂ.2,00,000/- ದವರೆಗೆ ಮುಂಗಡ ಸೌಲಭ್ಯ
8. **ಹೆರಿಗೆ ಸೌಲಭ್ಯ (ತಾಯಿ ಲಕ್ಷ್ಮೀ ಬಾಂಡ್):** ಮಹಿಳಾ ಫಲಾನುಭವಿಯ ಮೊದಲ ಎರಡು ಮಕ್ಕಳಿಗೆ ಹೆಣ್ಣು ಮಗುವಿನ ಜನನಕ್ಕೆ ರೂ. 30,000/- ಮತ್ತು ಗಂಡು ಮಗುವಿನ ಜನನಕ್ಕೆ ರೂ.20,000/-
9. **ಶಿಶು ಪಾಲನಾ ಸೌಲಭ್ಯ:**
10. **ಅಂತ್ಯಕ್ರಿಯೆ ವೆಚ್ಚ :** ರೂ.4,000/- ಹಾಗೂ ಅನುಗ್ರಹ ರಾಶಿ ರೂ.50,000/-ಸಹಾಯಧನ
11. **ಶೈಕ್ಷಣಿಕ ಸಹಾಯಧನ (ಕಲಿಕೆ ಭಾಗ್ಯ):** ಫಲಾನುಭವಿಯ ಇಬ್ಬರು ಮಕ್ಕಳ ವಿದ್ಯಾಭ್ಯಾಸಕ್ಕಾಗಿ:

| ಕ್ರ.ಸಂ | ತರಗತಿ (ಉತ್ತೀರ್ಣಕ್ಕೆ) | ವಾರ್ಷಿಕ ಸಹಾಯ ಧನ | |
|---|---|---|---|
| | | ಗಂಡು | ಹೆಣ್ಣು |
| I. | ನರ್ಸರಿ | 3,000 | 4,000 |
| II. | 1 ರಿಂದ 4ನೇ ತರಗತಿ | 3,000 | 4,000 |
| III. | 5 ರಿಂದ 8ನೇ ತರಗತಿ | 5,000 | 6,000 |
| IV. | 9 ಹಾಗೂ 10ನೇ ತರಗತಿ | 10,000 | 11,000 |
| V. | ಪ್ರಥಮ ಪಿಯುಸಿ ಮತ್ತು ದ್ವಿತೀಯ ಪಿ.ಯು.ಸಿ | 10,000 | 14,000 |
| VI. | ಐಟಿಐ | 12,000 | 15,000 |
| VII. | ಪದವಿ ಪ್ರತಿ ವರ್ಷಕ್ಕೆ | 15,000 | 20,000 |
| VIII. | ಸ್ನಾತಕೋತ್ತರ ಪದವಿ ಸೇರ್ಪಡೆಗೆ | 20,000 | 20,000 |
| | ಮತ್ತು ಪ್ರತಿ ವರ್ಷಕ್ಕೆ | 20,000 | 25,000 |
| IX. | ಇಂಜಿನಿಯರಿಂಗ್ ಕೋರ್ಸ್ ಬಿಇ/ ಬಿ.ಟೆಕ್ ಸೇರ್ಪಡೆಗೆ | 25,000 | 25,000 |
| | ಮತ್ತು ಪ್ರತಿ ವರ್ಷಕ್ಕೆ | 25,000 | 30,000 |
| X. | ವೈದ್ಯಕೀಯ ಕೋರ್ಸ್‌ಗೆ ಸೇರ್ಪಡೆಗೆ | 30,000 | 30,000 |
| | ಮತ್ತು ಪ್ರತಿ ವರ್ಷಕ್ಕೆ | 40,000 | 50,000 |
| XI. | ಡಿಪ್ಲೋಮಾ | 15,000 | 20,000 |
| XII. | ಎಂ.ಟೆಕ್ / ಎಂ.ಇ | 30,000 | 35,000 |
| XIII. | ಎಂ.ಡಿ (ವೈದ್ಯಕೀಯ) | 45,000 | 55,000 |
| XIV. | ಪಿಹೆಚ್‌ಡಿ (ಪ್ರತಿ ವರ್ಷಕ್ಕೆ) ಗರಿಷ್ಠ 03 ವರ್ಷ | 25,000 | 30,000 |

12. **ವೈದ್ಯಕೀಯ ಸಹಾಯಧನ (ಕಾರ್ಮಿಕ ಆರೋಗ್ಯ ಭಾಗ್ಯ):** ನೋಂದಾಯಿತ ಫಲಾನುಭವಿ ಹಾಗೂ ಅವರ ಅವಲಂಬಿತರಿಗೆ ರೂ.300/- ರಿಂದ ರೂ.10,000/-ವರೆಗೆ

13. **ಅಪಘಾತ ಪರಿಹಾರ:** ಮರಣ ಹೊಂದಿದ್ದಲ್ಲಿ ರೂ.5,00,000/-, ಸಂಪೂರ್ಣ ಶಾಶ್ವತ ದುರ್ಬಲತೆಯಾದಲ್ಲಿ ರೂ.2,00,000/- ಮತ್ತು ಭಾಗಶಃ ಶಾಶ್ವತ ದುರ್ಬಲತೆಯಾದಲ್ಲಿ ರೂ.1,00,000/-
14. **ಪ್ರಮುಖ ವೈದ್ಯಕೀಯ ವೆಚ್ಚ ಸಹಾಯಧನ (ಕಾರ್ಮಿಕ ಚಿಕಿತ್ಸಾ ಭಾಗ್ಯ):** ಹೃದ್ರೋಗ, ಕಿಡ್ನಿ ಜೋಡಣೆ, ಕ್ಯಾನ್ಸರ್ ಶಸ್ತ್ರಚಿಕಿತ್ಸೆ, ಕಣ್ಣಿನ ಶಸ್ತ್ರಚಿಕಿತ್ಸೆ, ಪಾರ್ಶ್ವವಾಯು, ಮೂಳೆ ಶಸ್ತ್ರಚಿಕಿತ್ಸೆ, ಗರ್ಭಕೋಶ ಶಸ್ತ್ರಚಿಕಿತ್ಸೆ, ಅಸ್ತಮ ಚಿಕಿತ್ಸೆ, ಗರ್ಭಪಾತ ಪ್ರಕರಣಗಳು, ಪಿತ್ತಕೋಶದ ತೊಂದರೆಗೆ ಸಂಬಂಧಿತ ಚಿಕಿತ್ಸೆ, ಮೂತ್ರ ಪಿಂಡದಲ್ಲಿನ ಕಲ್ಲು ತೆಗೆಯುವ ಚಿಕಿತ್ಸೆ, ಮೆದುಳಿನ ರಕ್ತಸ್ರಾವದ ಚಿಕಿತ್ಸೆ, ಅಲ್ಸರ್ ಚಿಕಿತ್ಸೆ, ಡಯಾಲಿಸಿಸ್ ಚಿಕಿತ್ಸೆ, ಕಿಡ್ನಿ ಶಸ್ತ್ರಚಿಕಿತ್ಸೆ, ಇ.ಎನ್.ಟಿ. ಚಿಕಿತ್ಸೆ ಮತ್ತು ಶಸ್ತ್ರಚಿಕಿತ್ಸೆ, ನರರೋಗ ಶಸ್ತ್ರಚಿಕಿತ್ಸೆ, ವ್ಯಾಸ್ಕ್ಯೂಲರ್ ಶಸ್ತ್ರಚಿಕಿತ್ಸೆ, ಅನ್ನನಾಳದ ಚಿಕಿತ್ಸೆ ಮತ್ತು ಶಸ್ತ್ರಚಿಕಿತ್ಸೆ, ಕರುಳಿನ ಶಸ್ತ್ರಚಿಕಿತ್ಸೆ, ಸ್ತನ ಸಂಬಂಧಿತ ಚಿಕಿತ್ಸೆ ಮತ್ತು ಶಸ್ತ್ರಚಿಕಿತ್ಸೆ, ಹರ್ನಿಯ ಶಸ್ತ್ರಚಿಕಿತ್ಸೆ, ಅಪೆಂಡಿಕ್ಸ್ ಶಸ್ತ್ರಚಿಕಿತ್ಸೆ, ಮೂಳೆ ಮುರಿತ/ಡಿಸ್‌ಲೊಕೇಶನ್ ಚಿಕಿತ್ಸೆ, ಇತರೆ ಔದ್ಯೋಗಿಕ ಖಾಯಿಲೆಗಳ ಚಿಕಿತ್ಸೆಗಳಿಗೆ ರೂ.2;00,000/-ವರೆಗೆ
15. **ಮದುವೆ ಸಹಾಯಧನ (ಗೃಹ ಲಕ್ಷ್ಮೀ ಬಾಂಡ್):** ಫಲಾನುಭವಿ ಅಥವಾ ಅವರ ಇಬ್ಬರು ಮಕ್ಕಳ ಮದುವೆಗೆ ತಲಾ ರೂ.50,000/-
16. **LPG ಸಂಪರ್ಕ ಸೌಲಭ್ಯ (ಕಾರ್ಮಿಕ ಅನಿಲ ಭಾಗ್ಯ):** ಅನಿಲ ಸಂಪರ್ಕದೊಂದಿಗೆಎರಡು ಬರ್ನರ್ ಸ್ಟೌವ್
17. **ಬಿಎಂಟಿಸಿ ಬಸ್ ಪಾಸ್ ಸೌಲಭ್ಯ:** ಬೆಂಗಳೂರು ಮಹಾನಗರ ಪಾಲಿಕೆ ವ್ಯಾಪ್ತಿಯಲ್ಲಿ ಕೆಲಸ ಮಾಡುತ್ತಿರುವಂತಹ/ ವಾಸಸ್ಥಳದಿಂದ ಬೆಂಗಳೂರಿಗೆ ಪ್ರಯಾಣಿಸುವ ನೋಂದಾಯಿತ ಕಟ್ಟಡ ಕಾರ್ಮಿಕರಿಗೆ
18. **ಕೆಎಸ್‌ಆರ್‌ಟಿಸಿ ಬಸ್ ಪಾಸ್‌ನ ಸೌಲಭ್ಯ:** ರಾಜ್ಯದಾದ್ಯಂತ ವಿದ್ಯಾಭ್ಯಾಸದಲ್ಲಿ ತೊಡಗಿರುವ ನೋಂದಾಯಿತ ಕಾರ್ಮಿಕರ ಇಬ್ಬರು ಮಕ್ಕಳಿಗೆ (ಈ ಯೋಜನೆಯನ್ನು ಜಾರಿಗೊಳಿಸಲಾಗುತ್ತಿದೆ)
19. **ತಾಯಿ ಮಗು ಸಹಾಯ ಹಸ್ತ:** ಮಹಿಳಾ ಫಲಾನುಭವಿಯು ಮಗುವಿಗೆ ಜನ್ಮ ನೀಡಿದ ಸಂದರ್ಭದಲ್ಲಿ ಆಕೆಯ ಮಗುವಿನ ಶಾಲಾ ಪೂರ್ವ ಶಿಕ್ಷಣ ಮತ್ತು ಪೌಷ್ಠಿಕತೆಗಾಗಿ ಮಗುವಿಗೆ ಮೂರು ವರ್ಷಗಳು ತುಂಬುವವರೆಗೆ ವಾರ್ಷಿಕ ರೂ.6,000/- ಗಳ ಸಹಾಯಧನ.

# ಕರ್ನಾಟಕ ವಿಧಾನ ಸಭೆ

1. ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 2595
2. ಮಾನ್ಯ ಸದಸ್ಯರ ಹೆಸರು : ಶ್ರೀ ಅಪ್ಪಚ್ಚು (ರಂಜನ್) ಎಂ.ಪಿ. (ಮಡಿಕೇರಿ)
3. ಉತ್ತರಿಸಬೇಕಾದ ದಿನಾಂಕ : 18/3/2021
4. ಉತ್ತರಿಸುವವರು : ಮಾನ್ಯ ಕಾರ್ಮಿಕ ಸಚಿವರು

| ಕ್ರಮ ಸಂಖ್ಯೆ | ಪ್ರಶ್ನೆ | ಉತ್ತರ |
|---|---|---|
| ಅ) | ರಾಜ್ಯದಲ್ಲಿ ಸಂಘಟಿತ ಹಾಗೂ ಅಸಂಘಟಿತ ಕಾರ್ಮಿಕರುಗಳಿಗಾಗಿ ಅನುಷ್ಠಾನಗೊಂಡಿರುವ ಯೋಜನೆ ಯಾವುವು; | ಕಾರ್ಮಿಕ ಇಲಾಖೆಯ ಅಧೀನದಲ್ಲಿ ಕಾರ್ಯ ನಿರ್ವಹಿಸುತ್ತಿರುವ ಕರ್ನಾಟಕ ಕಾರ್ಮಿಕ ಕಲ್ಯಾಣ ಮಂಡಳಿಯು ಸಂಘಟಿತ ಕಾರ್ಮಿಕರಿಗೆ ಹಾಗೂ ಕರ್ನಾಟಕ ರಾಜ್ಯ ಕಟ್ಟಡ ಮತ್ತು ಇತರೆ ನಿರ್ಮಾಣ ಕಾರ್ಮಿಕರ ಕಲ್ಯಾಣ ಮಂಡಳಿ ಹಾಗೂ ಕರ್ನಾಟಕ ರಾಜ್ಯ ಅಸಂಘಟಿತ ಕಾರ್ಮಿಕರ ಸಾಮಾಜಿಕ ಭದ್ರತಾ ಮಂಡಳಿಯು ಅಸಂಘಟಿತ ಕಾರ್ಮಿಕರಿಗೆ ಈ ಕೆಳಕಂಡ ಯೋಜನೆಗಳನ್ನು ಅನುಷ್ಠಾನಗೊಳಿಸುತ್ತಿದೆ.<br><br>**ಕರ್ನಾಟಕ ಕಾರ್ಮಿಕ ಕಲ್ಯಾಣ ಮಂಡಳಿ: (ಸಂಘಟಿತ ವಲಯ) ಯೋಜನೆಗಳು;**<br>1. ಕಾರ್ಮಿಕರ ಮಕ್ಕಳಿಗೆ ಶೈಕ್ಷಣಿಕ ಪ್ರೋತ್ಸಾಹ ಧನ ಸಹಾಯ ಯೋಜನೆ.<br>2. ಕಾರ್ಮಿಕರಿಗೆ ವೈದ್ಯಕೀಯ ನೆರವು ಯೋಜನೆ.<br>3. ಕಾರ್ಮಿಕರಿಗೆ ಅಪಘಾತ ಧನ ಸಹಾಯ ಯೋಜನೆ.<br>4. ಮೃತ ಕಾರ್ಮಿಕರ ಅಂತ್ಯ ಸಂಸ್ಕಾರಕ್ಕೆ ಧನ ಸಹಾಯ ಯೋಜನೆ.<br>5. ಕಾರ್ಮಿಕರಿಗೆ ವಾರ್ಷಿಕ ವೈದ್ಯಕೀಯ ತಪಾಸಣೆ ಶಿಬಿರಕ್ಕೆ ಧನ ಸಹಾಯ ಯೋಜನೆ.<br>6. ಕಾರ್ಮಿಕರಿಗೆ ವಾರ್ಷಿಕ ಕ್ರೀಡಾಕೂಟ ಹಮ್ಮಿಕೊಳ್ಳುವ ಕಾರ್ಮಿಕಸಂಘಟನೆಗೆ ಧನ ಸಹಾಯ ಯೋಜನೆ.<br><br>**ಕರ್ನಾಟಕ ರಾಜ್ಯ ಕಟ್ಟಡ ಮತ್ತು ಇತರೆ ನಿರ್ಮಾಣ ಕಾರ್ಮಿಕರ ಕಲ್ಯಾಣ ಮಂಡಳಿ : (ಅಸಂಘಟಿತ ವಲಯ):**<br><br>ಯೋಜನೆಯ ವಿವರಗಳನ್ನು **ಅನುಬಂಧ-01** ರಲ್ಲಿ ಒದಗಿಸಿದೆ.<br><br>**ಕರ್ನಾಟಕ ರಾಜ್ಯ ಅಸಂಘಟಿತ ಕಾರ್ಮಿಕರ ಸಾಮಾಜಿಕ ಭದ್ರತಾ ಮಂಡಳಿ( ಅಸಂಘಟಿತ ವಲಯ):-**<br>(1) **ಕರ್ನಾಟಕ ರಾಜ್ಯ ಖಾಸಗಿ ವಾಣಿಜ್ಯ ಸಾರಿಗೆ ಕಾರ್ಮಿಕರ ಅಪಘಾತ ಪರಿಹಾರ ಯೋಜನೆ:-**<br>(ಅ) ಅಪಘಾತ ಪರಿಹಾರ ಸೌಲಭ್ಯ : |

|  |  |  |
|---|---|---|
|  |  | (ಆ) ಶೈಕ್ಷಣಿಕ ಧನ ಸಹಾಯ :<br>(ಇ) ಸ್ಮಾರ್ಟ್ ಕಾರ್ಡ್ ಸೌಲಭ್ಯ :<br>(2) ಅಂಬೇಡ್ಕರ್ ಕಾರ್ಮಿಕ ಸಹಾಯ ಹಸ್ತ ಯೋಜನೆ:-<br>(ಅ) ಸ್ಮಾರ್ಟ್ ಕಾರ್ಡ್<br>(ಆ) ಕಾರ್ಮಿಕ ಸನ್ಮಾನ್ ಯೋಜನೆ.<br>(3) ಅಗಸ ಮತ್ತು ಕ್ಷೌರಿಕರಿಗೆ ಕೋವಿಡ್-19ರ ವಿಶೇಷ ಪ್ಯಾಕೇಜ್.<br>**ಕರ್ನಾಟಕ ರಾಜ್ಯ ಅಸಂಘಟಿತ ಕಾರ್ಮಿಕರ ಸಾಮಾಜಿಕ ಭದ್ರತಾ ಮಂಡಳಿ: ( ಸಂಘಟಿತ ವಲಯ)**<br>(ಅ) ಆಶಾದೀಪ ಯೋಜನೆ. |
| ಆ) | ಸಂಘಟಿತ ಹಾಗೂ ಅಸಂಘಟಿತ ಕಾರ್ಮಿಕರೆಂದು ಯಾವ ಮಾನದಂಡದ ಆಧಾರದಲ್ಲಿ ಗುರುತಿಸಲಾಗಿರುತ್ತದೆ; ಅವರುಗಳ ಸಂಖ್ಯೆ ಎಷ್ಟು? (ಪೂರ್ಣ ವಿವರ ನೀಡುವುದು) | 1. ಕರ್ನಾಟಕ ಕಾರ್ಮಿಕ ಕಲ್ಯಾಣ ಮಂಡಳಿಯಲ್ಲಿ<br>**ಈ ಕೆಳಕಂಡ ಕಾರ್ಮಿಕರನ್ನು ಸಂಘಟಿತ ಕಾರ್ಮಿಕರೆಂದು ಗುರುತಿಸಲಾಗಿದೆ..**<br>1) ಕರ್ನಾಟಕ ಸೊಸೈಟಿ ನೊಂದಣಿ ಅಧಿನಿಯಮ 1960ರ ಮೇರೆಗೆ ನೊಂದಾಯಿತ ಸಂಘಗಳಲ್ಲಿ ಕೆಲಸ ನಿರ್ವಹಿಸುವ ಕಾರ್ಮಿಕರು.<br>2) 1948ರ ಕಾರ್ಖಾನೆ ಅಧಿನಿಯಮದಡಿಯಲ್ಲಿ ನೊಂದಾಯಿತ ಕಾರ್ಖಾನೆಗಳಲ್ಲಿ ಕೆಲಸ ನಿರ್ವಹಿಸುವ ಕಾರ್ಮಿಕರು.<br>3) ಕರ್ನಾಟಕ ಅಂಗಡಿ ಮತ್ತು ವಾಣಿಜ್ಯ ಸಂಸ್ಥೆ ಕಾಯ್ದೆ 1961 ರಡಿಯಲ್ಲಿ ನೊಂದಾಯಿತ ಸಂಸ್ಥೆಗಳಲ್ಲಿ 50 ಕ್ಕಿಂತ ಹೆಚ್ಚು ನೌಕರರು ಇರುವಂತಹ ಸಂಸ್ಥೆಗಳಲ್ಲಿ ಕೆಲಸ ನಿರ್ವಹಿಸುವ ಕಾರ್ಮಿಕರು.<br>4) ಮೋಟಾರು ಸಾರಿಗೆ ಸಂಸ್ಥೆಗಳಲ್ಲಿ ಕಾರ್ಯನಿರ್ವಹಿಸುವ ಕಾರ್ಮಿಕರು,<br>5) ಪ್ಲಾಂಟೇಶನ್ ಗಳಲ್ಲಿ ಕೆಲಸ ನಿರ್ವಹಿಸುವ ಕಾರ್ಮಿಕರು,<br>6) ವರ್ಕಷಾಪ್ ಗಳಲ್ಲಿ ಕೆಲಸ ನಿರ್ವಹಿಸುವ ಕಾರ್ಮಿಕರು..<br>7) ಇ.ಎಸ್.ಐ ಹಾಗು ಕಾರ್ಮಿಕರ ಭವಿಷ್ಯ ನಿಧಿ ವ್ಯಾಪ್ತಿಗೆ ಒಳಪಟ್ಟ ಕಾರ್ಮಿಕರು.<br>ಮೇಲೆ ತಿಳಿಸಿದ ವರ್ಗಗಳಲ್ಲಿ ಒಟ್ಟು 41,31,603 ಸಂಘಟಿತ ಕಾರ್ಮಿಕರು ಕಾರ್ಯ ನಿರ್ವಹಿಸುತ್ತಿರುತ್ತಾರೆ. (ವಿವರ ಅನುಬಂಧ-02)<br>**ಈ ಕೆಳಕಂಡ ಕಾರ್ಮಿಕರನ್ನು ಅಸಂಘಟಿತ ಕಾರ್ಮಿಕರೆಂದು ಗುರುತಿಸಲಾಗಿದೆ:**<br>ಕೇಂದ್ರ ಸರ್ಕಾರವು 2008 ರಲ್ಲಿ ಜಾರಿಗೆ ತಂದಿರುವ ಅಸಂಘಟಿತ ಕಾರ್ಮಿಕರ ಸಾಮಾಜಿಕ ಭದ್ರತಾ ಕಾಯ್ದೆಯ |

